# KARNATAKA GANDHI SMARAKA NIDHI (R.)

## Golden Jubilee

# COMMEMORATION VOLUME

# ಕರ್ನಾಟಕ ಗಾಂಧಿ ಸ್ಮಾರಕ ನಿಧಿ (ರಿ.)









# ಸುವರ್ಣ ಮಹೋತ್ಸವ

# ಸ್ಮರಣ ಸಂಚಿಕೆ

## 2010-2011

# KARNATAKA GANDHI SMARAKA NIDHI (R.)

## Golden Jubilee

# COMMEMORATION VOLUME

# ಕರ್ನಾಟಕ ಗಾಂಧಿ ಸ್ಮಾರಕ ನಿಧಿ (ರಿ.)









## ಸುವರ್ಣ ಮಹೋತ್ಸವ

# ಸ್ಮರಣ ಸಂಚಿಕೆ

## 2010-2011

# Golden Jubilee Commemoration Valume 2010-11

*Edited by :*
**Prof. O. Anantharamaiah**

*Published by :*
**Dr. H. Srinivasaiah**
President Gandhi Smaraka Nidhi
Kumara Park East, Bangalore - 560 001.

*First Edition :* **April 2012**

*Paper :* **Maplitho 70 GSM**

*Price :* **Rs. 100**

*No. of Copies :* **1000**

*Pages :* **220**

*Printers :*
***Excellent Printers***
No. 83/2, 1st Main Road, Opp. Reheja Park,
Govindaraj Nagar, Bangalore - 40.



# ಪರಿವಿಡಿ

| Sl. No. | ENGLISH SECTION | Page No. |
|---|---|---|






RAJ BHAVAN
BANGALORE

No. GS 51 MSG 2012
March 24th 2012

***MESSAGE***

I am delighted to know that "**Karnataka Gandhi Smaraka Nidhi, Kumara Park East, Bangalore**" is celebrating its "**Golden Jubilee Year**" and bringing out **"Golden Jubilee Year Commemoration Volume"** on 6th April 2012, to commemorate this event.

I congratulate the President and office bearers of Karnataka Gandhi Smarak Nidhi on this occasion and I wish the **"Function"** a grand success.

(H.R. BHARDWAJ)



**ಡಿ. ವಿ. ಸದಾನಂದ ಗೌಡ**
ಮುಖ್ಯಮಂತ್ರಿ



ವಿಧಾನ ಸೌಧ
ಬೆಂಗಳೂರು - ೫೬೦ ೦೦೧

ದಿನಾಂಕ ........................

**<u>ಸಂದೇಶ</u>**

ಬೆಂಗಳೂರಿನ ಕುಮಾರಪಾರ್ಕ್ ಪೂರ್ವದಲ್ಲಿರುವ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆಯ ಸ್ಮರಣಸಂಚಿಕೆಯನ್ನು 06-04-2012ರಂದು ಬಿಡುಗಡೆ ಮಾಡುತ್ತಿರುವುದು ಸಂತಸದ ಸಂಗತಿ.

ರಾಷ್ಟ್ರಪಿತ ಬಾಪೂಜಿಯವರ ಅನನ್ಯ ಸಾಧನಾಪಥದ ವಿವಿಧ ಆಯಾಮಗಳನ್ನು ಜನಸಮುದಾಯಕ್ಕೆ ತಲುಪಿಸುವ ನಿಟ್ಟಿನಲ್ಲಿ ಕಳೆದ ಐದು ದಶಕಗಳಿಂದ ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅನುಷ್ಠಾನಮಾಡಿರುವ ಕಾರ್ಯಕ್ರಮಗಳು ಶ್ಲಾಘನೀಯ. ಹಾಲಿ ಬಿಡುಗಡೆಯಾಗುತ್ತಿರುವ ಸ್ಮರಣಸಂಚಿಕೆಯು ಉಪಯುಕ್ತ ಮಾಹಿತಿಗಳೊಂದಿಗೆ ಸಂಗ್ರಹಯೋಗ್ಯ ಸಂಚಿಕೆಯಾಗಿ ಮೂಡಿಬರಲೆಂದು ಆಶಿಸುತ್ತೇನೆ.

ಸಂಸ್ಥೆಗೆ ಹಾಗೂ ಸ್ಮರಣಸಂಚಿಕೆಗೆ ಸರ್ವರೀತಿಯಲ್ಲಿಯೂ ಶುಭ ಹಾರೈಕೆಗಳು.

(ಡಿ.ವಿ. ಸದಾನಂದ ಗೌಡ)

ಪ್ರೊ. ಓ. ಅನಂತರಾಮಯ್ಯ,
ಸಂಚಾಲಕರು,
ಸುವರ್ಣಮಹೋತ್ಸವ ವರ್ಷಾಚರಣೆ ಸ್ಮರಣಸಂಚಿಕೆ ಸಮಿತಿ,
ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಕುಮಾರಪಾರ್ಕ್ ಪೂರ್ವ,
ಬೆಂಗಳೂರು - 560 001.









ಮಾಜಿಮುಮಂ/25/2012

ದಿನಾಂಕ 24/03/2012

## ಸಂದೇಶ

ಕರ್ನಾಟಕ ಗಾಂಧೀ ಸ್ಮಾರಕ ನಿಧಿ (ರಿ), ಬೆಂಗಳೂರು, 2011 ರ ಅಕ್ಟೋಬರ್ ಮಾಹೆಯಲ್ಲಿ ಸ್ವರ್ಣಮಹೋತ್ಸವವನ್ನು ಅದ್ದೂರಿಯಾಗಿ ಆಚರಿಸಿಕೊಂಡು, ಗಾಂಧಿಯವರ ಜೀವನ, ತತ್ವ, ಆದರ್ಶಗಳು ಕುರಿತು ಯುವಪೀಳಿಗೆಯಲ್ಲಿ ಜಾಗೃತಿಯನ್ನುಂಟು ಮಾಡಿರುವುದು ನನಗೆ ಅತೀವ ಸಂತೋಷವನ್ನು ತಂದಿದೆ. ಗಾಂಧಿಯವರ ರಚನಾತ್ಮಕ ಕಾರ್ಯಚಟುವಟಿಕೆಗಳಲ್ಲಿ ತೊಡಗಿಸಿಕೊಂಡು, ಅವರಿಗೆ ಪ್ರಿಯವಾದ ಜನಕಲ್ಯಾಣ ಕಾರ್ಯಕ್ರಮ, ತತ್ವಾದರ್ಶಗಳನ್ನು ಪ್ರಚುರಪಡಿಸುವುದೇ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಉದ್ದೇಶವಾಗಿದೆ.

ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆಯ ಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡುತ್ತಿರುವುದು ಅತ್ಯಂತ ಔಚಿತ್ಯಪೂರ್ಣವಾಗಿದೆ. ಸುಪ್ರಸಿದ್ಧ ಸ್ವಾತಂತ್ರ್ಯಯೋಧರು, ಗಾಂಧೀವಾದಿಗಳು, ಸರ್ವೋದಯ ಕಾರ್ಯಕರ್ತರು, ಇತರ ಬುದ್ಧಿಜೀವಿಗಳ ಉತ್ತಮ ಲೇಖನ ಮತ್ತು ಬರಹಗಳನ್ನೊಳಗೊಂಡು ಇಂದಿನ ಯುವಪೀಳಿಗೆಗೆ ಒಂದು ಮಾರ್ಗದರ್ಶಿ ಸಂಚಿಕೆಯಾಗಲೆಂದು ಹಾರೈಸುತ್ತೇನೆ.

ಸ್ಮರಣ ಸಂಚಿಕೆಗೆ ನನ್ನ ಶುಭಕಾಮನೆಗಳು.

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್. ಯಡಿಯೂರಪ್ಪ)



**ಹೆಚ್.ಡಿ. ಕುಮಾರಸ್ವಾಮಿ**
ಲೋಕಸಭಾ ಸದಸ್ಯರು
ಬೆಂಗಳೂರು ಗ್ರಾಮಾಂತರ



ನಂ. 286, 3ನೇ ಮುಖ್ಯ ರಸ್ತೆ, 3ನೇ ಫೇಸ್
ಜೆ. ಪಿ. ನಗರ, ಬೆಂಗಳೂರು – 560 078
ಫೋನ್ : 080–23619909, 26582230

ದಿನಾಂಕ: 30.03.2012

**ಶುಭ ಸಂದೇಶ**

ಕರ್ನಾಟಕ ಗಾಂಧೀ ಸ್ಮಾರಕ ನಿಧಿಯು 50 ವರ್ಷಗಳಿಂದ ಗಾಂಧೀ ತತ್ವ ಪ್ರಚಾರದಲ್ಲಿ ನಿರಂತರವಾಗಿ ತೊಡಗಿಸಿಕೊಂಡು ಅರ್ಥಪೂರ್ಣವಾದ 50 ಸಂವತ್ಸರಗಳನ್ನು ಪೂರೈಸಿದೆ. ಅದರ ಅಂಗವಾಗಿ ತನ್ನ ಸುವರ್ಣ ಮಹೋತ್ಸವವನ್ನು ಆಚರಿಸಿಕೊಂಡಿರುವುದು ಹೆಮ್ಮೆಯ ವಿಚಾರವಾಗಿದೆ. ಈ ಸಂದರ್ಭದಲ್ಲಿ ಹೊರತರುತ್ತಿರುವ ಸ್ಮರಣ ಸಂಚಿಕೆಯು ಉತ್ತಮವಾಗಿ ಮೂಡಿ ಬರಲೆಂದು ಅದು ನಾಡಿನ ಜನತೆಯ ಮೇಲೆ ಉತ್ತಮ ಪರಿಣಾಮ ಬೀರಲೆಂದು ಹಾರೈಸುತ್ತೇನೆ.

ನಿಮ್ಮ ಸ್ಮರಣ ಸಂಚಿಕೆಗೆ ನನ್ನ ಶುಭಾಶಯಗಳು

(ಹೆಚ್. ಡಿ. ಕುಮಾರಸ್ವಾಮಿ)

ಡಾ. ಹೊ. ಶ್ರೀನಿವಾಸಯ್ಯ
ಅಧ್ಯಕ್ಷರು
ಕರ್ನಾಟಕ ಗಾಂಧಿ ಸ್ಮಾರಕ ನಿಧಿ
ಗಾಂಧಿ ಭವನ
ಬೆಂಗಳೂರು– 560001






ಡಿ. ವೀರೇಂದ್ರ ಹೆಗ್ಗಡೆಯವರು



ಶ್ರೀ ಧರ್ಮಸ್ಥಳ - 574 216
ದಕ್ಷಿಣ ಕನ್ನಡ, ಕರ್ನಾಟಕ
✆ : ಕಛೇರಿ : (08256) 277121
Fax : 277116
E-Mail : dvheggade@hotmail.com

ತಾ:27.2.2012

**ಸಂದೇಶ**

ಬೆಂಗಳೂರು ಗಾಂಧೀ ಸ್ಮಾರಕ ನಿಧಿ (ರಿ) ಸಂಸ್ಥೆಯು 50 ವರ್ಷಗಳ ಸಾರ್ಥಕ ಸಾಮಾಜಿಕ ಸೇವೆಯನ್ನು ಸಲ್ಲಿಸಿದ್ದು, ಸುವರ್ಣ ಮಹೋತ್ಸವವನ್ನು ಆಚರಿಸಲಿರುವ ವಿಚಾರ ತಿಳಿದು ಸಂತೋಷವಾಯಿತು.

ಈ ಶುಭ ಸಂದರ್ಭದ ಸವಿನೆನಪಿಗಾಗಿ ವಿಶೇಷ ಸ್ಮರಣ ಸಂಚಿಕೆಯನ್ನು ಪ್ರಕಟಿಸಲಿರುವುದು ಔಚಿತ್ಯಪೂರ್ಣವಾಗಿದೆ. ಸಂಸ್ಥೆಯ ಪ್ರಗತಿ ಸಾಧನೆ ಹಾಗೂ ಕಾರ್ಯ ಚಟುವಟಿಕೆಗಳನ್ನು ಪ್ರತಿಬಿಂಬಿಸಬಲ್ಲ ವಿವಿಧ ವಿಚಾರಪೂರ್ಣ ಮೌಲಿಕ ವಿಷಯಗಳನ್ನೊಳಗೊಂಡ ಲೇಖನಗಳಿಂದೊಡಗೂಡಿ ಸಂಚಿಕೆ ಆಕರ್ಷಕವಾಗಿ ಪ್ರಕಟವಾಗಲೆಂದು ಹಾರೈಸುತ್ತೇನೆ.

ಸಂಸ್ಥೆಯ ಪ್ರಗತಿಗಾಗಿ ಶ್ರಮಿಸಿರುವ ಆಡಳಿತ ಮಂಡಳಿಯ ಪದಾಧಿಕಾರಿಗಳನ್ನು ಹಾಗೂ ಎಲ್ಲಾ ಸಕ್ರಿಯ ಸದಸ್ಯರನ್ನು ಅಭಿನಂದಿಸುತ್ತಾ, ಮುಂದೆಯೂ ಕೂಡಾ ಈ ಸಂಸ್ಥೆಯು ಉತ್ತರೋತ್ತರ ಪ್ರಗತಿ ಸಾಧಿಸಿ ಕೀರ್ತಿ ಗಳಿಸುವಂತಾಗಲೆಂದು ಆಶಿಸುತ್ತೇನೆ.

ಈ ದಿಸೆಯಲ್ಲಿ ನಿಮ್ಮೆಲ್ಲ ಪ್ರಯತ್ನ-ಪರಿಶ್ರಮ ಸಫಲವಾಗುವಂತೆ ಶ್ರೀ ಮಂಜುನಾಥ ಸ್ವಾಮಿ ಹರಸಲೆಂದು ಪ್ರಾರ್ಥಿಸುತ್ತೇನೆ.

ಡಿ. ವೀರೇಂದ್ರ ಹೆಗ್ಗಡೆ.

(ಡಿ. ವೀರೇಂದ್ರ ಹೆಗ್ಗಡೆಯವರು)









ॐ

**RAMAKRISHNA MATH**
**BULL TEMPLE ROAD**
**BANGALORE 560 019**
✆ 2661 3149, 2667 1010
E-mail : rkmblr@dataone.in
office@rkmathbangalore.org

March 23, 2012

ಶ್ರೀ ಅನಂತರಾಮಯ್ಯನವರಿಗೆ,

ನಿಮ್ಮ ದಿನಾಂಕ ೧೫.೦೩.೨೦೧೨ರ ಪತ್ರ ನಮಗೆ ತಲುಪಿದೆ.

ಕಳೆದ ಅರ್ಧಶತಮಾನದಲ್ಲಿ ಪ್ರಪಂಚದಲ್ಲಿಯೂ, ಸಾಮಾನ್ಯಜನ ಜೀವನದಲ್ಲಿಯೂ ಅನೇಕ ಬದಲಾವಣೆಗಳು ಹರಿದುಬಂದು. ತತ್ತ್ವಗಳೂ, ಆದರ್ಶಗಳೂ ಸಾಕಷ್ಟು ಕಡಿಮೆಯಾಗಿವೆ. ಈ ಬದಲಾಗಿರುವ ಸಂದರ್ಭದಲ್ಲಿ ಗಾಂಧೀಜಿ ಯವರ ಜೀವನ, ತತ್ತ್ವ ಮತ್ತು ಆದರ್ಶಗಳನ್ನು ಪಾಲಿಸುವುದರಲ್ಲಿ ದೊರೆಯುವ ಅನುಕೂಲಗಳನ್ನು ಜನಸಾಮಾನ್ಯರಿಗೆ ಮನದಟ್ಟುಮಾಡುವಲ್ಲಿ ಗಾಂಧೀ ಭವನದ ಪಾತ್ರ ಬಹುದೊಡ್ಡದು.

ಮೇಲ್ಕಂಡ ಸಂಸ್ಥೆಯು ಈಗ ಸುವರ್ಣ ಮಹೋತ್ಸವದ ಸ್ಮರಣಸಂಚಿಕೆಯನ್ನು ಹೊರತರಲಿರುವುದು ಸಂತೋಷದ ಸಂಗತಿ. ಮುಂಬರುವ ವರ್ಷಗಳಲ್ಲಿಯೂ, ಸಂಸ್ಥೆಯು ಮಾರ್ಗದರ್ಶನ ನೀಡಲೆಂದು ಭಗವಂತನಲ್ಲಿ ನಮ್ಮ ಪ್ರಾರ್ಥನೆ.

ಭಗವತ್ಸೇವೆಯಲ್ಲಿ ನಿಮ್ಮವ,

ಸ್ವಾಮಿ ಹರ್ಷಾನಂದ

ಸ್ವಾಮೀ ಹರ್ಷಾನಂದ

ಗೆ,

ಸಂಚಾಲಕರು

ಗಾಂಧೀ ಭವನ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ (ರಿ)

ಕುಮಾರಪಾರ್ಕ್ ಪೂರ್ವ ಬೆಂಗಳೂರು - ೧







ಓಂ

॥ ಶ್ರೀ ಶಿವರಾತ್ರೀಶ್ವರಾಯ ನಮಃ ॥

**ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು**

ಜಗದ್ಗುರು ಶ್ರೀ ವೀರಸಿಂಹಾಸನ ಮಹಾಸಂಸ್ಥಾನ ಮಠ, ಸುತ್ತೂರು ಶ್ರೀಕ್ಷೇತ್ರ - 571 129, ಮೈಸೂರು ಜಿಲ್ಲೆ

ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಠ (ಮೈಸೂರು ಶಾಖೆ), ಮೈಸೂರು - 570 025


27 ಮಾರ್ಚ್ 2012

**ಶುಭ ಸಂದೇಶ**

ಬೆಂಗಳೂರಿನಲ್ಲಿರುವ ಗಾಂಧೀ ಭವನವು ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವವನ್ನು ಅಕ್ಟೋಬರ್ 2011 ರಲ್ಲಿ ಪ್ರಾರಂಭಿಸಿ ಇಡೀ ವರ್ಷ ಗಾಂಧಿ ವಿಚಾರಧಾರೆಗೆ ಸಂಬಂಧಿಸಿದಂತೆ ವಿಚಾರಗೋಷ್ಠಿಗಳು, ಕಾರ್ಯಾಗಾರಗಳು, ವಿಶೇಷೋಪನ್ಯಾಸಗಳನ್ನು ಏರ್ಪಡಿಸಿ ಗಾಂಧೀ ತತ್ವಪ್ರಚಾರದಲ್ಲಿ ತೊಡಗಿಕೊಂಡು ರಚನಾತ್ಮಕ ಕೆಲಸ ಮಾಡಿರುವುದು ಸಂತೋಷದ ಸಂಗತಿ. ಈ ಎಲ್ಲ ಚಟುವಟಿಕೆಗಳಿಗೂ ಕಿರೀಟವನ್ನಿಡುವಂತೆ ಇದೇ ಏಪ್ರಿಲ್‌ನಲ್ಲಿ ಸುವರ್ಣ ಮಹೋತ್ಸವ ವರ್ಷಾಚರಣೆಯ ಸಮಾರಂಭವನ್ನು ಏರ್ಪಡಿಸಿರುವುದು ಔಚಿತ್ಯಪೂರ್ಣ.

ಗಾಂಧೀ ಒಬ್ಬ ವ್ಯಕ್ತಿಯಲ್ಲ, ಅದೊಂದು ಶಕ್ತಿ ಎಂಬುದು ಇಂದು ಜಗತ್ತು ಒಪ್ಪಿರುವ ಸತ್ಯ. ದುರ್ಬಲರಲ್ಲಿ ಬಲವನ್ನು ತುಂಬಿ, ಶಾಂತಿ ಅಹಿಂಸೆ ಸತ್ಯಾಗ್ರಹವೆಂಬ ಸೌಮ್ಯಾಯುಧರತ್ನಗಳನ್ನು ಜಗತ್ತಿಗೆ ಪರಿಚಯಿಸಿದ ಪುಣ್ಯಜೀವಿ ರಾಷ್ಟ್ರಪಿತ ಮಹಾತ್ಮ ಗಾಂಧಿ. ಬದುಕಿದ್ದ ಗಾಂಧಿಯವರಿಗಿಂತಲೂ ಕಣ್ಣೆದುರಿಗಿಲ್ಲದ ಗಾಂಧಿ ಜಗತ್ತಿನಲ್ಲಿ ಇನ್ನೂ ಪ್ರಭಾವಶಾಲಿಯಾಗಿದ್ದಾರೆ, ಇನ್ನೂ ಪ್ರಸ್ತುತವಾಗಿದ್ದಾರೆ. ಇಂದು 'ಗಾಂಧಿವಾದ' ಅಥವಾ 'ಗಾಂಧೀ ತತ್ತ್ವ' ವಿವಿಧ ರೂಪಗಳಲ್ಲಿ ಜಗತ್ತನ್ನಾವರಿಸಿದೆ. ಗಾಂಧಿವಾದದ ಅಧ್ಯಯನ ಇಂದು ದೇಶ-ವಿದೇಶಗಳ ಬಹಳಷ್ಟು ವಿಶ್ವವಿದ್ಯಾನಿಲಯಗಳಲ್ಲಿ ಗಂಭೀರವಾದ ಅಧ್ಯಯನದ ವಿಷಯವಾಗಿದೆ. ಅಸತ್ಯ, ದುರಾಡಳಿತ, ಭ್ರಷ್ಟಾಚಾರ ಇತ್ಯಾದಿಗಳನ್ನು ಪರಿಣಾಮಕಾರಿಯಾಗಿ ಹೋಗಲಾಡಿಸಲು ಒಂದು ಅಸ್ತ್ರವಾಗಿ ಅಥವಾ ಪ್ರತೀಕವಾಗಿ ಇಂದು 'ಗಾಂಧೀಗಿರಿ' ಎಂಬ ಮಾತು ಚಾಲನೆಗೆ ಬಂದಿದೆ. "ಗಾಂಧಿಯಂಥವರು ಬದುಕಿದ್ದ ಕಾಲದಲ್ಲಿ ನಾವೂ ಇದ್ದೆವು ಎಂಬುದೇ ನಮ್ಮ ಸೌಭಾಗ್ಯ" ಎಂಬ ಪ್ರಸಿದ್ಧ ಸಾಹಿತಿಯೊಬ್ಬರ ಅನಿಸಿಕೆಯು ಎಲ್ಲರೂ ಒಪ್ಪುವಂತಹ ಮಾತೇ ಆಗಿದೆ.

ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆಯ ಐತಿಹಾಸಿಕ ಸಂದರ್ಭವನ್ನು ಶಾಶ್ವತೀಕರಿಸುವ ಸಲುವಾಗಿ ಹೊರತರುತ್ತಿರುವ "ಸ್ಮರಣ ಸಂಚಿಕೆ"ಯು ಸುಪ್ರಸಿದ್ಧ ಗಾಂಧಿವಾದಿಗಳು, ಸಾಹಿತಿಗಳು, ಶಿಕ್ಷಣ-ಸಂಸ್ಕೃತಿ ಕ್ಷೇತ್ರಗಳ ತಜ್ಞರುಗಳ ಲೇಖನಗಳಿಂದ ಕೂಡಿ ಭಗವತ್ಕೃಪೆಯಿಂದ ಒಂದು ಆಕರಗ್ರಂಥವಾಗಿ ಹೊರಬರಲೆಂದು ಹಾರೈಸುತ್ತೇವೆ.

ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮಿ
22/3/12


✆ ಮಠ (ಮೈಸೂರು) : (0821) 2548220/2548221 * ಫ್ಯಾಕ್ಸ್ 2548219 ಸುತ್ತೂರು : (08221) 232223/232224

ಮಹಾವಿದ್ಯಾಪೀಠ : (0821) 2548201 * ಫ್ಯಾಕ್ಸ್ : 2548218

ಸುತ್ತೂರು ಸದನ, ಬೆಂಗಳೂರು : (080) 22970101 * ಫ್ಯಾಕ್ಸ್ : 22970100 * e-mail : jssashm@sancharnet.in






# ಅಧ್ಯಕ್ಷರ ನುಡಿ

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಕಳೆದ 5 ದಶಕಗಳಿಂದಲೂ ಮಹಾತ್ಮಗಾಂಧೀಜಿಯವರ ತತ್ವಾದರ್ಶಗಳನ್ನು ಜನಮಾನಸದಲ್ಲಿ ಬಿತ್ತುವ ಹಲವಾರು ಕಾರ್ಯಕ್ರಮಗಳನ್ನು ನಡೆಸಿ 2010–11ನೇ ಸಾಲಿನಲ್ಲಿ ಸುವರ್ಣ ಮಹೋತ್ಸವವನ್ನು ಕಂಡಿತು. ಆ ನೆನಪನ್ನು ಸದಾ ಚಿರಸ್ಥಾಯಿಯಾಗಿಸಲು ಮತ್ತು ಈ ವರ್ಷವನ್ನು ಸುವರ್ಣಮಹೋತ್ಸವ ವರ್ಷವನ್ನಾಗಿ ಆಚರಿಸಲು ನಿರ್ಧರಿಸಿ ನಾಡೋಜ ಡಾ॥ ಪಾಟೀಲ ಪುಟ್ಟಪ್ಪ ಮತ್ತು ಇತರ ಗಣ್ಯರನ್ನೊಳಗೊಂಡ ಸಮಿತಿಯನ್ನು ನೇಮಿಸಿತು. ಸಮಿತಿ ಸಭೆ ಸೇರಿ ಈ ವರ್ಷವನ್ನು ಸುವರ್ಣಮಹೋತ್ಸವ ವರ್ಷಾಚರಣೆಯನ್ನಾಗಿ ವರ್ಷವಿಡೀ ಆಚರಿಸಬೇಕು ಮತ್ತು ಈ ನೆನಪನ್ನು ಹಸಿರಾಗಿಸುವ ಉದ್ದೇಶದಿಂದ ಒಂದು ನೆನಪಿನ ಸಂಚಿಕೆ ಹಾಗೂ ಒಂದು ಸುವರ್ಣ ಮಹೋತ್ಸವ ನೆನಪಿನ ಗಾಂಧೀಕೇಂದ್ರವನ್ನು ಸ್ಥಾಪಿಸಬೇಕೆಂದು ಸಮಿತಿ ನಿರ್ಧರಿಸಿತು.

ಈ ಕಾರ್ಯ ಸಫಲವಾಗಲು ಕೆಲವು ಸಾಮಾಜಿಕ ಸಂಸ್ಥೆಗಳೊಡಗೂಡಿ ರಾಜ್ಯಾದ್ಯಂತ ಈ ಮಹೋತ್ಸವವನ್ನು ಆಚರಿಸಬೇಕೆಂದು ತೀರ್ಮಾನಿಸಿತು. ಈ ತೀರ್ಮಾನದಂತೆ ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಕಾನೂನು ಕಾಲೇಜುಗಳು, ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಈ ಕಾರ್ಯಕ್ಕೆ ಸಹಕಾರ ನೀಡಲು ಮುಂದೆ ಬಂದವು. ಇದರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ನಿಕಟಪೂರ್ವ ಅಧ್ಯಕ್ಷರಾದ ಶ್ರೀ ನಲ್ಲೂರು ಪ್ರಸಾದ್ ಅವರು ರಾಜ್ಯದ ಎಲ್ಲಾ ಜಿಲ್ಲಾ ಹಾಗೂ ತಾಲ್ಲೂಕು ಕೇಂದ್ರಗಳ ಅಧ್ಯಕ್ಷರು ಹಾಗೂ ಪದಾಧಿಕಾರಿಗಳಿಗೆ ಸುವರ್ಣ ಮಹೋತ್ಸವ ವರ್ಷಾಚರಣೆಗೆ ಸಹಕಾರ ನೀಡುವಂತೆ ಪತ್ರ ಬರೆದು ವಿನಂತಿಸಿದರು. ಅವರ ಸಹಕಾರದಿಂದ ರಾಜ್ಯದ ಎಲ್ಲಾ ಜಿಲ್ಲಾ ಹಾಗೂ ತಾಲ್ಲೂಕು ಕೇಂದ್ರಗಳಲ್ಲೂ ಕಾರ್ಯಕ್ರಮ ಆಚರಿಸಲು ಸಾಧ್ಯವಾಯಿತು. ಸಹಕಾರಕ್ಕಾಗಿ ಡಾ॥ ನಲ್ಲೂರು ಪ್ರಸಾದ್ ಅವರಿಗೂ, ಎಲ್ಲಾ ಜಿಲ್ಲಾ ಹಾಗೂ ತಾಲ್ಲೂಕು ಕೇಂದ್ರದ ಅಧ್ಯಕ್ಷರು ಹಾಗೂ ಪದಾಧಿಕಾರಿಗಳಿಗೂ ಕೃತಜ್ಞತೆಗಳು. ನಮ್ಮ ಈ ಆಚರಣೆಗೆ ಸಹಕಾರವನ್ನು ನೀಡಿ ನಮ್ಮೊಡನೆ ಹಲವಾರು ಕಾರ್ಯಕ್ರಮಗಳಲ್ಲಿ ಸಹಭಾಗಿಯಾಗಿ ಉಪನ್ಯಾಸ ನೀಡಿದ ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ॥ ಜೆ. ಎಸ್. ಪಾಟೀಲರಿಗೆ, ಅವರ ಸಿಬ್ಬಂದಿ ವರ್ಗದವರಿಗೆ ಮತ್ತು ಈ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಬರುವ ಎಲ್ಲಾ ಕಾಲೇಜುಗಳ ಪ್ರಾಂಶುಪಾಲರಿಗೂ ವಂದನೆ ಅರ್ಪಿಸುತ್ತೇನೆ. ನಮಗೆ ಬೆನ್ನೆಲುಬಾಗಿ ನಿಂತ ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿಯ ಅಧ್ಯಕ್ಷರಾದ ಶ್ರೀ ಸಚ್ಚಿದಾನಂದ ಹೆಗಡೆಯವರಿಗೆ ಮತ್ತು ಕಾರ್ಯದರ್ಶಿಯಾದ ಶ್ರೀ ಎಚ್. ಬಿ. ದಿನೇಶ್ ಅವರಿಗೂ ನನ್ನ ವಂದನೆಗಳು.

ಸುವರ್ಣ ಮಹೋತ್ಸವ ಕಾರ್ಯಕ್ರಮಗಳಿಗಾಗಿ ಮತ್ತು ಇದರ ಸಂಬಂಧಿ ಕಾರ್ಯಗಳಿಗಾಗಿ ನಮಗೆ ಧನಸಹಾಯದ ಅಗತ್ಯವಿತ್ತು. ಈ ಸಹಾಯಕ್ಕಾಗಿ ಸುವರ್ಣ ಮಹೋತ್ಸವದ ಉದ್ಘಾಟನಾ ಸಮಾರಂಭಕ್ಕೆ ಆಗಮಿಸಿದ್ದ ಅಂದಿನ ಮುಖ್ಯಮಂತ್ರಿಗಳೂ, ಉದಾರಚರಿತರೂ ಆದ ಶ್ರೀ ಬಿ. ಎಸ್. ಯಡಿಯೂರಪ್ಪನವರಿಗೆ ಮನವಿ ಅರ್ಪಿಸಲಾಯಿತು. ಈ ಮನವಿಗೆ ಸ್ಪಂದಿಸಿದ ಮುಖ್ಯಮಂತ್ರಿಗಳು ಈ ಕಾರ್ಯಕ್ಕಾಗಿ ಸ್ಥಳದಲ್ಲೇ ಸುವರ್ಣ ಮಹೋತ್ಸವ ಆಚರಣೆಗೆ ಒಂದು ಕೋಟಿ ರೂ.ಗಳನ್ನು ಹಾಗೂ ಸುವರ್ಣ ಮಹೋತ್ಸವ ನೆನಪಿನ ಗಾಂಧೀಕೇಂದ್ರ ನಿರ್ಮಾಣಕ್ಕಾಗಿ ಮೂರು ಕೋಟಿಗಳನ್ನು ಕನ್ನಡ ಸಂಸ್ಕೃತಿ ಇಲಾಖೆಯ ಮೂಲಕ ಬಿಡುಗಡೆ ಮಾಡಿ ಆದೇಶ




# ಅಧ್ಯಕ್ಷರ ನುಡಿ

ನೀಡಿದರು. ಈ ಸಹಾಯ ಹಾಗೂ ಸಹಕಾರಕ್ಕಾಗಿ ಅವರಿಗೆ ಮನಃಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಈ ಸಹಾಯವನ್ನು ಆದಷ್ಟು ಶೀಘ್ರವಾಗಿ ಬಿಡುಗಡೆ ಮಾಡಿ ಸಹಾಯ ಮಾಡಿದ ಅಂದಿನ ಕಾರ್ಯದರ್ಶಿಯಾಗಿದ್ದ ಶ್ರೀ ಜಯರಾಮರಾಜೇಅರಸ್ ಮತ್ತು ಅಂದಿನ ನಿರ್ದೇಶಕರು, ಇಂದಿನ ಆಯುಕ್ತರಾದ ಡಾ॥ ಮನುಬಳಿಗಾರ್ ಅವರನ್ನು ಸದಾ ಸ್ಮರಿಸುತ್ತೇನೆ.

ಸುವರ್ಣ ಮಹೋತ್ಸವ ಯಶಸ್ವಿಯಾಗಲು ನನಗೆ ಹೆಗಲು ಕೊಟ್ಟು ಸಹಕರಿಸಿದ ಕಾರ್ಯದರ್ಶಿಯಾಗಿದ್ದ ಪ್ರೊ. ಹೆಚ್, ಆರ್. ದಾಸೇಗೌಡರ ಸಹಾಯ, ಸಹಕಾರ ಮರೆಯಲಾಗದಂತಹದು. ಅವರು ಇಂದು ನಮ್ಮೊಡನಿಲ್ಲ. ಅವರ ಮನೆಯವರಿಗೂ ಸಹ ನನ್ನ ವಂದನೆಗಳು. ಸಹಕಾರ ಹಾಗೂ ಮಾರ್ಗದರ್ಶನ ನೀಡಿದ ನನ್ನ ಅಣ್ಣ ನಾಡೋಜ ಡಾ॥ ಪಾಟೀಲ ಪುಟ್ಟಪ್ಪ ಅವರಿಗೂ ನನ್ನ ವಂದನೆಗಳು. ಗಾಂಧೀ ಭವನವನ್ನು ಚಂದ ಕಾಣಿಸಲು ಸಹಕರಿಸಿದ ಲೋಕೋಪಯೋಗಿ ಇಲಾಖೆಯ ಮುಖ್ಯ ಪ್ರಧಾನ ವಾಸ್ತುಶಿಲ್ಪಿಗಳಾದ ಶ್ರೀ ಉದಯ್ ಅವರಿಗೂ, ಅವರ ಸಿಬ್ಬಂದಿ ವರ್ಗದವರಿಗೂ ನನ್ನ ಅಭಿನಂದನೆಗಳು. ಸುವರ್ಣ ಮಹೋತ್ಸವ ಕಾರ್ಯಕ್ರಮ ಯಶಸ್ವಿಯಾಗಲು ಸಹಕರಿಸಿದ ಸುವರ್ಣ ಮಹೋತ್ಸವ ಉಪಸಮಿತಿ ಸದಸ್ಯರಾದ ಶ್ರೀ ಡಿ. ಕೆ. ಕೋದಂಡರಾಮು ಹಾಗೂ ಶ್ರೀ ಲ.ನರಸಿಂಹಯ್ಯ ಅವರಿಗೂ ಮತ್ತು ಉತ್ತರಕರ್ನಾಟಕ ಭಾಗದ ಸುವರ್ಣ ಮಹೋತ್ಸವ ಆಚರಣಾ ಸಮಿತಿ ಸದಸ್ಯರುಗಳಾದ ಶ್ರೀಯುತ ಉಮೇಶ ಬಳಿಗಾರ ಮತ್ತು ಡಾ॥ ಮಹೇಶ ನಾಲವಾಡ ಹಾಗೂ ಬಸವಪ್ರಭು ಹೊಸಕೇರಿ ಅವರಿಗೂ ನನ್ನ ಅಭಿನಂದನೆಗಳು. ಸುವರ್ಣ ಮಹೋತ್ಸವದ ಅಂಗವಾಗಿ 50 ಕೃತಿಗಳನ್ನು ಹೊರತರಲು ಶ್ರಮಿಸಿದ ಸುವರ್ಣ ಮಹೋತ್ಸವ ಪ್ರಕಟಣಾ ಸಮಿತಿ ಸಂಚಾಲಕರಾದ ಪ್ರೊ. ಓ. ಅನಂತರಾಮಯ್ಯ, ಸದಸ್ಯರುಗಳಾದ ಶ್ರೀ ಎಂ. ವಿ. ಶ್ರೀನಿವಾಸ್, ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ಶ್ರೀ. ರಾಮರತನ್ ಹಾಗೂ ಸಿ. ವಿ. ಜಿ. ಪಬ್ಲಿಕೇಷನ್‌ನ ಶ್ರೀ ಸಿ.ವಿ.ಜಿ. ಚಂದ್ರು ಅವರ ಸಹಾಯ ಮರೆಯಲಾಗದಂತಹುದು. ಅವರಿಗೂ ನನ್ನ ಅಭಿನಂದನೆಗಳು.

ಸುವರ್ಣ ಮಹೋತ್ಸವದ ನೆನಪಿನ ಸಂಚಿಕೆ ಸುಂದರವಾಗಿ ಮೂಡಿ ಬರಲು ಸಹಕಾರ ನೀಡಿದ ಸುವರ್ಣ ಮಹೋತ್ಸವ ಪ್ರಕಟಣಾ ಸಮಿತಿ ಸಂಚಾಲಕರಾದ ಪ್ರೊ. ಓ. ಅನಂತರಾಮಯ್ಯ ಹಾಗೂ ಸಮಿತಿಯ ಸದಸ್ಯ ವರ್ಗಕ್ಕೂ ನನ್ನ ಅಭಿನಂದನೆಗಳು. ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆಯನ್ನು ಸುಂದರವಾಗಿ ಮುದ್ರಿಸಿದ ಎಕ್ಸಲೆಂಟ್ ಪ್ರಿಂಟರ್ಸ್ ಮಾಲೀಕರಾದ ಶ್ರೀ ನಾಗರಾಜ್ ಅವರಿಗೂ ತುಂಬು ಹೃದಯದ ಅಭಿನಂದನೆಗಳು. ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ ಉತ್ತಮವಾಗಿ ಮೂಡಿ ಬರಲೆಂದು ಸಂದೇಶಗಳನ್ನು ಕಳುಹಿಸಿದ ಎಲ್ಲಾ ಗಣ್ಯ ಮಾನ್ಯರಿಗೂ ಅಭಿನಂದನೆಗಳನ್ನು ಅರ್ಪಿಸುತ್ತೇನೆ. ಸರ್ಕಾರ, ಸಂಘ-ಸಂಸ್ಥೆಗಳ ಹಾಗೂ ಸಾರ್ವಜನಿಕರ ಸಹಕಾರದಿಂದ ಗಾಂಧೀಭವನದ ಚಟುವಟಿಕೆಗಳನ್ನು ನಾಡಿನ ಮೂಲೆ ಮೂಲೆಗೆ ತಲುಪಿಸುವ ಸಂಕಲ್ಪ ನಮ್ಮದು. ಈ ಸಂಕಲ್ಪ ಸಿದ್ಧಿಗೆ ತಮ್ಮೆಲ್ಲರ ನೆರವು ಅತ್ಯಗತ್ಯ. ತಮ್ಮ ಸಲಹೆ, ಸೂಚನೆಗಳನ್ನು ಹಾಗೂ ಮಾರ್ಗದರ್ಶನವನ್ನು ಸದಾ ಸ್ವಾಗತಿಸುತ್ತೇನೆ.

(ಡಾ. ಹೊ. ಶ್ರೀನಿವಾಸಯ್ಯ)
ಅಧ್ಯಕ್ಷರು
ಕರ್ನಾಟಕ ಗಾಂಧೀ ಸ್ಮಾರಕ ನಿಧಿ

ದಿನಾಂಕ : 6-4-2012

ಸ್ಥಳ : ಬೆಂಗಳೂರು



# Editorial

Gandhi Smaraka Nidhi at Gandhi Bhavan, Kumara Park East, Bangalore is a place where scores of Gandhians have met, have discussed about Gandhian thinking and have greatly succeeded in preserving and spreading the ideals of Gandhi across the State, since in inception among students, youth and layman. This place has many memories of great personalities, whose contribution to Gandhi Smaraka Nidhi is immense. This Karnataka Gandhi Smaraka Nidhi has completed more than 50 years of meaningful existence.

The concept of creating Gandhi Smaraka Nidhi occurred immediately after the Mahathma fell to an assassin's bullet on 30th January, 1948. The Congress Working Committee proposed to create a national trust to perpetuate the memory of the Father of the Nation by spreading among common people and youth his ideals. Accordingly a committee of eleven national leaders of great eminence was formed, under the chairmanship of Rajendra Prasad. He explained the purpose of the Memorial Trust, that is to be constituted, was to further the manifold constructive activities in which Gandhiji was interested and such other activities of a like nature which give concrete shape to these ideals. He also appealed to his countrymen to contribute liberally to the memorial fund within a span of one year.

The national collection amounted to nearly Rs. 2 Crores, while industrialists contributed Rs. 5,28,50,000/-. Thereafter the Committee constituted a Trust, through a registered trust deed, and named it as Gandhi Smaraka Nidhi, New Delhi.

The Trust Deed of the Nidhi had made provision for the creation of provincial branches, across the country. Three fourths of the amount collected from a province was to be spent for programmes of that province and balance was to be utilized by the Central Nidhi. In the initial years there were 25 provincial units and after the re-organisation of the States, through merger, the strength of the units was fixed at 11. The Karnataka Gandhi Smaraka Nidhi was registered as a society.

Gandhiji's ways of struggle was unique. His Sathyagraha as a weapon has no parallel in the history of mankind. His philosophy of clinging to truth and non-violence generated immense moral pressure, through which he won over the British imperialists. His Sathyagraha had both the political program and constructive programs as well. Hence his Sathyagraha was a continuous process which sought to establish a welfare state.

# Editorial




The Gandhi Smaraka Nidhi at the Centre and in Karnataka have been striving for the past five decades and more to make the Gandhian way of life, the way of life for common people. Great Gandhians of Karnataka like Smt. Yashodaramma Dasappa, Sri B. Narayanappa, Sri Siddavanahalli Krishna Sharma, Sri R. S. Hukkerikar, Sri R. R. Diwakar, Sri Nittur Srinivasa Rao, Sri T. Subramanyam, Sri B. R. Pranesh Rao, Sri Kadidal Manjappa, Sri V. T. Magadi, Sri B. Y. Deshapande, Smt. Shantha Diwakar, Sri Ramachandra Vadavi, Sri Sirdar Venkata Ramaiah and others have enriched the legacy of Gandhi's, economic and social concepts, through the activities of the Nidhi in Karnataka. Gandhiji's rural re-construction has mass appeal even to this day in Karnataka. No doubt the credit for this goes to Karnataka Gandhi Smaraka Nidhi.

The Karnataka Gandhi Smaraka Nidhi has been in the forefront for more than fifty years in spreading Gandhian ideals among various sections of the society. The completion of fifty years marked the commencement of year long activities during 2011-12. Workshops, seminars, lectures, exhibitions and varities of cultural activities were organized to spread the message of Gandhiji. One purpose of these activities was to create an awareness and to spread among students and masses Gandhiji's way of life and his throught. At the end of the celebrations it was decided to bring out a commemoration volume explaining the activities of the Nidhi in Karnataka for the posterity. At its meeting the Executive Committee chaired by Dr. H. Srinivasiah and proposed by Secretary, Late Prof. H. R. Dasegowda constituted this Editorial Committee headed by Prof. O. Anantharamaiah as the Chief Editor.

The Committee took great pains in collecting articles on Gandhiji from eminent personalities which includes academicians, educationists, freedom fighters, Sarvodaya workers and individuals associated with Smaraka Nidhi. The articles both in English and Kannada cover vast area of Gandhian thinking and his philosophy. The volume provides an insight into the vast field of activities that Gandhiji pursued for the creation of a welfare state.

I take this opportunity to express my gratitude to the president of Gandhi Smaraka Nidhi Dr. H. Srinivasaiah. I also fondly remember Late Prof. H. R. Dasegowda, the Secretary of the Smaraka Nidhi, who visualised this Commomeration Volume. Also my thanks are due to other office bearers of the Nidhi. Further I thank all those persons who have contributed the articles and the dignitaries who have sent messages. I also thank those who have given advertisements. My thanks are also due to Sri Kambaiah and Prof. G. Ramarathan who assisted me in bringing out this volume. Sri R. Nagaraj of Excellent Printers, have brought out the volume very neatly. My thanks to him.

Date : 6-4-2012
Place : Bangalore

O. Anantharamaiah
(Prof. O. Anantharamaiah)
Chief Editor

## ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರುಗಳು



ದಿ|| ಆರ್. ಎಸ್. ಹುಕ್ಕೇರಿಕರ್
(1958-63)



ದಿ|| ಟೇಕೂರು ಸುಬ್ರಹ್ಮಣ್ಯ
(1963-74)



ದಿ|| ಕಡಿದಾಳ್ ಮಂಜಪ್ಪ
(1975-85)



ಡಾ|| ಹೊ. ಶ್ರೀನಿವಾಸಯ್ಯ
(1985 ರಿಂದ)

## ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಸಂಚಾಲಕರು



ದಿ|| ಬಿ. ನಾರಾಯಣಪ್ಪ
(1953)



ದಿ|| ಶ್ರೀಮತಿ ಯಶೋದರಮ್ಮ ದಾಸಪ್ಪ
(1953-54)



ದಿ|| ಸಿದ್ದವನ ಹಳ್ಳಿ ಕೃಷ್ಣಶರ್ಮ
(1954-56)

## ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿಗಳು



ದಿ|| ರಾಮಚಂದ್ರ ವಡವಿ
(1956-70)



ದಿ| ಸರ್ದಾರ್ ವೆಂಕಟರಾಮಯ್ಯ
(1971-81)



ದಿ|| ಕೆ.ಎಸ್. ನಾರಾಯಣಸ್ವಾಮಿ
(1981-86)



ದಿ|| ಪಿ. ವೆಂಕೋಬರಾವ್
(1986-90)



ಪ್ರೊ ಎನ್ ಕೃಷ್ಣಸ್ವಾಮಿ
(1990-93)



ಎಸ್. ಕೆ. ಮೋಹನ್
(1993-2004)



ದಿ ಪ್ರೊ ಎಚ್ ಆರ್ ದಾಸೇಗೌಡ
(2004-2011)

# ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಅವರು ಪ್ರತಿಪಾದಿಸಿದ ಪ್ರಮುಖ ತತ್ವಗಳು



## ವ್ಯಕ್ತಿಯ ವಿಕಾಸಕ್ಕೆ 11 ಸೂತ್ರಗಳು

ಅಹಿಂಸಾ, ಸತ್ಯ, ಆಸ್ತೇಯ, ಬ್ರಹ್ಮಚರ್ಯ, ಅಸಂಗ್ರಹ,
ಶರೀರಶ್ರಮ, ಆಸ್ವಾದ, ಸರ್ವತ್ರ, ಭಯವರ್ಜನ ಸರ್ವಧರ್ಮ
ಸಮಾನತ್ವ, ಸ್ವದೇಶೀ, ಸ್ಪರ್ಶಭಾವನಾ
ಹನ್ನೊಂದೀ ವ್ರತ ಕೈಗೊಳ್ಳೆ, ನಮ್ರ ನಿಶ್ಚಲ ಭಾವದಿ

## ದೇಶದ ಪ್ರಗತಿಗೆ 18 ರಚನಾತ್ಮಕ ಕಾರ್ಯಕ್ರಮಗಳು

★ ಖಾದಿ
★ ಗ್ರಾಮ ನೈರ್ಮಲ್ಯ
★ ವಯಸ್ಕರ ಶಿಕ್ಷಣ
★ ವಿದ್ಯಾರ್ಥಿಗಳ ಉನ್ನತಿ
★ ಆದಿವಾಸಿಗಳ ಉನ್ನತಿ
★ ಕುಷ್ಠ ಸೇವಾ
★ ರಾಷ್ಟ್ರಭಾವಾ
★ ಆರೋಗ್ಯ, ನೈರ್ಮಲ್ಯ ಸಾಧನೆ
★ ಪಾನನಿರೋಧ
★ ಗ್ರಾಮೋದ್ಯೋಗಗಳು
★ ಮೂಲಶಿಕ್ಷಣ
★ ಸ್ತ್ರೀಯರ ಉನ್ನತಿ
★ ಕಾರ್ಮಿಕರ ಉನ್ನತಿ
★ ರೈತರ ಅಭಿವೃದ್ಧಿ
★ ಆರ್ಥಿಕ ಸಮಾನತೆ
★ ಪ್ರಾಂತೀಯ ಭಾಷಾ
★ ಮತೀಯ ಐಕ್ಯತೆ
★ ಅಸ್ಪೃಶ್ಯತಾ ನಿವಾರಣೆ

## ಸಮಾಜಕ್ಕೆ ಘಾತಕವಾದ 7 ಮಹಾಪಾತಕಗಳು

☞ ತತ್ವ ರಹಿತ ರಾಜಕೀಯ
☞ ನೀತಿ ರಹಿತ ವಾಣಿಜ್ಯ
☞ ಆತ್ಮಸಾಕ್ಷಿ ಇಲ್ಲದ ಭೋಗ
☞ ಮಾನವತಾ ಶೂನ್ಯ ವಿಜ್ಞಾನ
☞ ದುಡಿಮೆ ಇಲ್ಲದ ಸಂಪತ್ತು
☞ ಶೀಲವಿಲ್ಲದ ಶಿಕ್ಷಣ
☞ ತ್ಯಾಗವಿಲ್ಲದ ಪೂಜೆ

# ಗಣ್ಯರು ಕಂಡಂತೆ ಗಾಂಧೀಜಿ



"ಶಾಂತಿ, ಸಹಿಷ್ಣುತೆ ಮತ್ತು ಪ್ರೀತಿಯಿಂದ ವಿಶ್ವವನ್ನೇ ಬದಲಾಯಿಸಿದ ಈ ಮಹಾನ್ ಚೇತನವನ್ನು ನಾವು ಸದಾ ಸ್ಮರಿಸುತ್ತೇವೆ. ಅವರು ಕಾಲಾತೀತರಾಗಿ 60 ವರ್ಷಗಳೇ ಕಳೆದರೂ ಅವರ ವ್ಯಕ್ತಿತ್ವದ ಬೆಳಕು ಮಾತ್ರ ವಿಶ್ವವನ್ನು ಸ್ಫೂರ್ತಿಗೊಳಿಸುತ್ತಲೇ ಇದೆ. ಅವರು ನನಗಷ್ಟೆ ಸ್ಫೂರ್ತಿಯಲ್ಲ, ಜಗತ್ತಿನ ಜನರಿಗೆಲ್ಲ ಸ್ಫೂರ್ತಿ."

**– ಬರಾಕ್ ಒಬಾಮ, ಅಮೆರಿಕಾದ ಅಧ್ಯಕ್ಷ**



"ಇಂಥವನೊಬ್ಬ ಎಂದಾದರೂ ಈ ನೆಲದ ಮೇಲೆ ರಕ್ತ ಮಾಂಸಭರಿತನಾಗಿ ಅಡ್ಡಾಡಿದುದು ನಿಜವಿರಬಹುದೇ ಎಂದು ಮುಂಬರುವ ಪೀಳಿಗೆ ಸಂದೇಹಿಸುವುದು ಸಾಧ್ಯ."

**– ಆಲ್ಬರ್ಟ್ ಐನ್‌ಸ್ಟೀನ್**
**(1939ರಲ್ಲಿ ಗಾಂಧೀಜಿಗೆ 70 ವರ್ಷ ತುಂಬಿದಾಗ ಸಲ್ಲಿಸಿದ ನುಡಿನಮನ)**



"ಗಾಂಧಿಯನ್ನು ಯೂರೋಪಿನ ಯಾವ ಕ್ರಾಂತಿಕಾರ ನಾಯಕ ನೊಡನೆಯೂ ಹೋಲಿಸಲು ಸಾಧ್ಯವಿಲ್ಲ. ಕೇವಲ ಶಾಸನಗಳನ್ನು, ತೀರ್ಪುಗಳನ್ನು ಸೃಷ್ಟಿ ಮಾಡುವ ಹಂಬಲವಲ್ಲ ಅವರದು. ಒಂದು ನೂತನ ಮಾನವೀಯತೆಯನ್ನೇ ತಮ್ಮ ತ್ಯಾಗ, ಬಲಿದಾನಗಳಿಂದ ಜೀವಂತಗೊಳಿಸುತ್ತಿದ್ದಾರೆ. ತಮ್ಮ ಸಮಕಾಲಿನ ಚಿಂತನೆಗಳಿಗಿಂತ ಬಹುದೂರದ ಭವಿಷ್ಯವನ್ನು ರೂಪಿಸುತ್ತಿದ್ದರೂ ತಮ್ಮ ಜನತೆಯ ತಾತ್ಕಾಲಿಕ ಬೃಹತ್ ಸಮಸ್ಯೆಗಳಿಗೆ ವಿಮುಖರಾಗಿಲ್ಲ. ಗೆಲುವೇ ಆಗಲಿ, ಅಟ್ಟಹಾಸವಾಗಲಿ, ವೈಯಕ್ತಿಕ ಡಾಂಬಿಕತನವಾಗಲಿ ಅವರಲ್ಲಿ ಸುಳಿಯದು. ವಾಸ್ತವವಾಗಿ ಅವರು ಸಾಮಾನ್ಯರಲ್ಲಿ ಸಾಮಾನ್ಯರಾಗಿಯೇ ಉಳಿದಿದ್ದಾರೆ........... ಅತ ಮತ್ತೊಬ್ಬ ಏಸು."

**–ರೊಮೈನ್ ರೊಲ್ಯಾಂಡ್**
**(ನೊಬೆಲ್ ಪ್ರಶಸ್ತಿ ವಿಜೇತ)**



"ನಮ್ಮಂತೆ ಮಾನವನಾಗಿ ಜನಿಸಿ,, ನಮ್ಮಂತೆ ಅನ್ನ, ಜಲ, ವಾಯು ಸೇವಿಸಿ ನಮ್ಮಂತೆ ಈ ನೆಲದ ಮೇಲೆ ನಡೆದ ಈ ವ್ಯಕ್ತಿ ಮಾನವನೇ"?

**ಜಾರ್ಜ್ ಬರ್ನಾರ್ಡ್ ಷಾ**

# ಗಣ್ಯರು ಕಂಡಂತೆ ಗಾಂಧೀಜಿ



"**ಗಾಂ**ಧೀ ದೈಹಿಕವಾಗಿ ಚಿಕ್ಕ ಪ್ರಮಾಣದವರು. ಆದರೆ ಮಾತು ಗಂಭೀರ. ತೀಕ್ಷ್ಣ. ಅವರು ಸಹನೆಯ ಪ್ರತಿ ಮೂರ್ತಿ. ಯಾವ ಕಾಠಿಣ್ಯವೂ ಅವರ ಬಳಿ ಸುಳಿಯದು. ಹಸುಳೆಯ ಸ್ವಭಾವದ ಅವರ ಆತ್ಮಸಂಯಮ ಚರಮರೇಖೆಯನ್ನು ಮುಟ್ಟಿದೆ ಅವರ ಆಶ್ರಮ ಜೀವನ ಕಷ್ಟಕರವಾದುದು. ಕಾರಣ ನಿಸ್ಸೀಮ ಸಂಕಟ. ತನಗೆ ಅದೊಂದು ಶಿಕ್ಷಣವೆನ್ನುತ್ತಾರೆ. ಸೆರೆಮನೆಯ ವಾಸ ಅವರಿಗೆ ಬಹುಸುಲಭ. ಬಂಧನದಲ್ಲಿದ್ದಾಗಲೆಲ್ಲ ಆತ್ಮಶುದ್ಧಿ, ಪ್ರಾರ್ಥನೆ, ಕಠೋರ ಶಿಸ್ತು ಪಾಲಿಸುತ್ತಾರೆ. ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಅದೊಂದು ಅಮೋಘ ಶಕ್ತಿಯಾಗಿದೆ."

**– ಸಿ.ಎಫ್ ಆಂಡ್ರ್ಯೂಸ್**



"**ಸೋ**ದರಭಾವದಿಂದ ನಿಮ್ಮನ್ನು ನಮಸ್ಕರಿಸುತ್ತೇನೆ. ನಿಮ್ಮ ಪರಿಚಯವಾದುದು ಬಹಳ ಸಂತೋಷ"

**–ಟಾಲ್‌ಸ್ಟಾಯ್**



"ಗಾಂಧೀಜಿಯವರಂತಹ ಮಹಾನ್ ವ್ಯಕ್ತಿಯನ್ನು ಪಡೆದ ಭಾರತೀಯರು ಪುಣ್ಯವಂತರು. ಭಾರತಕ್ಕೆ ಮಾತ್ರ ಸ್ವತಂತ್ರವನ್ನು ತಂದುದಲ್ಲದೆ, ಇತರ ಮಾರ್ಗವನ್ನು ಅನುಸರಿಸಿ, ಜಗತ್ತಿನಲ್ಲಿ ಗುಲಾಮಗಿರಿ ದೇಶಗಳೇ ಇಲ್ಲದಂತೆ ಆಗಿದೆ.ಜಗತ್ತಿನಲ್ಲಿ ಯುದ್ಧಗಳು ಇಲ್ಲದಂತೆ ಆಗಿದೆ."

**–ಜೆ.ಸಿ.ಸ್ಮಟ್ಸ್**

(ಗಾಂಧೀಜಿಯವರನ್ನು ದ.ಆಫ್ರಿಕಾದಲ್ಲಿ 14 ವರ್ಷ ಜೈಲಿಗೆ ಹಾಕಿದವರು.ನಂತರ ಪರಿವರ್ತಿತರಾದ ಬ್ರಿಟೀಷ್ ಅಧಿಕಾರಿ.)



"**ಈ** ಸಮಾಜವನ್ನು ಪುನರ್‌ರಚಿಸುವುದು ಗಾಂಧೀಜಿ ಅವರ ಗುರಿಯಾಗಿರಲಿಲ್ಲ. ಪ್ರತಿಯೊಂದು ಮಾನವ ಹೃದಯವನ್ನು ಪರಿವರ್ತಿಸುವುದು ಅವರ ಗುರಿಯಾಗಿತ್ತು. ಪ್ರತಿಯೊಬ್ಬ ಮನುಷ್ಯನ ಅಂತರಂಗದಲ್ಲಿರುವ ಒಳ್ಳೆಯತನ ಈಚೆ ಬರುವಂತೆ ಮಾಡುವುದು ಅವರ ಉದ್ದೇಶವಾಗಿತ್ತು."

**– ಬರ್ಕ್‌ವೈಟ್** (ಅಮೆರಿಕಾ ಪತ್ರಿಕೋದ್ಯಮ & ಲೇಖಕಿ)



# ಗಣ್ಯರು ಕಂಡಂತೆ ಗಾಂಧೀಜಿ



"ಗಾಂಧೀಜಿ ಕುಳಿತಲ್ಲಿ ದೇವ ಮಂದಿರವಾಯಿತು. ನಡೆದಲ್ಲಿ ಪವಿತ್ರ ಭೂಮಿಯಾಯಿತು. ಗಾಂಧೀಜಿ ಈ ಮಣ್ಣಿನ ಮನುಷ್ಯನಲ್ಲ. ಆತ ತುಂಬ ಅಪರೂಪದ ಕಮ್ಮಟದಿಂದ, ವಿಶೇಷ ವಸ್ತುವಿನಿಂದ ಎರಕಗೊಂಡ ವ್ಯಕ್ತಿ. ನಮ್ಮ ಹೃದಯವನ್ನೇ ಹೊಡೆಯುವಂಥಹ ಈ ನಿರಾಶಾದಾಯಕ ಸ್ಥಿತಿಯಲ್ಲಿ ಒಂದು ಭರವಸೆ ಏನೆಂದರೆ ಗಾಂಧೀಜಿಯಂತಹ ವ್ಯಕ್ತಿಯನ್ನು ಹುಟ್ಟು ಹಾಕಿದ ಸತ್ವಶಾಲಿ ಭೂಮಿ ನಮ್ಮದು. ಇನ್ನೊಬ್ಬ ಗಾಂಧೀಜಿ ಇನ್ನು ಒಂದು ಸಾವಿರ ವರ್ಷಗಳ ನಂತರ ಹುಟ್ಟಬಹುದು. ಸದ್ಯಕ್ಕೆ ಗಾಂಧೀಯವರು ತಮ್ಮ 70 ವರ್ಷಗಳ ಅನುಭವದಿಂದ ಕೊಟ್ಟಿರುವ ಮಾರ್ಗದರ್ಶನದಿಂದ ನಮ್ಮ ಬದುಕನ್ನು ರೂಪಿಸಿಕೊಳ್ಳೋಣ. ಅವರು ನಮ್ಮನ್ನು ಹೊಸ ಗುರಿಯತ್ತ ಕೊಂಡ್ಯೊಯ್ಯುತ್ತಾರೆಯೇ ಹೊರತು ಭ್ರಮಾಲೋಕದ ಕಡೆಗಲ್ಲ."

– **ಜವಾಹರಲಾಲ್ ನೆಹರು**



"ಮಹಾತ್ಮ ಗಾಂಧೀ ತಮ್ಮ ನಿರ್ವಾಜ್ಯ ಪ್ರೇಮದಿಂದ ಭಾರತದ ಹೃದಯವನ್ನು ಗೆದ್ದುಕೊಂಡಿದ್ದಾರೆ. ಅದು ಅವರ ಸಾರ್ವಭೌಮ ಶಕ್ತಿಯಾಗಿ ನಿಂತಿದೆ. ಸತ್ಯದ ಅಪರಿಮಿತ ಸಾಮಾರ್ಥ್ಯವನ್ನು ಅವರು ದರ್ಶನ ಮಾಡಿಸಿದ್ದಾರೆ. ಅದಕ್ಕಾಗಿ ಅವರಿಗೆ ನಾವು ಋಣಿಗಳು. ಕಾಂಗ್ರೆಸ್ಸಿನಂತಹ ಸಂಸ್ಥೆಗಳನ್ನು ಕಟ್ಟಬಹುದು, ವಿಸರ್ಜಿಸಬಹುದು. ಆದರೆ ರಾಷ್ಟ್ರವನ್ನು ಸತ್ಯ, ಪ್ರೇಮಗಳ ಅಖಂಡ ಪ್ರಜ್ಞೆಗೆ ಎಚ್ಚರಿಸುವ ಕಾರ್ಯ ಯಾವ ಕುಶಲ ಕರ್ಮಿಗೂ ಸಾಧ್ಯವಾಗದು. ಈ ಮಹಾಸ್ತ್ರವನ್ನು ಪಡೆದಿರುವ ಆ ಮಹಾನಾಯಕನಿಗೆ ನಮೋ ಎನ್ನುತ್ತೇನೆ."

– **ರವೀಂದ್ರನಾಥ ಠಾಗೂರ್**



"ಗಾಂಧೀಜಿ ಅವರ ಹಿರಿಮೆ ಗರಿಮೆಗಳಿಗೆ ಕಾರಣ ಅವರ ಪವಿತ್ರಮಯ ಜೀವನವೇ ಹೊರತು, ಅವರ ಪೌರುಷದಾಯಕ ಹೋರಾಟವಲ್ಲ."

–**ಡಾ॥ ಎಸ್. ರಾಧಾಕೃಷ್ಣನ್**

# ಗಣ್ಯರು ಕಂಡಂತೆ ಗಾಂಧೀಜಿ



"ಅವರು ಅತ್ಯಂತ ಅಧಿಕಾರಯುತವಾಗಿ ಮಾತನಾಡುತ್ತಾರೆ. ಅಲ್ಲಿ ಅಸೀಮವಾದ ಜವಾಬ್ದಾರಿ ತುಂಬಿರುತ್ತದೆ. ಆತನಲ್ಲಿ ಪವಾಡ ಸದೃಶವಾದ ಏನೋ ಒಂದು ಶಕ್ತಿ ಇದೆ. "ನಾಳಿನ ಯುಗ ವೇದಾಂತ ಮತ್ತು ವಿಜ್ಞಾನದ್ದು. ಆ ಯುಗದ ಮೊದಲ ದಾರ್ಶನಿಕ ಗಾಂಧೀಜಿ".

**– ಆಚಾರ್ಯ ವಿನೋಬಾ ಬಾವೆ**



"ಗಾಂಧೀಜಿ ವಿಜ್ಞಾನಯುಗದ ಮಹಾಪ್ರಾಜ್ಞ."

**– ಡಾ॥ ಸಿ .ಸುಬ್ರಹ್ಮಣ್ಯಂ**



"ಮೊದಲ ಬಾರಿಗೆ ನೋಡಿದಾಗ ಗಾಂಧಿ ತುಂಬಾ ವಿಲಕ್ಷಣದ ವ್ಯಕ್ತಿ ಅನಿಸಿತು. ಅವರ ಉಡುಪು ಮತ್ತು ಮಾತಿನ ಶೈಲಿ ವಿಚಿತ್ರವಾಗಿತ್ತು. ನನಗೆ ಒಂದು ರೀತಿ ಗಲಿಬಿಲಿಯಾಯಿತು. ಆದರೆಕ್ರಮೇಣ ಅವರ ಬಗ್ಗೆ ನನಗೆ ಅರ್ಥವಾಗುತ್ತಾ ಬಂತು. ಅವರು ಸಂಪೂರ್ಣ ಪ್ರಾಮಾಣಿಕರು, ನೇರ ನಡವಳಿಕೆಯ ವ್ಯಕ್ತಿ ಎಂಬುದನ್ನು ಅರ್ಥಮಾಡಿಕೊಂಡೆ."

**– ಘನಶ್ಯಾಮ್‌ದಾಸ್‌ಜಿ ಬಿರ್ಲಾ,** (ಕೈಗಾರಿಕೋದ್ಯಮಿ)



ಮಹಾತ್ಮ ಗಾಂಧೀಜಿಯವರ ವ್ಯಕ್ತಿ ವಿಚಾರಗಳನ್ನು ಜನಮಾನಸದಲ್ಲಿ ವಿಶೇಷವಾಗಿ ಯುವಜನರಲ್ಲಿ ಬಿತ್ತುವುದು ಇಂದು ಹೆಚ್ಚು ಪ್ರಸ್ತುತವಾಗಿದೆ. ಇದೊಂದು ಸಾಮಾಜಿಕ ಋಣ ಹಾಗೂ ಹೊಣೆಗಾರಿಕೆ ಎಂದು ನಮ್ಮ ಈ ಕಾರ್ಯದಲ್ಲಿ ಕೈ ಜೋಡಿಸಲು ತಮ್ಮಲ್ಲಿ ಮನವಿ.

**– ಡಾ॥ ಹೊ.ಶ್ರೀನಿವಾಸಯ್ಯ**

ಅಧ್ಯಕ್ಷರು, ಕರ್ನಾಟಕ ಗಾಂಧೀ ಸ್ಮಾರಕ ನಿಧಿ



# Einstein on Gandhi

*A leader of his people, unsupported by any outward authority; a politician whose success rests not upon craft nor mastery of technical devices, but simply on the convincing power of his personality; a victorious fighter who has always scorned the use of force; a man of wisdom and humility, armed with resolve and inflexible consistency, who has devoted all his strength to the uplifting of his people and the betterment of their lot; a man who has confronted the brutality of Europe with the dignity of the simple human being, and thus at all times risen superior.*

*Generations to come, it may be, will scarce believe that such a one as this ever in flesh and blood walked upon this earth.*

A. Einstein

PRINCETON
N. J., U.S.A.
VII-44

Source : Gandhiji His Life & Work
Published on his 75th Birthday, Oct. 2, 1944. Printed by : B. G. Dhawale, Bombay, 1944

# . . . to the Gates of Liberty

*The figure of Gandhi is incomprehensible to the West. He is derided by some, ignored by many, and admired by those who are wise. Because he has taken literally and acted upon the teachings of great men, even Christians are puzzled by him, and he is reproached. But all great men have been reproached and derided and sometimes laughed at. It is Gandhi's greatness that he has ignored the derision and accepted the laughter and has continued to be himself. Somehow that self still stands intact, and laughter is dying down and derision is becoming futile.*

*To me Gandhi has been, through his own personality, an expression of what India is. Much of it is what we all are, human, yet searching, changeful, yet constant, and practical and dreaming, shrewd and selfless. But the contrasts and the variety in Gandhi are typical of India, and in all that seems contradictory, there is the unity which is India's deep unity, too, the determination for independence and the indomitable spirit—free, however the flesh is imprisoned.*

*By finding out all I can about Gandhi, by trying to understand him, I have understood India at least to some degree, even in all its contrasts.*

*This emergence of a single individual as a sort of epitome of his people always has significance. It means not only that there is a clarification of the people through this single figure. It means, too, that the people are ready for clarification, or they could not have produced this figure. Gandhi has helped his people to know what they want and he has set their feet firmly on the path of freedom, but before he did this, he was himself a product of their crystallizing desire to be free. He could not have become the vessel for their longings, had not those longings been ready for fusion in his one being. He has expressed for the people of India what they want and are.*

*This is to say, he is one of the greatest leaders of people that there have been in human history. Such a leader comes only at the confluence of a people's need and desire with the birth of an individual able, by his natural gifts, to feel that need and express that desire. I never doubt for a moment that Gandhi's purposes will be achieved. He has brought his people to the very gates of liberty. If they are not opened, the people of India will open them.*

Pearl S. Buck

U. S. A.
VII-44

Source : Gandhiji His Life & Work
Published on his 75th Birthday, Oct. 2, 1944. Printed by : B. G. Dhawale, Bombay, 1944



# ದಿವಂಗತ ರಾಷ್ಟ್ರಪಿತ !

**ರಾಷ್ಟ್ರಪಿತ ದಿವಂಗತ**
**ಉನ್ನತ್ತ ಹಸ್ತ ಹತ !**
**ನರಹೃದಯದ ವಿಷವಾರ್ಧಿಗೆ**
**ಜೀವಾಮೃತ ಸಮರ್ಪಿತ!**
**ಕ್ಷಮಿಸು, ಓ ಜಗತ್ ಪಿತಃ**
**ಅದೃಷ್ಟ ಹೀನ ಭಾರತ!**

ನಮ್ಮ ರಾಷ್ಟ್ರದ ಪಿತಾಮಹನು ರಣರಂಗದ ಮಧ್ಯೆ ಶರಶಯ್ಯೆಯಲ್ಲಿ ಅಸ್ತಂಗತನಾದನು. ನಮ್ಮ ಸಾಕ್ರೆಟೀಸನಿಗೆ ವಿಷಪಾನ ಮಾಡಿಸಿಯಾಯಿತು. ನಮ್ಮ ಯೇಸು ಕ್ರಿಸ್ತನು ಶಿಲುಬೆಗೇರಿದನು. ಜಗದ್ವಂದ್ಯ ಲೋಕಗುರು ಪೂಜ್ಯ ಮಹಾತ್ಮ ಗಾಂಧಿ ತಲೆಕೆಟ್ಟ ಕೊಲೆಗಾರನೊಬ್ಬನ ಕ್ರೂರ ಹಸ್ತದಿಂದ ಪ್ರಾರ್ಥನಾಸಭೆಯ ವೇದಿಕೆ ಮೇಲೆ, ತಮ್ಮಿಬ್ಬರು ಮೊಮ್ಮಕ್ಕಳ ಪ್ರೇಮಬಾಹುಗಳ ನಡುವೆ ನಿಂತು ತಮ್ಮನ್ನು ಸ್ವಾಗತಿಸುತ್ತಿದ್ದ ವಿಪುಲಜನವೃಂದಕ್ಕೆ ತಮ್ಮೆರಡು ಕೈಗಳನ್ನೂ ಹಣೆಗೆತ್ತಿ ನಮಸ್ಕರಿಸುತ್ತಿದ್ದಾಗಲೇ ಮೃತ್ಯುರಾಹುವಿಗೆ ತುತ್ತಾದರು. ವೇದಿಕೆಯ ಮೇಲೆ ಅತಿ ಸಮೀಪದಲ್ಲಿ ಕುಳಿತು ಹಿಂದೂ ಯುವಕನೊಬ್ಬನು ಚಿಮ್ಮಿ ನಿಂತು ಅವರ ತೆರೆದೆದೆಗೆ ಗುಂಡಿಟ್ಟು ಕೊಂದನಂತೆ. ಹಿಂದೆಂದೂ ಭರತಖಂಡದಲ್ಲಿ ನಡೆಯದಂತಹ ಇಂತಹ ಅಸಹ್ಯಕರವಾದ ಘೋರ ಪಾತಕವನ್ನು ಇಂದು ನಡೆಸಿ ನಮ್ಮ ದೇಶಕ್ಕೆ ದೇಶವೇ ಜಗತ್ತಿನ ಮುಂದೆ ಮಹಾಪರಾಧಿಯಾಗಿದೆ; ಅವಮಾನಿತವಾಗಿದೆ. ನಾವು ತಲೆಯೆತ್ತಿ ನಡೆಯದಂತಾಗಿದೆ. ನಮ್ಮ ದೇಶ ಲೋಕದ ತಿರಸ್ಕಾರಕ್ಕೂ ಶಾಪಕ್ಕೂ ಪಕ್ಕಾಗಿದೆ. ಈ ಪಾಪಕರ್ಮಕ್ಕೆ ತಪಸ್ಯೆಯಿಂದ ಪಶ್ಚಾತ್ತಾಪದಿಂದ ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದರೆ ನಮಗೆ ಯೇಸುಕ್ರಿಸ್ತನನ್ನು ಮೊಳೆ ಹೊಡೆದು ಕೊಂದ ಜನಾಂಗಕ್ಕಾಗಿರುವ ದುರ್ಗತಿಯೇ ಒದಗುತ್ತದೆಯೋ ಏನೋ ಎಂದು ಹೆದರಿಕೆಯಾಗುತ್ತಿದೆ.

ಮತ್ತೇನಿದ್ದೀತು ನಾವು ಕೈಕೊಳ್ಳುವ ಆ ಪ್ರಾಯಶ್ಚಿತ್ತ? ಯಾವ ಮಹಾಪುರುಷನ ಪ್ರೇಮಮಯ ಹೃದಯವು ಗುಂಡು ತಗುಲಿ ಬಿರಿಯಿತೋ ಆ ಹೃದಯದ ಆಶೆ ಆಕಾಂಕ್ಷೆ ಆದರ್ಶಗಳನ್ನು ಅಚಂಚಲವಾದ ದೃಢತೆಯಿಂದ ಆಚರಿಸಿ ಸಾಧಿಸುವುದೊಂದೇ ನಮಗೆ ಮುಂದಿರುವ ಶ್ರೇಯೋಮಾರ್ಗ. ಶಿಲುಬೆಗೇರಿದ ಯೇಸುಕ್ರಿಸ್ತನಿಗೆ 'ಕ್ಷಮಿಸು, ತಂದೆ!' ಎಂದು ಮಾನವರ ಪರವಾಗಿ ಭಗಂತನನ್ನು ಬೇಡಲು ಸ್ವಲ್ಪ ಪ್ರಜ್ಞೆಯಾದರೂ ಇತ್ತಂತೆ. ನಿನ್ನೆ ಮಡಿದ ನಮ್ಮ ಕ್ರಿಸ್ತನಿಗೆ ಅಷ್ಟಕ್ಕೂ ಅವಕಾಶ ಕೊಡದಷ್ಟು ಬೇಗನೆ ಪ್ರಜ್ಞೆ ಹೋಯಿತಂತೆ. ಆದರೂ ಆತನ ಮುಖಮುದ್ರೆ ಪ್ರಶಾಂತವಾಗಿ, ಕ್ಷಮಾಶೀಲವಾಗಿ, ಧ್ಯಾನ ಪೂರ್ಣಶಾಂತಿಯಿಂದ ತುಂಬಿ, 'ಕ್ಷಮಿಸು ತಂದೆ! ಎನ್ನುವಂತಿತ್ತೆಂದು ಆ ವರ್ಣನೆಯನ್ನು ಕೇಳಿದವರೆಲ್ಲರಿಗೂ ವೇದ್ಯವಾಗಿರಬೇಕು. ಮೃತಸ್ಥಿತಿಯಲ್ಲಿಯೂ ಅಮೃತವನ್ನೇ ಪ್ರೋಕ್ಷಿಸುತ್ತಿದ್ದ ಆ ಮುಖಮುದ್ರೆಯ ಸಂದೇಶ-ಕ್ಷಮೆ, ಪ್ರೇಮ, ಸತ್ಯ, ಅಹಿಂಸೆ ಇವು ನಮಗೆ ರಕ್ಷಾ ಮಂತ್ರಗಳಾಗಬೇಕು. ಹಾಗಾದರೆ ಮಾತ್ರವೆ ನಮ್ಮ ದೇಶದ ಸದ್ಯೋಜಾತ ಸ್ವಾತಂತ್ರ್ಯಕ್ಕೆ ರಕ್ಷಾಯಂತ್ರ ಸಿದ್ಧವಾಗುತ್ತದೆ.

ಎಷ್ಟು ಅನಿರೀಕ್ಷಿತ, ಎಷ್ಟು ಆಕಸ್ಮಿಕ, ಎಷ್ಟು ಭಯಂಕರವಗಿತ್ತು ನಿನ್ನೆ ಬಂದ ಆ ಘೋರ ವಾರ್ತೆ! ಮೊನ್ನೆ ತಾನೆ ಆಮರಣ ಪರಂತ್ಯ ಕೈಕೊಂಡ ಉಪವಾಸವ್ರತದಿಂದ ದೆಹಲಿಯ ವಿಷಸಮುದ್ರವನ್ನೂ ಕ್ಷೀರಸಾಗರವಾಗಿ ಪರಿವರ್ತಿಸಿ, ಲೋಕದ ಪ್ರಶಂಸೆಗೂ ಪೂಜೆಗೆ ಕೃತಜ್ಞತೆಗೂ ಪಾತ್ರರಾಗಿದ್ದರು. ಅಲ್ಲದೆ, ನಮ್ಮೆಲ್ಲರಲ್ಲಿ ಮತ್ತೊಂದು ಹೊಸ ಆಸೆಯನ್ನೂ ಪ್ರಚೋದಿಸಿದ್ದರು. ನೂರಿಪ್ಪತ್ತೈದು ವರ್ಷದ ಹೊಂಗನಸು ಎಪ್ಪತ್ತೆಂಟಕ್ಕೇ ಬಿರಿಯುವಂತೆ ಮಾಡಿದ ಈಶ್ವರೇಚ್ಛೆಯ ಕಟುಲೀಲೆಗೆ ಏನು ಹೇಳುವುದು? ತಲೆಬಾಗಿ ಮೂಕರಾಗುವುದೊಂದೇ ದಾರಿ. ಆ ವಾರ್ತೆ ಕಿವಿಗೆ ಬಿದ್ದಾಗ ಜನ ನಕ್ಕುಬಿಟ್ಟರು. ಅದನ್ನು ತಿಳಿಸಿದವರಿಗೆ ಛೀ ಮಾಡಿದರು. ಸತ್ತರೆಂದು ನಂಬುವುದಾದರೂ ಎಂತು? ಗುಂಡು ಬಿದ್ದು ಸತ್ತರೆಂದಾಗಲಂತೂ ಯಾರೂ ನಂಬದೆ ಹೋದರು. ಏನು? ಗಾಂಧಿಜೀಗೆ? ಗುಂಡಿನೇಟು?

ಅಸಾಧ್ಯ ಅಸಂಭವ? ಅವಿವೇಕ! ಸುಳ್ಳು! ಖಂಡಿತ ಸುಳ್ಳು! ಆಕಾಶವಾಣಿ ಶೋಕವಾರ್ತೆಯನ್ನು ಮತ್ತೆ ಮತ್ತೆ ಒತ್ತಿಯೊತ್ತಿ ಹೇಳಿದಾಗ ನಂಬಲೇಬೇಕಾಗಿ ಬಂತು. ಆಗಂತೂ ಜನರಲ್ಲುಂಟಾದ ಕಳವಳ, ಭೀತಿ ನಿರಾಶೆ, ಸಂಕಟ ಇವುಗಳನ್ನು ಹೇಳತೀರದು. ಬದುಕಿನ ಅರ್ಥವೇ ಇದ್ದಕ್ಕಿದ್ದಂತೆ ಶೂನ್ಯವಾದಂತಾಯಿತು. ಜೀವನದ ಪ್ರಯೋಜನವೇ ಕೊನೆಮುಟ್ಟಿದಂತೆ ತೋರಿತು. ಗಾಂಧಿ ಇಲ್ಲದ ಜಗತ್ತು! ತೆಗೆ ತೆಗೆ ಅದೆಲ್ಲಿಯ ಮಾತು! ಎರಡು ತಲೆಮಾರುಗಳಿಂದ ಪ್ರಪಂಚದ ಅದರಲ್ಲಿಯೂ ಭರತಖಂಡದ, ಬಾಳನ್ನೆಲ್ಲ ಆವರಿಸಿ, ಉಸಿರನ್ನೆಲ್ಲ ತುಂಬಿ ಚೇತನಕ್ಕೆ ಶಕ್ತಿಯಾಗಿ, ಕಣ್ಣಿಗೆ ಬೆಳಕಾಗಿ, ದಾರಿಗೆ ಸಂಗಾತಿಯಾಗಿ, ಗೆಳೆಯನಾಗಿ, ನಾಯಕನಾಗಿ, ಸುಧಾರಕನಾಗಿ, ಮಾರ್ಗದರ್ಶಿಯೂ ಗುರುವೂ ಆಗಿದ್ದ ಗಾಂಧಿಯಿಲ್ಲದ ಜಗತ್ತು ಜಗತ್ತೆ? ಅದೊಂದು ಅಮಂಗಲವಿಪತ್ತು! ಉಳಿದವರ ಮಾತಿರಲಿ! ನೆಹರು, ಪಟೇಲ್, ಆಜಾದ್ ಅಂಥವರಿಗೂ ಏನಾಯತೆಂಬುದನ್ನು ರೇಡಿಯೋದಿಂದ ಕೇಳಿದ್ದೇವೆ. ಭಾರತದ ಪ್ರಧಾನಿ ಮತ್ತು ಉಪಪ್ರಧಾನಿ ಇಬ್ಬರೂ ದೆಹಲಿಯಿಂದ ಮಾಡಿದ ಪ್ರಸಾರ ಭಾಷಣಗಳಲ್ಲಿ ತಮ್ಮ ತಮ್ಮ ಸಹಜ ಧೈರ್ಯವನ್ನೂ ಒತ್ತಿಮೀರಿಬಂದ ದುಃಖಾತಿಶಯಕ್ಕೆ ಗದ್ಗದ ಧ್ವನಿ ನೀಡಿದುದನ್ನು ನಾವೆಲ್ಲರೂ ಆಲಿಸಿ ಮರುಗಿದ್ದೇವೆ.

ನಿಜ, ನಮ್ಮ ದುಃಖಕ್ಕೆ ತೀರವಿಲ್ಲ: ನಮ್ಮ ನಷ್ಟಕ್ಕೆ ಅಳತೆಯಿಲ್ಲ, ಎಂದೆಂದಿಗೂ ಪಡೆಯಲಾಗದ ಒಡವೆ ನಮ್ಮಿಂದ ಚ್ಯುತವಾಗಿದೆ. ನಮ್ಮ ಆಧ್ಯಾತ್ಮಿಕ ರಿಕ್ತತೆಯೋ ಪಾತಾಳದಂತೆ ಗಂಭೀರವಾಗಿದೆ; ಅಕಾಶದಂತೆ ವಿಸ್ತಾರವಾಗಿದೆ. ನಿನ್ನೆ ಸರ್ವದೇಶಗಳೂ ನಗುವಂತೆ ಶ್ರೀಮಂತರಾಗಿದ್ದವರು ಇಂದು ಎಲ್ಲ ನಾಡುಗಳೂ ನಗುವಂತೆ ದಟ್ಟದರಿದ್ರರಾಗಿದ್ದೇವೆ. ಆದರೂ, ಪಂಡಿತ ನೆಹರೂ ಅವರು ತಮ್ಮ ಭಾಷಣದಲ್ಲಿ ಹೇಳಿದಂತೆ, ಕ್ಲೈಬ್ಯಕ್ಕಿದ್ದು ಕಾಲವಲ್ಲ: ಅಧೈರ್ಯಕ್ಕಿದು ಅವಕಾಶವಲ್ಲ; ಅಸ್ಥಿರತೆಗೆ ಸಮಯವಲ್ಲ. ಗಾಂಧೀಜಿಗಾಗಿ ನಾವು ಅಳಬೇಕಾಗಿಲ್ಲ. ನಮ್ಮ ದುರದೃಷ್ಟಕ್ಕಾಗಿಯಾದರೂ ಅಳುತ್ತಾ ಕೂರುವುದು ಅವಿವೇಕವೇ. ಈಶ್ವರನ ಲೀಲೆಯಲ್ಲಿ ಇಂತಹ ಘಟನೆ ಮೊತ್ತ ಮೊದಲನೆಯದಲ್ಲವೆಂದೂ ತೋರುತ್ತದೆ. ಶ್ರೀಕೃಷ್ಣನು ಎಂತಹ ದುರಂತ ಸನ್ನಿವೇಶದಲ್ಲಿ ಮೃತನಾದನೆಂಬುದನ್ನು ಊಹಿಸಿಕೊಳ್ಳಿ. ಶ್ರೀರಾಮಚಂದ್ರನಿಗೆ ಕೊನೆ ಬಂದ ಪರಿಯನ್ನು ನೆನೆಯಿರಿ. ಶ್ರೀ ಕ್ರಿಸ್ತನು ಎಂತಹ ದುರ್ಮರಣಕ್ಕೀಡಾದನು ಎಂಬುದನ್ನು ಪರ್ಯಾಲೋಚಿಸಿ. ನಮಗೆ ಅನರ್ಥವಾಗಿ ತೋರುವುದು ಈಶ್ವರನ ಸಮಷ್ಟಿದೃಷ್ಟಿಗೆ ಅರ್ಥಪೂರ್ಣವೂ ಸಾರ್ಥಕವೂ ಆಗಿರಬಾರದೇನು? ಮಹಾತ್ಮರೇ ಹೇಳುತ್ತಿದ್ದರು: 'ನನ್ನನ್ನು ಕೊಲ್ಲುವ ಸಾಮರ್ಥ್ಯ ಈಶ್ವರನೊಬ್ಬನಿಗೇ ಇದೆ' ಎಂದು. ಕೊಂದವನು ಯಃಕಶ್ಚಿತ ಮನುಷ್ಯನಾದರೂ ಅಲ್ಲಿಯೂ ರುದ್ರನ ಹಸ್ತವನ್ನು ಕಾಣಬಹುದು. ಸರ್ವಮಂಗಲ ನಿಧಿಯಾದ ಭಗವಂತನ ಇಚ್ಛೆಯಲ್ಲಿ ಶ್ರದ್ಧೆಯಿಟ್ಟು ಸಮಾಧಾನ ತಂದುಕೊಂಡು ಮುಂದಿನ ಕಾರ್ಯಕ್ಕೆ ಸೊಂಟಕಟ್ಟಿ ನಿಲ್ಲಬೇಕು. ಆತ್ಮದ ಅಮೃತತ್ವದಲ್ಲಿಯೂ ಅವತಾರಗಳಲ್ಲಿಯೂ ಜನ್ಮಾಂತರ ಮತ್ತು ಪುನರ್ಜನ್ಮಗಳಲ್ಲಿಯೂ ಶ್ರದ್ಧಾಳುಗಳಾದ ನಮಗೆ ಪೂಜ್ಯ ಗಾಂಧೀಜಿಯ ದೇಹಾವಸಾನವು ಪುನರುತ್ಥಾನಕ್ಕೆ ಪ್ರಚೋದನವಾಗಬೇಕು. ಸ್ಥಿತಪ್ರಜ್ಞರಾದ ಗಾಂಧೀಜಿ ಮೃತರಾದರು ಎಂಬುದು ಲೋಕೋಪಚಾರದ ಮಾತು. ನಿಜವಾದ ನಿಜವಲ್ಲ. ಏಕ ದೇಹಸ್ಥವಾಗಿದ್ದ ಚೇತನ ಈಗ ಸರ್ವತ್ರವಾಗಿದೆ. ಆ ಶಕ್ತಿಗೆ ಅಂತ್ಯವಿಲ್ಲ. ಕಾಲ ಕಳೆದಂತೆಲ್ಲ ಅದು ಬಹುಗಣಿತವಾಗುತ್ತ ಹೋಗುತ್ತದೆ. ಭಕ್ತಿಸೂತ್ರಗಳು ಹೇಳುವಂತೆ ಅಂತಹ ವಿಭೂತಿಗಳ ಆವಿರ್ಭಾವದಿಂದ 'ಮೋದಂತೇ ಪಿತರೀ ನೃತ್ಯಂತಿ ದೇವತಾಃ ಸನಾಥಾ ಚೇಯಂ ಭೂರ್ಭವತಿ': 'ಪಿತೃಗಳು ನಲಿಯುತ್ತಾರೆ, ದೇವತೆಗಳು ಕುಣಿಯುತ್ತಾರೆ, ನಮ್ಮೀ ಪೃಥ್ವಿ ಸನಾಥಳಾಗುತ್ತಾಳೆ.' ಗಾಂಧೀಜಿಯನ್ನು ಹೆತ್ತ ನಮ್ಮೀ ಪೃಥ್ವಿ ಎಂದೆಂದಿಗೂ ಅನಾಥೆಯಲ್ಲ. ನಿತ್ಯ ಸನಾಥೆ! ಆ ಪೂಜ್ಯ ಮಹಾತ್ಮನು ನಮ್ಮನ್ನು ಕ್ಷಮಿಸಲಿ; ಆತನ ಕೃಪೆ ನಮ್ಮನ್ನು ಕೈಬಿಡದೆ ಕಾಯಲಿ; ಆ ದೇವಮಾನವನ ದಿವ್ಯಸ್ಮೃತಿ ಕಂಗೆಟ್ಟಿರುವ ನಮ್ಮ ಜನತೆಯ ಮುನ್ನಡೆಗೆ ಗಗನೋನ್ನತ ದೀಪಸ್ತಂಭವಾಗಲಿ!

**ಮಹಾತ್ಮಾ ಗಾಂಧೀಕಿ ಜಯ್ !**

**ಜಯ್ ಹಿಂದ್ !**

---

ಗಾಂಧೀಜಿಯ ನಿಧನದ ಮರುದಿನ ಸಂಜೆ ಮೈಸೂರು ಆಕಾಶವಾಣಿಯಲ್ಲಿ ಮಾಡಿದ ಪ್ರಸಾರ ಭಾಷಣ (31-1-1984)
ಕೃಪೆ: ಕುವೆಂಪು ಕಂಡಗಾಂಧಿ, ಸಂಕಲನ: ಡಾ. ಹೊ. ಶ್ರೀನಿವಾಸಯ್ಯ, ಅಧ್ಯಕ್ಷರು: ಕ.ಗಾ.ಸ್ಮಾ.ನಿ, ಗಾಂಧೀಭವನ, ಬೆಂ.

# ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಕಾರ್ಯಕಾರಿ ಸಮಿತಿ


ಡಾ ಹೊ ಶ್ರೀನಿವಾಸಯ್ಯ
ಅಧ್ಯಕ್ಷರು


ಡಿ ಕೆ ಕೋದಂಡರಾಮು
ಜಂಟಿ ಕಾರ್ಯದರ್ಶಿ


ಪ್ರೊ ಜಿ ಬಿ ಶಿವರಾಜು
ಜಂಟಿ ಕಾರ್ಯದರ್ಶಿ


ಎಸ್ ಕೆ ಮೋಹನ್
ಸದಸ್ಯರು


ಎಸ್ ವಿ ಸೋಮನಟ್ಟಿ
ಸದಸ್ಯರು


ಲ. ನರಸಿಂಹಯ್ಯ
ಸದಸ್ಯರು


ಜೀರಿಗೆ ಲೋಕೇಶ್
ಸದಸ್ಯರು


ಪ್ರೊ. ಓ. ಅನಂತರಾಮಯ್ಯ
ಸದಸ್ಯರು


ಕೆ ಪಿ ಅನುಪಮ
ಸದಸ್ಯರು


ಉಮೇಶ್ ಬಳಗಾರ್
ಸದಸ್ಯರು


ಡಾ|| ವೂಡೆ. ಪಿ. ಕೃಷ್ಣ
ಸದಸ್ಯರು

## ಆಹ್ವಾನಿತ ಸದಸ್ಯರು


ಡಾ ಎಚ್ ಎಸ್ ದೊರೆಸ್ವಾಮಿ


ಡಾ|| ಜೆ ಎಸ್ ಪಾಟೀಲ


ಬಾಪುಗೌಡ ಪಾಟೀಲ


ಚೌಡಪ್ಪ


ಸಿದ್ದಾರ್ಥ ಶರ್ಮ


ಬಿ ಎಸ್ ಸತ್ಯನಾರಾಯಣ


ಲಕ್ಷ್ಮೀನಾರಾಯಣ


ಸದಾನಂದ


ಆರ್ ನರಸಿಂಹಯ್ಯ


ಎಚ್ ಬಿ ದಿನೇಶ್

# ಸುವರ್ಣ ಮಹೋತ್ಸವ ಆಚರಣಾ ಸಮಿತಿ ಪದಾಧಿಕಾರಿಗಳು



ನಾಡೋಜ ಪಾಟೀಲ ಪುಟ್ಟಪ್ಪ
ಅಧ್ಯಕ್ಷರು



ಹೆಚ್. ಹನುಮಂತಪ್ಪ
ಉಪಾಧ್ಯಕ್ಷರು



ಪಿ. ಜಿ. ಆರ್. ಸಿಂಧ್ಯಾ
ಸಂಚಾಲಕರು



ಡಾ॥ ಹೊ. ಶ್ರೀನಿವಾಸಯ್ಯ
ಸದಸ್ಯರು



ದಿ॥ ಪ್ರೊ. ಹೆಚ್. ಆರ್. ದಾಸೇಗೌಡ
ಸದಸ್ಯ ಕಾರ್ಯದರ್ಶಿ

# ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ ಪ್ರಕಟಣಾ ಸಮಿತಿ



ಪ್ರೊ. ಓ. ಅನಂತರಾಮಯ್ಯ
ಪ್ರಧಾನ ಸಂಪಾದಕರು



ಡಾ|| ಹೊ. ಶ್ರೀನಿವಾಸಯ್ಯ
ಅಧ್ಯಕ್ಷರು – ಸದಸ್ಯರು



ದಿ|| ಪ್ರೊ. ಹೆಚ್. ಆರ್. ದಾಸೇಗೌಡರು
ಕಾರ್ಯದರ್ಶಿ – ಸದಸ್ಯರು



ಲ. ನರಸಿಂಹಯ್ಯ
ಸದಸ್ಯರು



ಪ್ರೊ. ಎಂ. ವಿ. ಶ್ರೀನಿವಾಸ್
ಸದಸ್ಯರು



ಪ್ರೊ. ಜಿ. ರಾಮರತನ್
ಸದಸ್ಯರು



ಕಂಬಯ್ಯ
ಸದಸ್ಯರು



ನಾಗರಾಜ್
ಎಕ್ಸ್‌ಲೆಂಟ್ ಪ್ರಿಂಟರ್ಸ್

## ಸುವರ್ಣ ಮಹೋತ್ಸವ ಆಚರಣಾ ದಕ್ಷಿಣ ಕರ್ನಾಟಕ ಉಪಸಮಿತಿ



ಡಿ. ಕೆ. ಕೋದಂಡರಾಮು
ಸಂಚಾಲಕರು



ಲ. ನರಸಿಂಹಯ್ಯ
ಸದಸ್ಯರು



ಎನ್. ಪ್ರಭಾಕರ್
ಸದಸ್ಯರು

## ಸುವರ್ಣ ಮಹೋತ್ಸವ ಆಚರಣಾ ಉತ್ತರ ಕರ್ನಾಟಕ ಉಪಸಮಿತಿ



ಡಾ|| ಮಹೇಶ ನಲವಾಡ
ಸದಸ್ಯರು

ಬಸವಪ್ರಭು ಹೊಸಕೇರಿ
ಸದಸ್ಯರು



ಉಮೇಶ್ ಬಳಿಗಾರ್
ಸಂಚಾಲಕರು

## ಸುವರ್ಣ ಮಹೋತ್ಸವ ಆಚರಣಾ ಸಾಹಿತ್ಯ ಪ್ರಕಟಣಾ ಸಮಿತಿ



ಪ್ರೊ. ಓ. ಅನಂತರಾಮಯ್ಯ
ಸಂಚಾಲಕರು



ಪ್ರೊ ಮಲ್ಲೇಪುರಂ ಜಿ. ವೆಂಕಟೇಶ್
ಸದಸ್ಯರು



ಪ್ರೊ. ಎಂ. ವಿ. ಶ್ರೀನಿವಾಸ್
ಸದಸ್ಯರು



ಚನ್ನವೀರ ಗೌಡ
ಸದಸ್ಯರು

# ಗಾಂಧಿ ಭವನದ ಅಭಿವೃದ್ಧಿಗೆ ಸಹಕಾರ ನೀಡಿದವರು


ಆರ್. ಆರ್. ದಿವಾಕರ್
ಮಾಜಿ ಅಧ್ಯಕ್ಷರು ಗಾಂ.ಸ್ಮಾ.ನಿಧಿ


ನಿಟ್ಟೂರು ಶ್ರೀನಿವಾಸರಾವ್
ನಿವೃತ್ತ ಮುಖ್ಯ ನ್ಯಾಯಮೂರ್ತಿಗಳು


ಶ್ರೀ ರಾಮಕೃಷ್ಣ ಹೆಗ್ಗಡೆ
ಮಾಜಿ ಮುಖ್ಯಮಂತ್ರಿಗಳು


ಶ್ರೀ ಜಾಫರ್ ಷರೀಫ್
ಮಾಜಿ ಕೇಂದ್ರ ರೈಲ್ವೆ ಸಚಿವರು


ಶ್ರೀ ಎಂ. ವಿ. ರಾಜಶೇಖರನ್
ಮಾಜಿ ಕೇಂದ್ರ ಸಚಿವರು


ಶ್ರೀ ಹೆಚ್. ಡಿ. ಕುಮಾರಸ್ವಾಮಿ
ಮಾಜಿ ಮುಖ್ಯಮಂತ್ರಿಗಳು


ಶ್ರೀ ಬಿ. ಎಸ್. ಯಡಿಯೂರಪ್ಪ
ಮಾಜಿ ಮುಖ್ಯಮಂತ್ರಿಗಳು


ಶ್ರೀ ಡಿ. ವಿ. ಸದಾನಂದಗೌಡರು
ಮಾನ್ಯ ಮುಖ್ಯಮಂತ್ರಿಗಳು


ಶ್ರೀ ಶಂಕರಲಿಂಗೇಗೌಡರು, IAS
ಆಯುಕ್ತರು, ಬೃ.ಬೆಂ.ಮ.ಪಾ


ಶ್ರೀ ಸಿದ್ದಯ್ಯ., IAS
ಕಾರ್ಯದರ್ಶಿಗಳು, ಉನ್ನತ ಶಿಕ್ಷಣ ಇಲಾಖೆ


ಡಾ॥ ಮನು ಬಳಿಗಾರ್, IAS
ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ


ಶ್ರೀ ಭರತ್‌ಲಾಲ್ ಮೀನಾ, IAS
ಆಯುಕ್ತರು, ಬೆಂ.ಅ.ಪ್ರಾಧಿಕಾರ (ಬಿಡಿಎ)


ಶ್ರೀ ಬಸವರಾಜು, IAS
ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ


ಶ್ರೀ ಕೆ. ಉದಯ್
ಪ್ರಧಾನ ಮುಖ್ಯ ವಾಸ್ತು ಶಿಲ್ಪಿಗಳು

# ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಿಬ್ಬಂದಿ ವರ್ಗ



ಹೆಚ್. ಯೋಗೇಶ್

ಸುಶೀಲ



ಎನ್. ಮಾದೇಗೌಡ



ಚಂದ್ರಶೇಖರ್

ಹೆಚ್. ಹೆಚ್. ನಾಗರಾಜ್

ಡಿ. ಟಿ. ನಾರಾಯಣ



ಆರ್. ವೀಣಾ

ಶಶಿಕಲಾ



ಬಿ. ರಾಜಪ್ಪ



ಮಾಬುಸಾಬ್

ನಾಗವೇಣಿ



ವೆಂಕಟೇಶ್



1965ರ ಗಾಂಧಿ ಭವನದ
ವಿಹಂಗಮ ನೋಟ



ಗಾಂಧಿ ಭವನ ಉದ್ಘಾಟನಾ ಸಮಾರಂಭ
1965ರಲ್ಲಿ ಅಂದಿನ ರಾಷ್ಟ್ರಪತಿ
ಸರ್ವಪಲ್ಲಿ ರಾಧಾಕೃಷ್ಣನ್‌ರವರು
ಉದ್ಘಾಟಿಸುತ್ತಿರುವುದು



ಗಾಂಧಿ ಭವನ ಉದ್ಘಾಟನಾ ಸಮಾರಂಭದಲ್ಲಿ
ಅಂದಿನ ರಾಷ್ಟ್ರಪತಿ
ಸರ್ವಪಲ್ಲಿ ರಾಧಾಕೃಷ್ಣನ್‌ರವರು
ಸಭಿಕರನ್ನು ಉದ್ದೇಶಿಸಿ ಮಾತನಾಡುತ್ತಿರುವುದು



ಗಾಂಧಿ ಭವನದ ಕಾರ್ಯಕ್ರಮವೊಂದರಲ್ಲಿ
ಶ್ರೀಮತಿ ವಿಜಯಲಕ್ಷ್ಮಿ ಪಂಡಿತ್‌ರವರು ಮತ್ತು
ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪನವರು
ಹಾಗೂ ನಾಗಪ್ಪ ಆಳ್ವರವರು



ಗಾಂಧಿ ಭವನದ ಕಾರ್ಯಕ್ರಮವೊಂದರಲ್ಲಿ
ಅಂದಿನ ನಿಧಿಯ ಅಧ್ಯಕ್ಷರಾಧ
ಕಡಿದಾಳ ಮಂಜಪ್ಪನವರೊಂದಿಗೆ
ಜೆ. ಬಿ. ಕೃಪಲಾನಿಯವರು



ಮದ್ಯಪಾನ ವಿರೋಧಿ ಆಂದೋಲನದಲ್ಲಿ
ಕೆಂಗಲ್ ಹನುಮಂತಯ್ಯನವರೊಂದಿಗೆ
ಸತ್ಯವ್ರತ ಹಾಗೂ ಎ. ಕೆ. ಸುಬ್ಬಯ್ಯನವರು



ಕಡಿದಾಳ್ ಮಂಜಪ್ಪನವರ
ಕಾರ್ಯಕ್ರಮದಲ್ಲಿ ಬಿ. ಡಿ. ಜತ್ತಿಯವರು,
ಎಸ್. ಎಂ. ಕೃಷ್ಣ, ನಿಟ್ಟೂರು ಶ್ರೀನಿವಾಸರಾವ್
ಹಾಗೂ ನಿಧಿಯ ಅಧ್ಯಕ್ಷರಾದ
ಡಾ|| ಹೊ. ಶ್ರೀನಿವಾಸಯ್ಯ



ಮದ್ಯಪಾನ ವಿರೋಧಿ ಆಂದೋಲನ
ಶ್ರೀಮತಿ ಯಶೋದರಮ್ಮ ದಾಸಪ್ಪ
ಅವರೊಂದಿಗೆ ಮುರಾರ್ಜಿ ದೇಸಾಯಿ
ಮುಖ್ಯಮಂತ್ರಿ ವೀರೇಂದ್ರ ಪಾಟೀಲ್
ಹಾಗೂ ನಿಧಿಯ ಸಂಚಾಲಕರಾದ
ರಾಮಚಂದ್ರ ವಡವಿಯವರು



ಕಸ್ತೂರ ಬಾ ಭವನದ
ಶಿಲಾನ್ಯಾಸ ಸಮಾರಂಭದಲ್ಲಿ
ಮಾಜಿ ರೈಲ್ವೆ ಸಚಿವರಾದ ಜಾಫರ್ ಷರೀಫ್
ಅವರು ಶಿಲಾನ್ಯಾಸ ನೆರವೇರಿಸುತ್ತಿರುವುದು.
ಇವರೊಂದಿಗೆ ನ್ಯಾಯಮೂರ್ತಿ
ನಿಟ್ಟೂರು ಶ್ರೀನಿವಾಸರಾವ್

ದಂಡಿಯಾತ್ರೆ ಅಮೃತ ಮಹೋತ್ಸವ
ಕಾರ್ಯಕ್ರಮದ ಉದ್ಘಾಟನಾ ಸಮಾರಂಭದಲ್ಲಿ
ರಾಜ್ಯಪಾಲ ಟಿ. ಎನ್. ಚತುರ್ವೇದಿಯವರು
ಪಾದಯಾತ್ರೆಗೆ ಚಾಲನೆ ನೀಡುತ್ತಿರುವುದು.
ಜೊತೆಯಲ್ಲಿ ನಿಧಿಯ ಅಧ್ಯಕ್ಷ ಡಾ॥ ಹೊ. ಶ್ರೀನಿವಾಸಯ್ಯ,
ಕಾರ್ಯದರ್ಶಿ ಪ್ರೊ. ಎಚ್. ಆರ್. ದಾಸೇಗೌಡ
ಮತ್ತು ಬಿ. ಎಸ್. ಕೃಷ್ಣಯ್ಯರ್





ಜಯಶ್ರೀ ಟ್ರಸ್ಟ್ ದತ್ತಿ ಪುರಸ್ಕಾರ ಪ್ರದಾನ
ಸಮಾರಂಭ
ಶ್ರೀ ಮತ್ತೂರು ಕೃಷ್ಣಮೂರ್ತಿಯವರಿಗೆ
ರಾಜ್ಯಪಾಲರಾದ ಟಿ. ಎನ್. ಚತುರ್ವೇದಿಯವರಿಂದ
ಪುರಸ್ಕಾರ ಪ್ರದಾನ. ಜೊತೆಯಲ್ಲಿ
ಡಾ॥ ಹೊ. ಶ್ರೀನಿವಾಸಯ್ಯನವರು

ಸರ್ವೋದಯ ದಿನಾಚರಣೆ ಕಾರ್ಯಕ್ರಮದಲ್ಲಿ
ನಿಧಿಯ ಅಧ್ಯಕ್ಷರಾದ ಡಾ॥ ಹೊ. ಶ್ರೀ. ಅವರಿಂದ
ಗಾಂಧಿ ಪ್ರತಿಮೆಗೆ ಮಾಲಾರ್ಪಣೆ.
ಜೊತೆಯಲ್ಲಿ ಸೇವಾದಳದ ವಿದ್ಯಾರ್ಥಿಗಳು



# ಗಾಂಧಿ ಭವನ ಕಾರ್ಯಕ್ರಮ ಚಿತ್ರಾವಳಿ



ಗಾಂಧಿ ಭಾವಚಿತ್ರ ಉದ್ಘಾಟನಾ ಸಮಾರಂಭ
ನಿಧಿಯ ಅಧ್ಯಕ್ಷರಾದ
ಹೊ. ಶ್ರೀನಿವಾಸಯ್ಯ ಮತ್ತು ಶ್ರೀಮತಿ ಜಯಲಕ್ಷ್ಮಿ
ಜೊತೆಯಲ್ಲಿ ನಿಧಿಯ ಕಾರ್ಯದರ್ಶಿ
ಪ್ರೊ. ಹೆಚ್. ಆರ್. ದಾಸೇಗೌಡ




ಗಾಂಧಿ ಭವನದಲ್ಲಿ ನಡೆದ ಉಚಿತ
ಪ್ರಕೃತಿ ಚಿಕಿತ್ಸಾ ಶಿಬಿರದ ಉದ್ಘಾಟನಾ ಸಮಾರಂಭದಲ್ಲಿ
ಹೆಚ್. ಕೆ. ಪಾಟೀಲ್ ಅವರೊಂದಿಗೆ
ಡಾ|| ಹೊ. ಶ್ರೀನಿವಾಸಯ್ಯ ಮತ್ತು
ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷರಾದ
ಡಾ|| ವೂಡೆ ಪಿ. ಕೃಷ್ಣ



ಗಾಂಧಿ ಮತ್ತು ಆಧ್ಯಾತ್ಮ ವಿಚಾರ ಸಂಕಿರಣದಲ್ಲಿ
ಮಠಾಧೀಶರೊಂದಿಗೆ
ಪಾಟೀಲ ಪುಟ್ಟಪ್ಪ, ನಿಧಿಯ ಅಧ್ಯಕ್ಷರಾದ
ಡಾ|| ಹೊ. ಶ್ರೀ. ಮತ್ತು ನಿಧಿಯ ಕಾರ್ಯದರ್ಶಿ
ಡಾ|| ಎಚ್. ಆರ್. ದಾಸೇಗೌಡರು



ಗಾಂಧಿ ಜಯಂತಿ ಅಂಗವಾಗಿ ನಡೆದ
ಸದ್ಭಾವನಾ ಪಾದಯಾತ್ರೆಯಲ್ಲಿ
ದೂರದರ್ಶನ ಕೇಂದ್ರದ ಹಿರಿಯ ನಿರ್ದೇಶಕ
ಡಾ|| ಮಹೇಶ್ ಜೋಶಿ ಅವರೊಂದಿಗೆ
ನಿಧಿಯ ಅಧ್ಯಕ್ಷ ಹೊ. ಶ್ರೀ ಮತ್ತು
ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ
ಡಾ|| ವೂಡೆ ಪಿ. ಕೃಷ್ಣ

# ಸುವರ್ಣ ಮಹೋತ್ಸವ ಕಾರ್ಯಕ್ರಮ ಚಿತ್ರಾವಳಿ



ಸುವರ್ಣ ಮಹೋತ್ಸವ ಕಾರ್ಯಕ್ರಮ
ಉದ್ಘಾಟಿಸಿದ ಘನತೆವೆತ್ತ ರಾಜ್ಯಪಾಲರಾದ
ಹಂಸರಾಜ್ ಭಾರದ್ವಾಜ್‌ರವರಿಗೆ
ನೆನಪಿನ ಕಾಣಿಕೆ ನೀಡುತ್ತಿರುವುದು.




ಸುರ್ವಣ ಮಹೋತ್ಸವ ಕಾರ್ಯಕ್ರಮದ ಅಂಗವಾಗಿ
ಕರ್ನಾಟಕ ಗಾಂಧಿ ಸ್ಮಾರಕ ನಿಧಿ
ಜಮುನಾಲಾಲ್ ಬಜಾಜ್ ಸೇವಾ ಟ್ರಸ್ಟ್
ಸಹಯೋಗದಲ್ಲಿ ನಡೆಸಿದ ಗಾಂಧಿ ಪ್ರಣೀತ
ಯುವಶಿಬಿರದ ಸಮಾರೋಪ ಸಮಾರಂಭದಲ್ಲಿ
ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಆಯುಕ್ತ
ಭರತ್‌ಲಾಲ್ ಮೀನಾರೊಂದಿಗೆ ಪಾಟೀಲಪುಟ್ಟಪ್ಪ
ಹಾಗೂ ನಿಧಿಯ ಅಧ್ಯಕ್ಷ ಹೊ. ಶ್ರೀನಿವಾಸಯ್ಯನವರು



ಬಿಜಾಪುರ ಜಿಲ್ಲಾ ಸಮಾವೇಶದಲ್ಲಿ
ಡಾ|| ಹೊ. ಶ್ರೀ. ಉಪನ್ಯಾಸ
ನೀಡುತ್ತಿರುವುದು



ತುಮಕೂರು ಜಿಲ್ಲಾ ಸಮಾವೇಶದಲ್ಲಿ
ನಿಧಿಯ ಕಾರ್ಯದರ್ಶಿ
ಪ್ರೊ. ಎಚ್. ಆರ್. ದಾಸೇಗೌಡರವರು
ಸಭೆಯನ್ನುದ್ದೇಶಿಸಿ ಮಾತನಾಡುತ್ತಿರುವುದು.
ಜೊತೆಯಲ್ಲಿ ಎಚ್. ಎಸ್. ದೊರೆಸ್ವಾಮಿ
ಹಾಗೂ ಡಾ|| ಜೆ. ಎಸ್. ಪಾಟೀಲ,
ನಿಧಿಯ ಅಧ್ಯಕ್ಷ ಡಾ|| ಹೊ. ಶ್ರೀ.

# ಸುವರ್ಣ ಮಹೋತ್ಸವ ಕಾರ್ಯಕ್ರಮ ಚಿತ್ರಾವಳಿ



ಸುವರ್ಣ ಮಹೋತ್ಸವದ ಅಂಗವಾಗಿ ನಡೆದ ಮಕ್ಕಳ ನಾಟಕೋತ್ಸವ ಕಾರ್ಯಕ್ರಮದ ಉದ್ಘಾಟನಾ ಸಮಾರಂಭದಲ್ಲಿ ನಿಧಿಯ ಅಧ್ಯಕ್ಷ ಡಾ॥ ಹೊ. ಶ್ರೀ.ರವರು ಜ್ಯೋತಿ ಬೆಳಗಿಸುತ್ತಿರುವುದು. ಜೊತೆಯಲ್ಲಿ ನಾಟಕಕಾರ, ರಂಗಕರ್ಮಿ ಮಾ॥ ಹಿರಣ್ಣಯ್ಯ ಮತ್ತು ಕಾರ್ಯದರ್ಶಿ ಪ್ರೊ. ಎಚ್. ಆರ್. ದಾಸೇಗೌಡರು



ಕೊಪ್ಪಳ ಜಿಲ್ಲಾ ಸಮಾವೇಶದಲ್ಲಿ ಕಾನೂನು ವಿಶ್ವವಿದ್ಯಾನಿಲಯದ ಕುಲಪತಿ ಡಾ॥ ಜೆ. ಎಸ್. ಪಾಟೀಲ ಉಪನ್ಯಾಸ ನೀಡುತ್ತಿರುವುದು.



ಶಿವಮೊಗ್ಗ ಜಿಲ್ಲಾ ಸಮಾವೇಶದ ಕಾರ್ಯಕ್ರಮದಲ್ಲಿ ಉಪನ್ಯಾಸ ನೀಡುತ್ತಿರುವುದು. ವೇದಿಕೆಯಲ್ಲಿ ನಿಧಿಯ ಜಂಟಿ ಕಾರ್ಯದರ್ಶಿ ಬಿ. ಕೆ. ಕೋದಂಡರಾಮು, ಸದಸ್ಯರಾದ ಲ. ನರಸಿಂಹಯ್ಯ ಮತ್ತು ಉಪನ್ಯಾಸಕರಾದ ಡಾ॥ ರಮೇಶಚಂದ್ರ ದತ್ತರವರು



ಸುವರ್ಣ ಮಹೋತ್ಸವ ಕೋಲಾರ ಜಿಲ್ಲಾ ಸಮಾವೇಶದಲ್ಲಿ ಉಪನ್ಯಾಸದ ನಂತರ ಗಣ್ಯರೊಂದಿಗೆ ನಿಧಿಯ ಅಧ್ಯಕ್ಷ ಡಾ॥ ಹೊ. ಶ್ರೀ ಮತ್ತು ಕಾರ್ಯದರ್ಶಿ ಪ್ರೊ. ಎಚ್. ಆರ್. ದಾಸೇಗೌಡರು

# ಸುವರ್ಣ ಮಹೋತ್ಸವ ಕಾರ್ಯಕ್ರಮ ಚಿತ್ರಾವಳಿ



ಸುವರ್ಣ ಮಹೋತ್ಸವ ಗಾಂಧಿ ಕ್ವಿಜ್
ಕಾರ್ಯಕ್ರಮದ ವಿಜೇತ ವಿದ್ಯಾರ್ಥಿನಿಗೆ
ಡಾ॥ ಹೊ. ಶ್ರೀ. ಯವರು
ಪ್ರಶಸ್ತಿ ಪತ್ರ ನೀಡುತ್ತಿರುವುದು

ಸುವರ್ಣ ಮಹೋತ್ಸವ ಕಾರ್ಯಕ್ರಮ
ಗಾಂಧಿ ಪ್ರಣೀತ ಯುವ ಶಿಬಿರದಲ್ಲಿ
ಶಿಬಿರಾರ್ಥಿಗಳಿಗೆ
ಗಾಂಧಿ ಶಾಂತಿ ಪ್ರತಿಷ್ಠಾನದ ರಾಧಾಭಟ್
ಮತ್ತು ಲವಣಂ ಶ್ರೀ ಅವರು
ಉಪನ್ಯಾಸ ನೀಡುತ್ತಿರುವುದು





ಬಿಜಾಪುರದಲ್ಲಿ
ಸುವರ್ಣ ಮಹೋತ್ಸವ ಕಾರ್ಯಕ್ರಮದಲ್ಲಿ
ಕಾನೂನು ವಿಶ್ವವಿದ್ಯಾನಿಲಯದ ಕುಲಪತಿ
ಡಾ॥ ಜೆ. ಎಸ್. ಪಾಟೀಲ್‌ರವರು
ಉಪನ್ಯಾಸ ನೀಡುತ್ತಿರುವುದು

ಸುವರ್ಣ ಮಹೋತ್ಸವ ಸಮಾರೋಪ
ಸಮಾರಂಭಕ್ಕೂ ಮುನ್ನ ಮಾಜಿ ಮುಖ್ಯಮಂತ್ರಿ
ಬಿ. ಎಸ್. ಯಡಿಯೂರಪ್ಪನವರು
ಗಾಂಧಿ ಪ್ರತಿಮೆಗೆ ಮಾಲಾರ್ಪಣೆ
ಮಾಡುತ್ತಿರುವುದು. ಜೊತೆಯಲ್ಲಿ
ನಿಧಿಯ ಅಧ್ಯಕ್ಷರಾದ ಡಾ॥ ಹೊ. ಶ್ರೀ.





*DANDI MARCH   Gandhiji with seventy-nine followers   by Nandalal Bose*

Source : Gandhiji His Life and Work Published on his 75th Birthday, Oct. 2, 1944
Published by : Keshav Bhikaji Dhawale, 1944




On morning of March 12 at six with the whole world watching Gandhiji started with his 79 Sathyagrahis on the historic march to Dandi

*I shall work for an India in which the poorest shall feel that it is their country, in whose making they have an effective voice, an India in which there shall be no high class and low class of people, an India in which all communities shall live in perfect harmony. There can be no room in such India for the curse of untouchability or the curse of intoxicating drinks and drugs. Women will enjoy the same rights as men... This is the India of my dreams.*

M K Gandhi

Haripura Gate, Opp. c.i.t.



SITTING : Messers Krishna Sharma, Vadavi, Gorur, R. R. Diwakar, M. Yamunacharya, K. Sampathgiri Rao, Bindumadhava Burli
STANDING : Chikkanna, S. Pattabhiraman, G. V. Narayan Murthy, K. S. Narayana Swamy, Sampath
Editorial Committee Gandhi Granthamala (1956 to 1964)

Source : As We Look Back, p-20
K.G.S.N., Bangalore, 1982



Khan Abdul Gaffar Khan beeing received by Sri Tekur Subramanyam, (Chairman) and Sri Vadavi (Secretary) at Gandhi Bhavan, 1969 (Gandhi Centenary)



Sri Jayaprakash Narain and Smt. Prabhavathi Addressing workers at Gandhi Bhavan. Sri Diwakar (Chairman) 1972

Source : As We Look Back, p-20
K.G.S.N., Bangalore, 1982

Acharya Kripalani being received at Gandhi Bhavan (1978) by Sri Nittoor, Kadidal Manjappa, Sardar Venkataramaiah, K. S. Narayanaswamy, Mahadevithayi, N. Krishnaswamy and others



Women's procession to demand enforcement of prohibition from Gandhi Bhavan to Raj Bhavan Led by Smt Yashodharamma, Smt Mahdevithayi and Sardar Venkataramaiah (1976)

Source : As We Look Back, p-20
K.G.S.N., Bangalore, 1982



ಗಾಂಧೀಜಿಯವರು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ಗೆ 1936ರಲ್ಲಿ ಭೇಟಿ ನೀಡಿದಾಗ ಚಿತ್ರದಲ್ಲಿ ಸರ್. ಸಿ.ವಿ. ರಾಮನ್ ಹಾಗೂ ಮಹದೇವದೇಸಾಯಿಯವರನ್ನು ಕಾಣಬಹುದು. ಆಧಾರ : ಗಾಂಧಿ ಮತ್ತು ಕರ್ನಾಟಕ, ಗಾ.ಸ್ಮಾ.ನಿ., ಬೆಂಗಳೂರು

## ೧೯೪೨ "ಚಲೇಜಾವ್" ಚಳವಳಿಯ ಕಾಲಕ್ಕೆ ಗಾಂಧೀಜಿ ಕರ್ನಾಟಕಕ್ಕೆ ಕೊಟ್ಟ ಸಂದೇಶ

गांधीजीका संदेश

मेरी उमेद है कि इस
युद्ध में सब कर्नाटकी
पूरा हिस्सा देंगे।

मो. क. गांधी

८-८-४२

ಗಾಂಧೀಜಿಯವರ ಸಂದೇಶ

ಈ ಯುದ್ಧದಲ್ಲಿ ಎಲ್ಲ ಕರ್ನಾಟಕದವರು
ಪೂರ್ಣ ಭಾಗವಹಿಸುವರೆಂದು ನನ್ನ
ಭರವಸೆ ಇದೆ

ಮೋ. ಕ. ಗಾಂಧಿ

೮. ೮. ೪೨

ಕರೇಂಗೆ ಯಾ ಮರೇಂಗೆ - ಮಾಡುವೆ ಇಲ್ಲವೆ ಸಾಯುವೆ

– ಗಾಂಧೀಜಿ

ಆಧಾರ : ಗಾಂಧಿ ಮತ್ತು ಕರ್ನಾಟಕ, ಕರ್ನಾಟಕದವರಿಗೆ ಗಾಂಧೀಜಿಯ ಚಿತ್ರಗಳು, ಕ.ರಾ.ಗಾ.ಸ್ಮಾ.ನಿ., 1970, ಪು–521

Rajkot

17 4 39

Dear Sir Visvesvaraya,

Perhaps you will like to read the enclosure. It was so good of you to respond to the call of poor Orissa.

Yours sincerely,

M. K. Gandhi

ಸೇಗಾಂವ, ವರ್ಧಾ ೧೭-೪-೧೯೩೯

ಪ್ರಿಯ ಸರ್.ಎಂ.ವಿಶ್ವೇಶ್ವರಯ್ಯಾ,

ಇದರೊಂದಿಗೆ ಇಟ್ಟ ಪತ್ರವನ್ನು ಓದಲು ಬಹುಶಃ ನೀವು ಇಷ್ಟಪಡಬಹುದು. ಬಡ ಒರಿಸ್ಸಾದ ಕಡೆಗೆ ನೀವು ಓಕೊಟ್ಟುದು ತುಂಬಾ ಯೋಗ್ಯ.

ನಿಮ್ಮ ವಿಶ್ವಾಸಪಾತ್ರ
**ಮೋ.ಕ.ಗಾಂಧೀ**

ಆಧಾರ : ಗಾಂಧಿ ಮತ್ತು ಕರ್ನಾಟಕ, ಕರ್ನಾಟಕದವರಿಗೆ ಗಾಂಧೀಜಿಯ ಚಿತ್ರಗಳು, ಕ.ರಾ.ಗಾ.ಸ್ಮಾ.ನಿ., 1970, ಪು-539

ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರರಿಗೆ
ಗಾಂಧೀಜಿಯ ಪತ್ರ

Dear Ramaswami,

I wish you much success. Take care that you don't leave what you have before.

With love yours

14/5/35 MKGandhi

ಆಧಾರ : ಗಾಂಧಿ ಮತ್ತು ಕರ್ನಾಟಕ, ಕರ್ನಾಟಕದವರಿಗೆ ಗಾಂಧೀಜಿಯ ಪತ್ರಗಳು, ಕ.ರಾ.ಗಾ.ಸ್ಮಾ.ನಿ., 1970, ಪು–547

# ಗಾಂಧಿ ಸ್ಮಾರಕ ನಿಧಿ - ನಡೆದು ಬಂದ ಹಾದಿ

ರಾಷ್ಟ್ರಪಿತ ಮಹಾತ್ಮಗಾಂಧಿ ಅವರು ಭಾರತಕ್ಕೆ ಸ್ವಾತಂತ್ರ್ಯ ತಂದುಕೊಟ್ಟಾಗ ಅವರ ನಾಯಕತ್ವದಲ್ಲಿ ದೇಶ ಸರ್ವಾಂಗೀಣ ಉನ್ನತಿಯನ್ನು ಪಡೆಯುತ್ತದೆ ಎಂದು ಜನತೆ ಆಶಿಸಿತ್ತು. ಆದರೆ ಅನಿರೀಕ್ಷಿತವಾಗಿ 1948 ಜನವರಿ 30 ರಂದು ಗುಂಡೇಟಿಗೆ ಬಲಿಯಾಗಿ ಹುತಾತ್ಮರಾಗಿ ದೇಶವನ್ನು ಅನಾಥವನ್ನಾಗಿ ಮಾಡಿಬಿಟ್ಟರು ಆದರೆ ಈ ದಾರುಣ ಸನ್ನಿವೇಶದಲ್ಲಿ ದೇಶದ ನಾಯಕರು ಕೈಕಟ್ಟಿಕೊಂಡು ಕುಳಿತುಕೊಳ್ಳುವಂತೆ ಇರಲಿಲ್ಲ. ದೇಶದ ಮುನ್ನಡೆಗೆ ಗಾಂಧೀಜಿ ಅವರ ಧ್ಯೇಯಾದರ್ಶಗಳನ್ನು ಗುರಿಯಾಗಿಟ್ಟುಕೊಂಡು ಜನತೆಯ ಉದ್ಧಾರ ಮಾಡಬೇಕಿತ್ತು. ಇದಕ್ಕಾಗಿ ರಾಷ್ಟ್ರೀಯ ಕಾಂಗ್ರೆಸ್ಸಿನ ಕಾರ್ಯಕಾರಿ ಸಮಿತಿ ಗಾಂಧೀಜಿಯವರ ನೆನಪಿನಲ್ಲಿ ಕಾರ್ಯಾರಂಭಮಾಡಲು ನಿರ್ಧರಿಸಿತು.

ಈ ಉದ್ದೇಶದಿಂದ ಸೇರಿದ್ದ ಸಭೆಯಲ್ಲಿ ಗಾಂಧೀಜಿಯವರ ಆದರ್ಶಗಳನ್ನು ಸಾಕಾರಗೊಳಿಸಲು ಅವರ ಹೆಸರನ್ನು ಆಮೂಲಕ ಚಿರಸ್ಥಾಯಿಗೊಳಿಸಲು ರಾಷ್ಟ್ರೀಯ ಗಾಂಧಿಸ್ಮಾರಕ ಟ್ರಸ್ಟ್ (ಗಾಂಧಿ ನ್ಯಾಷನಲ್ ಮೆಮೊರಿಯಲ್ ಟ್ರಸ್ಟ್) ಅನ್ನು ಸ್ಥಾಪಿಸಲು ನಿರ್ಧರಿಸಿತು.

ಈ ಸಂಸ್ಥೆ ಗಾಂಧೀಜಿಯವರ ಧ್ಯೇಯೋದ್ದೇಶ ಗಳನ್ನು ಕಾರ್ಯಗತಗೊಳಿಸಲು 11 ಜನ ಸದಸ್ಯರನ್ನು ಒಳಗೊಂಡ ಹಂಗಾಮಿ ಕಾರ್ಯ ನಿರ್ವಾಹಕ ಸಮಿತಿಯನ್ನು ಡಾ.ರಾಜೇಂದ್ರ ಪ್ರಸಾದ್ ಅವರ ನೇತೃತ್ವದಲ್ಲಿ ರಾಷ್ಟ್ರೀಯ ಗಾಂಧೀಸ್ಮಾರಕ ಸಮಿತಿಯೊಂದನ್ನು ನೇಮಿಸಿತು. ಅದಕ್ಕೆ ಆಚಾರ್ಯ ಜೆ. ಬಿ ಕೃಪಲಾನಿ, ಜೆ.ಸಿ. ಕುಮಾರಪ್ಪ ಅವರು ಕಾರ್ಯದರ್ಶಿಗಳಾಗಿ ನೇಮಕವಾದರು. ಪಂಡಿತ ಜವಹರಲಾಲ್‌ನೆಹರು, ಸರದಾರ್ ವಲ್ಲಭಭಾಯಿ ಪಟೇಲ್, ಸಿ. ರಾಜಗೋಪಾಲಾಚಾರಿ, ಮೌಲಾನಾ ಅಬ್ದುಲ್‌ಕಲಾಂ ಅಜಾದ್, ರಾಜಕುಮಾರಿ ಅಮೃತಕೌರ್, ಶ್ರೀ ಜಗಜೀವನರಾಂ, ಶ್ರೀ ದೇವದಾಸ್ ಗಾಂಧಿ, ಶ್ರೀ ಜಯರಾಮದಾಸ್, ದೌಲತ್‌ರಾಂ ಸದಸ್ಯರಾದರು. ಈ ಸಮಿತಿ ರೂಪುಗೊಂಡ ಮೇಲೆ ಸಮಿತಿ ಅಧ್ಯಕ್ಷರಾದ ರಾಜೇಂದ್ರ ಪ್ರಸಾದ್ ಅವರು ಒಂದು ಮನವಿಯನ್ನು ಜನತೆಯ ಮುಂದಿಟ್ಟರು. ಗಾಂಧೀಸ್ಮಾರಕ ನಿಧಿ ಸಂಗ್ರಹಕ್ಕೆ ಎಲ್ಲರೂ ಹಣ ನೀಡಬೇಕು ಸಮಿತಿಯ ಕಾರ್ಯಗಳಿಗೆ ನೆರವಾಗಬೇಕು ಎಂದು ಕೋರಿದರು. ಮನವಿಯಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಕನಿಷ್ಠ ಪಕ್ಷ ತನ್ನ 10ದಿನಗಳ ಆದಾಯವನ್ನಾದರೂ ಗಾಂಧಿಸ್ಮಾರಕನಿಧಿಗೆ ನೀಡಿ ಸಂಸ್ಥೆಯ ಚಟುವಟಿಕೆಗಳಿಗೆ ನೆರವಾಗಬೇಕೆಂದು ಪ್ರಾರ್ಥಿಸಿದರು ಗಾಂಧೀಜಿ ಅವರ ಧ್ಯೇಯಗಳನ್ನು ಆಚರಣೆಯಲ್ಲಿ ತರುವುದು, ಅದಕ್ಕಾಗಿ ಯೋಜನೆಗಳನ್ನು ರೂಡಿಸುವುದು; ಅವರ ತತ್ವಗಳನ್ನು ಪ್ರಚಾರಮಾಡುವುದು; ಗಾಂಧೀಜಿಯ ಬದುಕಿಗೆ ಸಂಬಂಧಿಸಿದ, ಅವರು ಬಳಸುತ್ತಿದ್ದ ಎಲ್ಲಾ ಸಾಮಗ್ರಿಗಳನ್ನು ಸಂಗ್ರಹಿಸಿ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸುವುದು ಇವೇ ಮೊದಲಾದ ಕಾರ್ಯಗಳನ್ನು ಕೈಗೊಳ್ಳುವುದಾಗಿ ರಾಜೇಂದ್ರ ಪ್ರಸಾದರು ತಿಳಿಸಿದರು.

ಜಲಿಯನ್‌ವಾಲಾ ಬಾಗ್ ದುರಂತದ ಶೋಕಾಚರಣೆಯ ಸಪ್ತಾಹವನ್ನು ಪ್ರತಿವರ್ಷವೂ 1948ರ ಏಪ್ರಿಲ್ 6 ರಿಂದ 13ವರೆಗೆ ಆಚರಿಸಲಾಗುತ್ತಿತ್ತು ಈ ಅವಧಿಯಲ್ಲಿ ಗಾಂಧೀಸ್ಮಾರಕ ಟ್ರಸ್ಟ್ ದೇಣಿಗೆಗಳನ್ನು ನಿಧಿಗಾಗಿ ಸಂಗ್ರಹಿಸಲು ರಾಷ್ಟ್ರೀಯ ನಿಧಿ ಸಂಗ್ರಹ ಸಪ್ತಾಹವನ್ನು ಏಪ್ರಿಲ್ 6 ರಿಂದ 13ರವರೆಗೆ ಕೈಗೊಂಡಿತ್ತು.

ಈ ಅವಧಿಯಲ್ಲಿ ಎಲ್ಲ ಪಕ್ಷಗಳ ರಾಜಕೀಯ ದುರಂಧರರು ದೇಶಾದ್ಯಂತ ಸಾರ್ವಜನಿಕ ಸಭೆಗಳಲ್ಲಿ ಮಾತನಾಡಿ ಶಕ್ತಾನುಸಾರ ನೆರವು ಧನಸಹಾಯ ನೀಡಲು ಬಿನ್ನವಿಸಿದರು. ದೇಶದ ಎಲ್ಲ ಪತ್ರಿಕೆಗಳು ಸಾಕಷ್ಟು ಪ್ರಚಾರವನ್ನು ಈ ಬಗ್ಗೆ ನೀಡಿದವು.

ದೇಶಾದ್ಯಂತ ಎಲ್ಲಾ ರಾಜಕೀಯ ಧುರೀಣರು ಎಷ್ಟೇ ಅದ್ಭುತವಾಗಿ ಮಾತನಾಡಿ ಬಿನ್ನವಿಸಿಕೊಂಡರೂ ನಿರೀಕ್ಷಿತ ಪ್ರಮಾಣದಲ್ಲಿ ನಿಧಿ ಸಂಗ್ರಹವಾಗಲಿಲ್ಲ. ಆದಕಾರಣ ಅದೇ ವರ್ಷದ ಸೆಪ್ಟೆಂಬರ್ ತಿಂಗಳಿನಲ್ಲಿ ಸಮಿತಿಯ ಅಧ್ಯಕ್ಷರಾದ ರಾಜೇಂದ್ರ ಪ್ರಸಾದರು ಮತ್ತೊಮ್ಮೆ ನಿಧಿಗೆ ಧನ ಸಹಾಯ ನೀಡಲು ಜನತೆಯಲ್ಲಿ ಮನವಿ ಮಾಡಿದರು. ಈ ಮನವಿಯಲ್ಲಿ ಪ್ರತಿಯೊಂದು ಪ್ರಾಂತವೂ ತನ್ನ



ಜನಸಂಖ್ಯೆಗೆ ತಕ್ಕಂತೆ ತಲೆಗೊಂದು ರೂಪಾಯಿಯಂತೆ ನಿಧಿ ಸಂಗ್ರಹಿಸಬೇಕೆಂದು ತಿಳಿಸಿದರು ಹೀಗೆಮಾಡಿದ್ದಲ್ಲಿ 350 ದಶಲಕ್ಷ (ಮೂರುವರೆಕೋಟಿ) ರೂಪಾಯಿಗಳು ಸಂಗ್ರಹವಾಗಲು ಸಾಧ್ಯವಿದೆ ಎಂದರು. ಈ ನಿಧಿ ಸಂಗ್ರಹಕಾರ್ಯವನ್ನು ಒಂದು ವರ್ಷದೊಳಗೆ ಮಾಡಬೇಕು ಅನಂತರ ನಿಧಿಕಾರ್ಯವನ್ನು ಮುಂದುವರೆಸತಕ್ಕದ್ದಲ್ಲ ಎಂದು ನಿರ್ಧರಿಸಲಾಯಿತು.

ಈ ಅವಧಿಯಲ್ಲಿ ದೇಶಾದ್ಯಂತ ಬಡವನಿಂದ ಮೊದಲ್ಗೊಂಡು ಶ್ರೀಮಂತನವರೆಗೆ ಎಲ್ಲರೂ ಅತ್ಯಲ್ಪ ಹಣ ಅಪಾರಕೊಡುಗೆವರೆಗೆ ಧನಸಹಾಯ ಹರಿದುಬಂದು ಸ್ಮಾರಕ ನಿಧಿಗೆ ಸೇರಿತು. ಅಪಾರ ಪ್ರಮಾಣದಲ್ಲಿ ಜನತೆ ಶ್ರದ್ಧಾ ಭಕ್ತಿಗಳಿಂದ ನೀಡುತ್ತಿದ್ದ ಹಣವನ್ನು ಸಂಗ್ರಹಿಸಲು ದೇಶದ ಅಂಚೆಕಚೇರಿಗಳನ್ನು ಸರ್ಕಾರಿ ಖಜಾನೆಗಳನ್ನು ಬ್ಯಾಂಕ್‌ಗಳನ್ನು ನಿಧಿ ಸಂಗ್ರಹದ ಶಾಖೆಗಳನ್ನಾಗಿ ಮಾಡಲಾಯಿತು.

ಮೊದಲೇ ನಿರ್ಧರಿಸಿದಂತೆ ಗಾಂಧೀಜಿಯವರು ಹುತಾತ್ಮರಾದ ಮೊದಲ ವರ್ಷದ ತಿಥಿಯೊಂದಿಗೆ ನಿಧಿ ಸಂಗ್ರಹ ಕಾರ್ಯ ಮುಗಿಯಿತಾದರೂ ದೇಶದ ನಾನಾ ಮೂಲೆಗಳಲ್ಲಿ ಸಂಗ್ರಹವಾದ ಅಪಾರವಾದ ದೇಣಿಗೆಗಳನ್ನು ಕ್ರೋಢೀಕರಿಸುವುದು ಸುಲಭದ ಕೆಲಸವಾಗಿರಲಿಲ್ಲ. ಈ ಕೆಲಸ ಸುಮಾರು ನಾಲ್ಕು ವರ್ಷಗಳ ಕಾಲನಡೆಯಿತು. ಹತ್ತುಕೋಟಿ ತೊಂಬತ್ತೆಂಟು ಲಕ್ಷ ಇಪ್ಪತ್ತೊಂಬತ್ತು ಸಾವಿರದ ನೂರ ಆರು ರೂಪಾಯಿ ತೊಂಬತ್ತೈದು ಪೈಸಾಗಳಷ್ಟು ನಿಧಿ ಸಂಗ್ರಹವಾಗಿತ್ತು (ರೂ.10,98,29106 = 95 ಪೈಸೆ) ದೇಶದ ಜನಸಾಮಾನ್ಯರು ಒಟ್ಟಾಗಿ ನೀಡಿದ ನಿಧಿಗಳ ಪೈಕಿ ಈ ನಿಧಿ ಅತ್ಯಧಿಕ ಪ್ರಮಾಣದ ನಿಧಿಯಾಗಿತ್ತು. ರಾಷ್ಟ್ರಪಿತನ ನೆನಪಿಗಾಗಿ ಸಂಗ್ರಹಿಸಿದ ಈ ನಿಧಿಗೆ ಸುಮಾರು ಒಂದು ಕೋಟಿ ಜನ ದೇಣಿಗೆ ನೀಡಿದ್ದರು.

## ಗಾಂಧೀಸ್ಮಾರಕ ನಿಧಿ ಟ್ರಸ್ಟ್

ನಿಧಿ ಸಂಗ್ರಹವಾದ ಮೇಲೆ ಹಂಗಾಮಿ ಸಮಿತಿ ಟ್ರಸ್ಟ್ (ಧರ್ಮದರ್ಶಿ ಮಂಡಳಿ) ಯೊಂದನ್ನು ನೇಮಕ ಮಾಡಿ ಟ್ರಸ್ಟಿನ ನಿಯಮಾವಳಿಗಳನ್ನು ಧ್ಯೇಯೋದ್ದೇಶಗಳನ್ನು ಸಿದ್ಧಪಡಿಸಿತು. ಈ ನಿಯಮಾವಳಿಯ ಕರಡು ಪ್ರತಿಯನ್ನು ಸಿದ್ಧಪಡಿಸಲು ಮಂಗಳದಾಸ್ ಪಕ್ವಾಸ ಅವರನ್ನು ಕೋರಿತು. ಅವರು ಸಿದ್ಧಪಡಿಸಿದ ಕರಡು ಪ್ರತಿಯನ್ನು ಪರಿಶೀಲಿಸಲು ಒಂದು ಉಪಸಮಿತಿಯನ್ನು ನೇಮಿಸಿತು.

ಉಪಸಮಿತಿ ಪರಿಶೀಲಿಸಿದ ಮಂಗಳದಾಸ ಪಕ್ವಾಸ ಅವರು ಸಿದ್ಧಪಡಿಸಿದ ಟ್ರಸ್ಟಿನ ನಿಯಮಾವಳಿಯನ್ನು ಕೆಲವು ಮಾರ್ಪಾಟುಗಳೊಂದಿಗೆ ಹಂಗಾಮಿಸಮಿತಿ 1948ರ ಡಿಸೆಂಬರ್ ತಿಂಗಳಿನಲ್ಲಿ ಸಭೆ ಸೇರಿ ಅಂಗೀಕರಿಸಿತು. ರಾಜೇಂದ್ರ ಪ್ರಸಾದ್ ಸರದಾರ್ ವಲ್ಲಭಭಾಯಿ ಪಟೇಲ್, ಮೌಲಾನಾ ಅಬುಲ್ ಕಲಾಂ ಅಜಾದ್ ಮತ್ತು ಆಚಾರ್ಯ ಕೃಪಲಾನಿ ಅವರನ್ನು ಒಳಗೊಂಡ ಉಪಸಮಿತಿಗೆ ಟ್ರಸ್ಟಿಗೆ ಸದಸ್ಯರನ್ನು ಆಯ್ಕೆ ಮಾಡಲು ತಿಳಿಸಿತು.

ಈ ಉಪಸಮಿತಿಯು 1949 ಫೆಬ್ರವರಿಯಲ್ಲಿ ಸಭೆ ಸೇರಿ ಚರ್ಚಿಸಿ 24 ಜನ ಸದಸ್ಯರನ್ನು ಟ್ರಸ್ಟಿಗೆ ನಾಮಕರಣ ಮಾಡಿತು. ಈ ಎಲ್ಲ ಸದಸ್ಯರು ಗಾಂಧೀಜಿ ಅವರ ಬದುಕಿಗೆ ನಿಕಟವಾಗಿದ್ದರು. ನಿಧಿ ಸಂಗ್ರಹಕಾರ್ಯದಲ್ಲಿ ಸಕ್ರಿಯ ಪಾತ್ರವಹಿಸಿದ್ದರು ಗಾಂಧೀಜಿಯವರ ಆದರ್ಶಗಳನ್ನು ಚೆನ್ನಾಗಿ ಅರಿತಿದ್ದರು. ರಾಜಕೀಯ, ಸಾಮಾಜಿಕ ಔದ್ಯೋಗಿಕ ಕ್ಷೇತ್ರಗಳಲ್ಲಿ ಗಣ್ಯರಾಗಿದ್ದರು.

ಟ್ರಸ್ಟ್ ಮಾರ್ಚಿ ತಿಂಗಳಿನಲ್ಲಿ ಸಭೆ ಸೇರಿ ಸರ್ವಾನುಮತದಿಂದ ಡಾ. ರಾಜೇಂದ್ರಪ್ರಸಾದ್ ಅವರನ್ನು ಟ್ರಸ್ಟಿನ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿತು. ಏಪ್ರಿಲ್ ತಿಂಗಳಿನಿಂದ ನಿಯಮಾವಳಿಯನ್ನು ಜಾರಿಗೆ ತಂದು ಚಟುವಟಿಕೆಗಳನ್ನು ಪ್ರಾರಂಭಿಸಿತು.

ಅಧ್ಯಕ್ಷರಾಗಿ ರಾಜೇಂದ್ರ ಪ್ರಸಾದರು, ಉಪಾಧ್ಯಕ್ಷರಾಗಿ ಸರ್ದಾರ್ ವಲ್ಲಭಬಾಯಿ ಪಟೇಲ್ ನೇಮಕವಾದರು. ಪಂಡಿತ ಜವಹರಲಾಲ್, ಶಂಕರರಾವ್ ದೇವ್, ಜಿ. ಡಿ. ಬಿರ್ಲಾ, ಝುಕೀರ್ ಹುಸೇನ್, ಶ್ರೀಮತಿ ಸುಚೇತಾ ಕೃಪಾಲಾನಿ, ಎ. ವಿ. ಟಕ್ಕರ್‌ಬಾಬಾ, ಕೃಷ್ಣದಾಸ್‌ಜಾಜು, ಯಶೋಧರಮ್ಮ ದಾಸಪ್ಪ ಇವರು ಸದಸ್ಯರಾಗಿ ಕಾರ್ಯ ಸಮಿತಿಗೆ ಆಯ್ಕೆಯಾದರು. ನಿಧಿಯ ಕಾರ್ಯದರ್ಶಿ ಲಕ್ಷೀದಾಸ್ ಪುರುಷೋತ್ತಮ ಅವರು ಅಧಿಕಾರಿ ಸದಸ್ಯರಾದರು. ಜಿ.ವಿ. ಮಾವಲಂಕರ್, ಶ್ರೀ ಲಕ್ಷ್ಮೀನಾರಾಯಣ್ ಮತ್ತು ಮಹಾವೀರಪ್ರಸಾದ್ ಪ್ರೋದ್ದಾರ್ ಅವರನ್ನು ನಾಮಕರಣ ಸದಸ್ಯರನ್ನಾಗಿ ಮಾಡಲಾಯಿತು.

ಟ್ರಸ್ಟಿನ ಧ್ಯೇಯೋದ್ದೇಶಗಳನ್ನು 12 ಘಟಕಗಳನ್ನಾಗಿ ವಿಭಾಗಿಸಿ ಗಾಂಧೀಜಿ ಅವರ ಆದರ್ಶ ಕಾರ್ಯಗಳನ್ನು



ವಿವಿಧ ರೀತಿಯಲ್ಲಿ ನಿರಂತರವಾಗಿ ಕಾರ್ಯಗತಗೊಳಿಸಲು ನಿರ್ಧರಿಸಲಾಯಿತು. ಟ್ರಸ್ಟಿನ ನಿಧಿಯನ್ನು ಈ ಎರಡು ಉದ್ದೇಶ ಸಾಧನೆಗಳಿಗಾಗಿ ಬಳಸಲು ನಿರ್ಧರಿಸಲಾಯಿತು.

**ಗಾಂಧೀಜಿ ಅವರ ಧ್ಯೇಯೋದ್ದೇಶಗಳನ್ನು ಕಾರ್ಯಗತಗೊಳಿಸಲು ಟ್ರಸ್ಟ್ ಕೈಗೊಂಡ 12 ಬಗೆಯ ಕಾರ್ಯ ವಿಧಾನಗಳು ಹೀಗಿವೆ.**

1. ಗಾಂಧೀಜಿ ಅವರು ತಮ್ಮ ಜೀವಿತಾವಧಿಯಲ್ಲಿ ಕೈಗೊಂಡ ರಚನಾತ್ಮಕ ಕಾರ್ಯಗಳ ನಿರ್ವಹಣೆ ಮತ್ತು ಮುನ್ನಡೆಗೆ ನೆರವಾಗುವ ಚಟುವಟಿಕೆಗಳನ್ನು ನಡೆಸುವುದು ಮತ್ತು ಈ ಧ್ಯೇಯಗಳಿಗೆ ಅನುಗುಣವಾಗಿ ಜನಸಾಮಾನ್ಯರ ಹಾಗೂ ದೀನಜನರ ಕಲ್ಯಾಣಕ್ಕೆ ನೆರವಾಗುವ ಯೋಜನಾ ಕಾರ್ಯಗಳನ್ನು ಕೈಗೊಳ್ಳುವುದು.

2. ಟ್ರಸ್ಟಿನ ಹಾಗೂ ಗಾಂಧೀಜಿಯ ಧ್ಯೇಯೋದ್ದೇಶಗಳನ್ನು ಒಳಗೊಂಡು ಕಾರ್ಯನಿರತವಾದ ಸಂಸ್ಥೆ / ಆಶ್ರಮ / ಸಂಘ ಸಮುದಾಯಗಳಿಗೆ ಎಲ್ಲ ವಿಧವಾದ ಆರ್ಥಿಕ ಹಾಗೂ ಸಹಾಯವನ್ನು ನಿರ್ವಹಣೆಗೆ ಮತ್ತು ಚಟುವಟಿಕೆಗಳಿಗೆ ನೀಡುವುದು.

3. ಹೆರಿಗೆ ಮತ್ತು ಶಿಶು ಸಂರಕ್ಷಣಾ ಕೇಂದ್ರಗಳು, ಮಕ್ಕಳ ಮತ್ತು ಮಹಿಳೆಯರ ಅನಾಥಾಶ್ರಮಗಳು, ಬಡವರಿಗೆ ನೆರವಾಗುವ ಧರ್ಮಾರ್ಥ ಸಂಸ್ಥೆಗಳು ಮತ್ತು ಆಸ್ಪತ್ರೆಗಳು, ಮಕ್ಕಳ ಕಲ್ಯಾಣಕೇಂದ್ರಗಳು ಮೊದಲಾದ ಮಕ್ಕಳ ಮಹಿಳೆಯರ ಬಡವರ ಸಂಸ್ಥೆಗಳ ಸ್ಥಾಪನೆ ನಿರ್ವಹಣೆಗಳಿಗೆ ಅನುದಾನ ನೀಡುವುದು ಅಥವಾ ನಿರ್ವಹಣಾ ವೆಚ್ಚ ನೀಡಿ ಪ್ರೋತ್ಸಾಹಿಸುವುದು.

4. ಭಾರತದ ಹಿಂದುಳಿದ ಪ್ರದೇಶಗಳ ಹಾಗೂ ಗ್ರಾಮಾಂತರ ಬಡತನದ ಪ್ರದೇಶಗಳಲ್ಲಿ ಜನರ ಆರೋಗ್ಯ ರಕ್ಷಣೆ ಮತ್ತು ನೈರ್ಮಲ್ಯ ಕಾರ್ಯಗಳಿಗೆ ಪ್ರೋತ್ಸಾಹಿಸುವುದು ನೆರವು ನೀಡುವುದು ಮತ್ತು ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳಲು ಯೋಜನೆಗಳನ್ನು ರೂಪಿಸಿ ಆರ್ಥಿಕ ಸಹಾಯ ನೀಡುವುದು.

5. ಕುಷ್ಠರೋಗ ನಿವಾರಣಾ ಕೇಂದ್ರಗಳನ್ನು ಪ್ರಾರಂಭಿಸುವುದು ಕುಷ್ಠರೋಗಿಗಳ ಕಾಲೋನಿಗಳ ಅಭಿವೃದ್ಧಿಗೆ ನೆರವಾಗುವುದು ಕುಷ್ಠರೋಗ ನಿವಾರಣ ಮತ್ತು ಸಂಶೋಧನ ಕೇಂದ್ರಗಳಿಗೆ ಸಹಾಯಮಾಡುವುದು ಮುಂತಾದ ಕ್ರಮಗಳನ್ನು ಕೈಗೊಳ್ಳುವುದು.

6. ನಯೀ ತಾಲೀಂ ಮೂಲ ಶಿಕ್ಷಣ ಪದ್ಧತಿಯನ್ನು ಪ್ರೋತ್ಸಾಹಿಸುವುದರ ಮೂಲಕ ಶಿಕ್ಷಣಾಭಿವೃದ್ಧಿಗೆ ನೆರವಾಗುವುದು. ಮಕ್ಕಳಿಗೆ ಮತ್ತು ವಯಸ್ಕರಿಗೆ ಶಿಕ್ಷಣ ತರಬೇತಿ ನೀಡುವುದು. ಗೃಹವಿಜ್ಞಾನದಲ್ಲಿ, ಕುಶಲ ಕೈಗಾರಿಕೆಗಳಲ್ಲಿ ತರಬೇತಿ ನೀಡಿ ಮಹಿಳೆಯರನ್ನು ಗ್ರಾಮೋದ್ಯೋಗಗಳಲ್ಲಿ ತೊಡಗಿಸುವುದು. ಗ್ರಾಮಾಂತರ ಪ್ರದೇಶಗಳಲ್ಲಿ ಈ ಮೂಲಕ ಗ್ರಾಮೀಣ ಭಾರತದ ಜನತೆಯ ಉದ್ಧಾರಕ್ಕೆ ಶ್ರಮಿಸುವುದು.

7. ಮಹಾತ್ಮಾಗಾಂಧಿಯವರು ಬರೆದು ಪ್ರಕಟಿಸಿದ ಗ್ರಂಥಗಳು, ಲೇಖನಗಳು, ಪತ್ರಿಕೆಗಳು, ಪತ್ರವ್ಯವಹಾರ ಮತ್ತು ಇತರ ದಾಖಲೆಗಳು ಇತ್ಯಾದಿ ನಾನಾ ಭಾಷೆಗಳಲ್ಲಿರುವ ಸಾಹಿತ್ಯವನ್ನು ಸಂಗ್ರಹಿಸುವುದು, ಅವುಗಳ ಅಧ್ಯಯನ ಪ್ರಚಾರಗಳಿಗೆ ಅವಕಾಶ ನೀಡುವುದು, ಸತ್ಯ, ಅಹಿಂಸೆ, ವಿಶ್ವಶಾಂತಿ, ವಿಶ್ವಭ್ರಾತೃತ್ವ, ಅರ್ಥಶಾಸ್ತ್ರ, ಸಮಾಜಶಾಸ್ತ್ರ ಮೊದಲಾದ ವಿಷಯಗಳಲ್ಲಿ ಗಾಂಧೀ ತತ್ವಗಳ ಸಾಹಿತ್ಯದ ಕಲೆಯಿಂದ ಸಾಮಾಜಿಕ ಅಧ್ಯಯನ ಪ್ರಚಾರ ಚಟುವಟಿಕೆಗಳಿಗಾಗಿ ಗಾಂಧೀ ಅಧ್ಯಯನ ಕೇಂದ್ರಗಳನ್ನು ಪುಸ್ತಕ ಭಂಡಾರಗಳನ್ನು ಸ್ಥಾಪಿಸುವುದು.

8. ಮಹಾತ್ಮಗಾಂಧಿಯವರ ಜೀವನದ ಎಲ್ಲ ಮಜಲುಗಳನ್ನು ಪ್ರತಿನಿಧಿಸುವ, ಗಾಂಧೀಜಿಯ ವಿಚಾರಧಾರೆಯನ್ನು ತಿಳಿಸುವ, ಎಲ್ಲ ಬಗೆಯ ಪುಸ್ತಕ ಪತ್ರಿಕೆಯ ಲೇಖನ ಪತ್ರಗಳು, ಗಾಂಧೀ ಬಳಸಿದ ವಸ್ತುಗಳು ಮೊದಲಾದವುಗಳ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಿ 'ಗಾಂಧಿ ಜೀವನದರ್ಶನ' ಜನತೆಗೆ ದೊರೆಯುವಂತೆ ಮಾಡಿಸುವುದು. ಗಾಂಧೀ ಮ್ಯೂಸಿಯಂ ನಿರ್ವಹಣೆ ಮಾಡುವುದು.

9. ಮಹಾತ್ಮಗಾಂಧೀ ಅವರು ಸಂಚರಿಸಿದ ಸ್ಥಳಗಳಲ್ಲಿ ಸ್ಮಾರಕಗಳ ನಿರ್ಮಾಣ ಮತ್ತು ಗಾಂಧಿ ಸಂಚರಿಸಿ ಬೀಡುಬಿಟ್ಟ ನೆಲೆಗಳ ಸಂರಕ್ಷಣೆ. ಅಲ್ಲಿ ಅವರು ಭೇಟಿ ಮಾಡಿದ ಜನರ ಮಾತುಕತೆಗಳ, ಬರಹಗಳ, ಕಾರ್ಯಕ್ರಮಗಳ ಸಂಗ್ರಹ ಮಾಡುವುದು.

10. ಮೇಲ್ಕಂಡ ಗಾಂಧಿ ತತ್ವಾದರ್ಶಗಳ ಸಾಧನೆಗೆ ಮತ್ತು ಚಟುವಟಿಕೆಗಳನ್ನು ನಡೆಸಲು ಸ್ತ್ರೀ ಪುರುಷ ಕಾರ್ಯಕರ್ತರನ್ನು ತರಬೇತಿ ನೀಡಿ ಸಿದ್ಧಗೊಳಿಸುವುದು.

11. ಗಾಂಧಿ ತತ್ವ ಮತ್ತು ಬದುಕಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ನಡೆಸುವ ಗ್ರಾಮಾಂತರ ಮತ್ತು ನಗರ ಪ್ರದೇಶಗಳಲ್ಲಿರುವ ವ್ಯಕ್ತಿಗಳಿಗೆ ಅಥವಾ ಸಂಸ್ಥೆಗಳಿಗೆ



ಗಾಂಧೀ ವಿಚಾರ, ತತ್ವಗಳ ಆಚರಣೆಗೆ ಕೈಗೊಳ್ಳುವ ಅನುದಾನವನ್ನು ನೀಡುವುದು. ಈ ನೆರವನ್ನು ಈಗಾಗಲೇ ಅಸ್ತಿತ್ವದಲ್ಲಿರುವ ಸಂಸ್ಥೆಗಳಿಗೆ ಅಥವಾ ಹೊಸದಾಗಿ ಸ್ಥಾಪಿಸುವ ಸಂಸ್ಥೆಗಳಿಗೆ ನೀಡುವುದು.

12. ಜಾತಿ, ಮತ, ಕುಲ, ಸ್ತ್ರೀಪುರುಷ ಭೇದವಿಲ್ಲದೆ ಗಾಂಧೀ ತತ್ವಾನುಸಾರ ಚಟುವಟಿಕೆಗಳನ್ನು ನಡೆಸುವ ಎಲ್ಲ ಆಶ್ರಮಗಳಿಗೆ, ಸಂಸ್ಥೆಗಳಿಗೆ, ಸಮುದಾಯ ಕೇಂದ್ರಗಳಿಗೆ ನಿರ್ವಹಣಾ ವೆಚ್ಚವನ್ನಾಗಲೀ ಇತರೆ ವೆಚ್ಚವನ್ನಾಗಲೀ ನಿಧಿಯಿಂದ ನೀಡುವುದರ ಮೂಲಕ ಗಾಂಧಿ ತತ್ವ ಪ್ರಚಾರ ಮಾಡುವುದು ಮತ್ತು ಅನುಷ್ಠಾನಗೊಳಿಸುವುದು.

### ಪ್ರಾಂತೀಯ ಘಟಕಗಳ ವಿಚಾರ

ಟ್ರಸ್ಟಿನ ಆಡಳಿತವು ಟ್ರಸ್ಟಿನ ಸನ್ನದುವಿ (ನಿಯಮಾವಳಿ)ನಲ್ಲಿ ಉಲ್ಲೇಖಿಸಿರುವ ಪ್ರಕಾರ, ಆಯಾ ಪ್ರಾಂತಗಳಿಂದ ಸಂಗ್ರಹವಾದ ಹಣದಲ್ಲಿ 3/4 ಭಾಗವನ್ನು ಅಲ್ಲಿಯ ಕಾರ್ಯಕ್ರಮ ಯೋಜನೆ ಚಟುವಟಿಕೆಗಳಿಗಾಗಿಯೇ ವಿನಿಯೋಗಿಸಬೇಕು. ಉಳಿದ 1/4 ಭಾಗದ ಹಣವನ್ನು ಟ್ರಸ್ಟ್ ಅಖಿಲಭಾರತ ಯೋಜನೆಗಳ ಅನುಷ್ಠಾನಕ್ಕೆ ಬಳಸಬೇಕು.

ಮುಂಬಯಿ ಪ್ರಾಂತ್ಯದಲ್ಲಿ ಮಾತ್ರ ಅಲ್ಲಿ ಸಂಗ್ರಹಿತವಾದ ಹಣದಲ್ಲಿ 1/4 ಭಾಗ ಮಾತ್ರ ಅಲ್ಲಿಯ ಟ್ರಸ್ಟಿನ ಕೇಂದ್ರನಿಧಿಗೆ ಜಮಾ ಮಾಡತಕ್ಕದ್ದು. ದಾನಿಗಳು ಯರಾದರೂ ತಾವು ಕೊಟ್ಟ ದೇಣಿಗೆಯನ್ನು ನಿರ್ದಿಷ್ಟ ಉದ್ದೇಶಕ್ಕೆ ಹಾಗೂ ಕಾರ್ಯಗಳಿಗಾಗಿ ವಿನಿಯೋಗಿಸ ಬೇಕೆಂದು ಷರತ್ತು ವಿಧಿಸಿದ್ದರೆ ಆ ಹಣವನ್ನು ಬೇರಾವ ಉದ್ದೇಶಕ್ಕೂ ಬಳಸಬಾರದು ಗೊತ್ತುಪಡಿಸಿದ ಉದ್ದೇಶಕ್ಕೆ ಮಾತ್ರ ಬಳಸತಕ್ಕದ್ದು. ಕೇಂದ್ರ ಸಮಿತಿಯು ತನ್ನ ಕಾರ್ಯ ಸೂಚಿಯನ್ನು ನಿರ್ದೇಶಿಸಲು ರಾಷ್ಟ್ರದಲ್ಲಿ 25 ಘಟಕಗಳನ್ನು ಬ್ರಿಟಿಷ್ ರಾಜ್ಯದಲ್ಲೂ ದೇಶೀಯ ಸಂಸ್ಥಾನಗಳಲ್ಲೂ ಸ್ಥಾಪಿಸತಕ್ಕದ್ದು. ಈ ಘಟಕಗಳು ನಿರ್ಮಾಣವಾದ ಕಾಲಕ್ಕೆ ಭಾಷಾವಾರು ಪ್ರಾಂತ್ಯಗಳು ಇನ್ನೂ ರೂಪುಗೊಂಡಿರಲಿಲ್ಲ. ಭಾಷಾವಾರು ಪ್ರಾಂತ್ಯ ರಚನೆ ಆದ ಮೇಲೆ ಈ ಘಟಕಗಳ ಸಂಖ್ಯೆ 16ಕ್ಕೆ ಇಳಿಯಿತು. ಪ್ರತಿಯೊಂದು ಪ್ರಾಂತೀಯ ಘಟಕದಲ್ಲೂ 'ಸಂಚಾಲಕ' ಎಂಬ ಕಾರ್ಯನಿರ್ವಾಹಕ ಅಧಿಕಾರಿಯನ್ನು ನೇಮಿಸಲಾಯಿತು. ಗಾಂಧೀಜಿ ಜೀವನದಲ್ಲಿ ತತ್ವಗಳನ್ನು ತಿಳಿದು ಅನುಷ್ಠಾನಗೊಳಿಸಿ ರಚನಾತ್ಮಕ ಚಟುವಟಿಕೆಗಳಲ್ಲಿ ನಿರತನಾದ ವ್ಯಕ್ತಿಯನ್ನು ಸಂಚಾಲಕ ಪದವಿಗೆ ಆರಿಸಲಾಗುತ್ತಿತ್ತು. ಈ ಸಂಚಾಲಕ ಕಾರ್ಯ ನಿರ್ವಾಹಕ ವ್ಯಕ್ತಿಗೆ ಸಹಾಯಕ್ಕೆ 12 ಸದಸ್ಯರ ಸಲಹಾ ಸಮಿತಿ ಇರುತ್ತಿತ್ತು.

1957ರವರೆಗೆ ಭಾಷಾವಾರು ಪ್ರಾಂತ್ಯಗಳು ನಿರ್ಮಾಣವಾಗುವವರೆಗೆ ಎಲ್ಲ ಚಟುವಟಿಕೆಗಳು ಕೇಂದ್ರದ ಅಧೀನದಲ್ಲೇ ಇರುತ್ತಿತ್ತು. ಎಲ್ಲಾ ಪ್ರಾಂತ್ಯಗಳ ಯೋಜನೆಗಳು, ಕಾರ್ಯಕ್ರಮಗಳು, ಆಡಳಿತದ ವಿಚಾರಗಳು ಕೇಂದ್ರ ಸಮಿತಿಯ ಮಾರ್ಗದರ್ಶನದಂತೆಯೇ ನಡೆಯಬೇಕಿತ್ತು ಅವುಗಳನ್ನು ಪ್ರಾಂತ್ಯ ಸಮಿತಿಗಳು ದೆಹಲಿಯ ಕೇಂದ್ರ ಸಮಿತಿಗೆ ತಿಳಿಸಿ ಒಪ್ಪಿಗೆ ಪಡೆದು ಕಾರ್ಯೋನ್ಮುಖವಾಗಬೇಕಾಗಿತ್ತು.

ದೆಹಲಿ ಕಾರ್ಯನಿರ್ವಾಹಕ ಸಮಿತಿಯ ನಿರ್ದೇಶಾನುಸಾರ ಪ್ರಾಂತೀಯ ಘಟಕಗಳು ಆರ್ಥಿಕ ನೆರವನ್ನು ಪಡೆದು ಕಾರ್ಯ ನಿರ್ವಹಿಸಬೇಕಿತ್ತು. ಕೇಂದ್ರದ ಹಿಡಿತ ಅಖಿಲಭಾರತೀಯ ಸಂಘಟನೆ ದೃಷ್ಟಿಯಿಂದ ಅಗತ್ಯವೆನ್ನಿಸಿದ್ದರೂ ಕಾಲಕ್ರಮೇಣ ಸ್ಥಳೀಯ ಕೇಂದ್ರಗಳು ಮತ್ತು ಪ್ರಾಂತೀಯ ಘಟಕಗಳು ಕೇಂದ್ರದ ಹಿಡಿತದ ಕಾರಣ ನಿರಾಸಕ್ತಿ ತೋರತೊಡಗಿದವು. ಇದನ್ನು ಅರ್ಥಮಾಡಿಕೊಂಡ ಕೇಂದ್ರಾಡಳಿತ ಸಮಿತಿಯು 1958ರಲ್ಲಿ ಅಧಿಕಾರವನ್ನು ಸ್ವಲ್ಪಮಟ್ಟಿಗೆ ವಿಕೇಂದ್ರೀಕರಣಗೊಳಿಸಿತು. ಇದರ ಫಲವಾಗಿ ಸ್ಥಳೀಯ ಹಾಗೂ ಪ್ರಾಂತೀಯ ಘಟಕಗಳು ಹೆಚ್ಚಿನ ಆಸಕ್ತಿಯಿಂದ ಕಾರ್ಯೋನ್ಮುಖವಾಗತೊಡಗಿದವು.

**ಅಧಿಕಾರ ವಿಕೇಂದ್ರೀಕರಣದ ಮುಖ್ಯ ಲಕ್ಷಣಗಳು ಹೀಗಿದ್ದವು;**

(ಅ) ಪ್ರತಿ ರಾಜ್ಯದಲ್ಲೂ ಸಲಹಾ ಸಮಿತಿ ಬದಲು ರಾಜ್ಯಸಮಿತಿ ರಚನೆಯಾಗಿ ತನ್ನದೇ ಕಾರ್ಯಕ್ರಮಗಳನ್ನು ಕೈಗೊಳ್ಳಲು ಅವಕಾಶವಾಯಿತು. ಕೇಂದ್ರಸಮಿತಿಯಿಂದ ನಾಮಕರಣ ಸದಸ್ಯರನ್ನು ಕಾರ್ಯನಿರ್ವಾಹಕ ಸಮಿತಿಗೆ ಪ್ರತಿರಾಜ್ಯದಲ್ಲೂ ಗೊತ್ತುಮಾಡಲಾಯಿತು.

(ಆ) ರಾಜ್ಯ ಸಮಿತಿಯು ಕಾರ್ಯದರ್ಶಿ ಕಾರ್ಯನಿರ್ವಾಹಕ ಅಧಿಕಾರಿ ಆಗಿದ್ದು ಅಧ್ಯಕ್ಷನ ಆದೇಶದಂತೆ ಕಾರ್ಯ ನಿರ್ವಹಿಸುವಂತೆ ಮಾಡಲಾಯಿತು.

(ಇ) ರಾಜ್ಯ ಸಮಿತಿಗೆ ಕಾರ್ಯನಿರ್ವಹಣೆಗೆ ತನಗೆ ಬೇಕಾದವರನ್ನು ನೇಮಿಸಿಕೊಳ್ಳಲು ಅಥವಾ ತೆಗೆದು ಹಾಕಲು ಅಧಿಕಾರ ಹೊಂದಿತ್ತು.



(ಈ) ಒಮ್ಮೆ ಕೇಂದ್ರ ಯೋಜನ ಸಮಿತಿಯಿಂದ ಅಂಗೀಕಾರ ಪಡೆದ ಮೇಲೆ ಆ ಯೋಜನೆಯನ್ನು ಕಾರ್ಯಗತ ಗೊಳಿಸುವ ಬಗ್ಗೆ ಯಾವರೀತಿಯಲ್ಲೂ ಕೇಂದ್ರದೊಡನೆ ಸಮಾಲೋಚಿಸುವ ಅಗತ್ಯವಿರಲಿಲ್ಲ.

1962–63ರಲ್ಲಿ ರಾಜ್ಯ ಸಮಿತಿಗಳು 7 ರಿಂದ 11 ಜನ ಸದಸ್ಯರನ್ನು ಒಳಗೊಂಡಿದ್ದು ಸೊಸೈಟೀಸ್ ರಿಜಿಸ್ಟ್ರೇಷನ್ ಆಕ್ಟ್ ಪ್ರಕಾರ ನೋಂದಣಿ ಆಗಿದ್ದು ಸರ್ಕಾರದಿಂದ ಅಥವಾ ಅರೆಸರ್ಕಾರಿ ಸಂಸ್ಥೆಗಳಿಂದ ಅನುದಾನ ಪಡೆಯುವ ಅಧಿಕಾರ ಪಡೆಯಿತು.

ಟ್ರಸ್ಟ್‌ನ ಮೂಲಾಧಿಕಾರಿಗಳಲ್ಲಿ ರಾಜ್ಯ ಮತ್ತು ಕೇಂದ್ರದ ನಿಧಿಗಳ ಮೇಲಿನ ಬರುವ ಬಡ್ಡಿಯ ಹಣವು ದೆಹಲಿಯ ಮೂಲಾಧಿಕಾರಿಗಳ ಟ್ರಸ್ಟಿಗೆ ಸೇರುತ್ತಿತ್ತು. ಈ ವ್ಯವಸ್ಥೆ ಸಂಸ್ಥೆಗೆ ನೂರು ತುಂಬುತ್ತಿರುವ ಈ ವೇಳೆಯಲ್ಲೂ ಅಸ್ತಿತ್ವದಲ್ಲಿದೆ. ನಿಧಿಯ ವಿತರಣೆ ಮತ್ತು ವ್ಯವಸ್ಥೆಯಲ್ಲಿ ಎಷ್ಟೇ ಬದಲಾವಣೆಗಳಾದರೂ ಟ್ರಸ್ಟಿನ ನಿಯಮ ಹಾಗೆಯೇ ಇದೆ.

## ವಿತರಣೆ

ಟ್ರಸ್ಟಿನ ಧ್ಯೇಯೋದ್ದೇಶಗಳು ನಿರ್ಧಾರವಾದ ಮೇಲೆ ನಿಧಿಯ ಹಣವನ್ನು ವಿವಿದ ಕಾರ್ಯಗಳಿಗೆ ಹೇಗೆ ವಿನಿಯೋಗಿಸಬೇಕೆಂಬ ಪ್ರಶ್ನೆ ಉದ್ಭವಿಸಿತು. ಸಂಗ್ರಹವಾದ ಹಣದಲ್ಲಿ ಗೊತ್ತಾದ ಪ್ರಮಾಣ ಹಣ ಪ್ರಾಂತ ಮತ್ತು ಕೇಂದ್ರದ ನಡುವೆ ಯಾವ ರೀತಿ ಹಂಚಿಕೆ ಆಗಬೇಕೆಂಬುದು ನಿರ್ಧಾರವಾಗಿತ್ತು. ಆದರೆ ಪ್ರಾಂತ್ಯಗಳ ಒಳಗಿನ ಜಿಲ್ಲೆಗಳಲ್ಲಿ ಯಾವರೀತಿ ಹಣ ವಿನಿಯೋಗವಾಗಬೇಕೆಂದು ನಿರ್ಧರಿಸಿರಲಿಲ್ಲ. ಬೊಂಬಾಯಿ ಪ್ರಾಂತ್ಯದಲ್ಲಿ ಮಾತ್ರ ಶೇಕಡಾ 25 ಅದಕ್ಕೆ ಬಳಕೆ ಆಗಿ ಉಳಿದಿದ್ದು ಕೇಂದ್ರ ನಿಧಿಗೆ ಹೋಗುತ್ತಿತ್ತು. 1951ರಲ್ಲಿ ಹಣಕಾಸಿನ ಅಂದಾಜು ಸಮಿತಿ (1950ರಲ್ಲಿ ಸ್ಥಾಪಿತವಾದದ್ದು) ಫೆಬ್ರವರಿಯ ಸಭೆಯಲ್ಲಿ ರಾಜ್ಯಗಳ ಹಣಕಾಸು ಯಾವ ರೀತಿ ಬೇರೆ ಬೇರೆ ಚಟುವಟಿಕೆಗಳಿಗೆ ಬಳಸಬೇಕು ಎಂಬುದನ್ನು ನಿರ್ಧರಿಸಲಾಯಿತು ಆ ವಿವರಗಳು ಹೀಗಿವೆ.

| | ಬಾಬತ್ತು | ಒಂದು ರೂಪಾಯಿ (16 ಆಣೆಗಳು) ಲೆಕ್ಕದಲ್ಲಿ ವಿತರಣೆ. |
|---|---|---|
| 1. | ಕಚೇರಿ ವೆಚ್ಚ ಮತ್ತು ಅನಿರೀಕ್ಷಿತ ವೆಚ್ಚಗಳು | 2 ಆಣೆ |
| 2. | ಕಾರ್ಯಕರ್ತರ ತರಬೇತಿ | 1 ಆಣೆ |
| 2. | ತರಬೇತಿಕಾಲದಲ್ಲಿ ಕಾರ್ಯಕರ್ತರಿಗಾಗಿ | 2 ಆಣೆ |
| 4. | ಕಾರ್ಯಕರ್ತರಿಗೆ ನೀಡುವ ಉಪಕರಣ ಸಾಧನಗಳಿಗಾಗಿ | 1 ಆಣೆ |
| 5. | ಸಾಹಿತ್ಯ ಪ್ರಕಟನೆ, ಉಪನ್ಯಾಸಕಾರ್ಯಕ್ರಮ | 1 ಆಣೆ |
| | ಶಿಬಿರಗಳ ವ್ಯವಸ್ಥೆ ಮೊದಲಾದ ಗಾಂಧೀ ತತ್ವಪ್ರಚಾರ ಕಾರ್ಯಕ್ರಮಗಳಿಗಾಗಿ | 1 ಆಣೆ |
| 6. | ಮಹಿಳೆಯರು ಮತ್ತು ಮಕ್ಕಳ ಕ್ಷೇಮಾಭಿವೃದ್ಧಿ | 1 ಆಣೆ |
| 7. | ಹರಿಜನೋದ್ಧಾರ ಕಾರ್ಯಕ್ರಮಗಳಿಗೆ | 1 ಆಣೆ |
| 8. | ಗುಡ್ಡಗಾಡು ಜನರ ಪ್ರಗತಿಗಾಗಿ | 1 ಆಣೆ |
| 9. | ಕುಷ್ಟರೋಗ ನಿವಾರಣೆಗಾಗಿ | 1 ಆಣೆ |
| 10. | ವ್ಯವಸಾಯ ಮತ್ತು ಪಶುಪಾಲನೆ ಅಭಿವೃದ್ಧಿಗಾಗಿ | 1 ಆಣೆ |
| 11. | ಮೂಲ ಶಿಕ್ಷಣ ವ್ಯವಸ್ಥೆಗಾಗಿ | 2 ಆಣೆ |
| 12. | ಗ್ರಾಮೋದ್ಯೋಗ ಕೈಗಾರಿಕೆಗಳಿಗಾಗಿ | 1/2 ಆಣೆ |
| 13. | ಖಾದಿ – ಸ್ವಾವಲಂಬನೆ ಯೋಜನೆಗೆ | 1/2 ಆಣೆ |
| 14. | ಆರೋಗ್ಯರಕ್ಷಣೆ ಮತ್ತು ಪ್ರಕೃತಿ ಚಿಕಿತ್ಸೆಗೆ | 1/2 ಆಣೆ |



ಪ್ರಾಂತೀಯ ಸಂಸ್ಥೆಗಳ ನಿಧಿ ಯೋಜನೆ ಮತ್ತು ಅಂದಾಜುವೆಚ್ಚಗಳ ಮೂಲಕ 10 ವರ್ಷದ ಅವಧಿಯಲ್ಲಿ ವಿನಿಯೋಗವಾಗಬೇಕು. ಇದೇ ಅವಧಿಯಲ್ಲಿ ಕೇಂದ್ರನಿಧಿಯಿಂದಲೂ ಸ್ಥಿರ ಆಸ್ತಿ ರಕ್ಷಣೆಗೆ ಕುಷ್ಠರೋಗ ನಿವಾರಣೆಗೆ ಆ ಕಾಯಿಲೆಯ ಸಂಶೋಧನೆ ಮತ್ತು ಮುನ್ನೆಚ್ಚರಿಕೆ ಕ್ರಮಗಳಿಗಾಗಿ ಪ್ರಾಂತೀಯ ಭಾಷೆಗಳಲ್ಲಿ ಗಾಂಧಿ ಸಾಹಿತ್ಯ ಪ್ರಕಟಣೆ ಮತ್ತು ಸುವ್ಯವಸ್ಥೆಗಳ ಪ್ರಚಾರದಲ್ಲಿ ಪಾಲ್ಗೊಳ್ಳಲು ಹಣನಿಧಿಯನ್ನು ವಿನಿಯೋಗಿಸತಕ್ಕದ್ದು ಎಂದು ನಿರ್ಧರಿಸಲಾಯಿತು. ಇದರೊಂದಿಗೆ 1956 ಅಕ್ಟೋಬರ್ 31 ರವರೆಗೆ ಸಂಗ್ರಹವಾದ ದೇಣಿಗೆ ಹಣವನ್ನು ಭಾಷಾವಾರು ರೂಪುಗೊಂಡ ಪ್ರಾಂತ್ಯಗಳಿಗಾಗಿ ವಿನಿಯೋಗಿಸಲು ಸೂಕ್ತ ಮಾರ್ಪಾಟುಗಳನ್ನು ಮಾಡಲಾಯಿತು.

ಈ ರೀತಿ ಹಣ ವಿನಿಯೋಗಿಸಲು ಮಾರ್ಪಾಟು ಮಡುತ್ತಿದ್ದಾಗ ಭೂದಾನ ಚಳುವಳಿ ರಷ್ಟ್ರಾದ್ಯಂತ ಹಬ್ಬುತ್ತಿತ್ತು. ಭೂದಾನದ ವಿತರಣೆಯಲ್ಲಿ ಆರ್ಥಿಕ ನೆರವನ್ನು ನಿಧಿಯಿಂದ ನೀಡಲು ನಿರ್ಧರಿಸಲಾಯಿತು. ಇದಕ್ಕಾಗಿ ಭೂದಾನ ನಿಧಿಯೊಂದನ್ನು ಸ್ಥಾಪಿಸಲು ನಿರ್ಧರಿಸಿ ಸಂಗ್ರಹಿಸಿದ ಹಣದಲ್ಲಿ ಆಣೆಯ 50% ರಂದು ಪ್ರಮಾಣದಲ್ಲಿ ಪ್ರತಿ ರಾಜ್ಯಕ್ಕೂ ಗೊತ್ತಾದ ಹಣದಲ್ಲಿ ವಿನಿಯೋಗಿಸಲು ನಿರ್ಧರಿಸಲಾಯಿತು..

ಈ ಭೂದಾನ ನಿಧಿಗೆ 18,11,773 ರೂ.ಗಳ ಸಂಗ್ರಹವಾಯಿತು. ಹಾಗೆಯೇ ಕುಷ್ಠರೋಗ ನಿವಾರಣಾನಿಧಿ 35,67,810=45 ಪೈಸೇ ವಿತರಣೆ ಯಾಯಿತು. ಈ ನಿಧಿಗೆ ಕೇಂದ್ರದ ನಿಧಿಯಿಂದ 50 ಲಕ್ಷ ರೂ.ಗಳನ್ನು ಕೂಡಿಸಲಾಯಿತು. ಜತೆಗೆ 10,49,711=17 ಪೈಸೆಯನ್ನು ಮೂಲನಿಧಿಯಿಂದಲೂ ಸೇರಿಸಲಾಯಿತು. ಇವೆಲ್ಲದರ ಫಲವಾಗಿ ಕುಷ್ಠರೋಗ ನಿವಾರಣಾ ನಿಧಿ ಮೊತ್ತ 96,17,521=62 ಪೈಸೆಗಳಾದವು.

ವ್ಯವಸಾಯಾಭಿವೃದ್ಧಿಗಾಗಿ ನಿಧಿಯೊಂದನ್ನು ಕಾಣಾಣೆ ಪ್ರಭಾವದಲ್ಲಿ (1/2 ಭಾಗ ರೂಪಾಯಿಯಲ್ಲಿ) ಪ್ರತಿ ಪ್ರಾಂತದಿಂದ ಗೊತ್ತಾದ ಮೊಬಲಗಿನ ಹಣ ಸೇರಿ 9,5,886=50 ಪೈಸೆ ಆಯಿತು. ಇದಕ್ಕೆ 1 ಲಕ್ಷವನ್ನು ಕೇಂದ್ರ ನಿಧಿಯಿಂದ ಕೂಡಿಸಲಾಯಿತು.

ಹೀಗೆ ಕೇಂದ್ರ ಮತ್ತು ಪ್ರಾಂತೀಯ ಘಟಕಗಳಿಂದ ರೂಪಗೊಂಡ ನಿಧಿಗಳಿಂದ ನಾನಾಯೋಜನೆಗಳ ರಚನಾತ್ಮಕ ಕಾರ್ಯಗಳು ಅನುಷ್ಠಾನಗೊಂಡವು. ಗಾಂಧೀಜಿಯೇ ಕೈಗೊಂಡು ಪ್ರಾರಂಭಿಸಿದ ಹಲವಾರು ಯೋಜನೆಗಳನ್ನು ಒಳಗೊಂಡು ಹತ್ತಾರು ರಚನಾತ್ಮಕ ಕಾರ್ಯಕ್ರಮಗಳನ್ನು ಕೇಂದ್ರದವರು ಮತ್ತು ರಾಜ್ಯದ ಘಟಕಗಳು ಕೈಗೊಂಡವು 5 ವರ್ಷಗಳ ಟ್ರಸ್ಟ್ ಸದಸ್ಯರು ದಾನಿಗಳು ನಿರ್ದಿಷ್ಟ ಉದ್ದೇಶಗಳಿಗಾಗಿ ಕೊಟ್ಟ ಹಣವನ್ನು ಆ ಉದ್ದೇಶಿತ ಕಾರ್ಯಗಳನ್ನು ನೆರವೇರಿಸಲು ನಿರ್ಧರಿಸಿತು ಅನಂತರ ಪ್ರಾಂತಗಳಿಂದ ಅವುಗಳನ್ನು ಪಡೆಯಲು ತೀರ್ಮಾನಿಸಿತು.

## ನಿಧಿಯ ವಿನಿಯೋಗ

ಭಾಷಾವಾರು ಪ್ರಾಂತ್ಯಗಳು ರೂಪುಗೊಳ್ಳುವ ಮುನ್ನ ಕೇಂದ್ರ ನಿಧಿ ಸಮಿತಿಯು ಗಾಂಧೀಜಿಯವರಿಂದ ಸ್ಥಾಪಿತವಾದ ಸಂಘಟನೆಗಳ ಚಟುವಟಿಕೆಯನ್ನು ಮತ್ತು ಅದಕ್ಕೆ ತಗಲುವ ಅಂದಾಜು ವೆಚ್ಚವನ್ನು ಕುರಿತು ವಿವರಪಟ್ಟಿ ಕೊಡಲು ಕೇಳುತ್ತಿತ್ತು. ಈ ಸಂಘಟನೆಗಳಿಗೆ ಹಣ ನೀಡಲು 50 ಲಕ್ಷರೂಗಳನ್ನು ಮಿಸಲಾಗಿಟ್ಟಿತ್ತು. ಈ ವ್ಯವಸ್ಥೆಗೆ ಒಳಗೊಂಡ 7 ಸಂಸ್ಥೆಗಳು ಯಾವುವೆಂದರೆ ವಾರ್ಧಾದ ಹಿಂದೂಸ್ತಾನಿ ಪ್ರಚಾರಸಭಾ, ಅಖಿಲಭಾರತ ಗ್ರಾಮೋದ್ಯೋಗ ಸಂಸ್ಥೆ, ಅಖಿಲಭಾರತಗೋಸೇವಾ ಸಂಸ್ಥೆ, ಅಖಿಲಭಾರತ ಆದಿಮಜಾತಿ ಸೇವಾಮಂಡಲ ಮತ್ತು ಅಖಿಲಭಾರತ ನೇಕಾರರ ಸಂಘ. ಈ ಪೈಕಿ ಕೊನೆಯ ಸಂಘ ಬಿಟ್ಟು ಉಳಿದ ಸಂಸ್ಥೆಗಳು 10 ವರ್ಷಗಳ ಯೋಜನೆ ಮತ್ತು ಅಂದಾಜು ಪಟ್ಟಿಯನ್ನು ಸಲ್ಲಿಸಿ ಅನುದಾನ ಪಡೆದು ಅನೇಕ ವರ್ಷಗಳು ಕಾರ್ಯ ನಿರ್ವಹಿಸಿದವು. ಕೇಂದ್ರಕ್ಕೆ ವರದಿ, ಲೆಕ್ಕಪತ್ರಗಳನ್ನು ಕಳಿಸಿದವು.

1949–50ರಿಂದ ಸ್ಮಾರಕನಿಧಿಯ ರಚನಾತ್ಮಕ ಕಾರ್ಯಗಳಿಗಾಗಿ ಹಲವಾರು ಸಂಸ್ಥೆಗಳಿಗಾಗಿ ಆರ್ಥಿಕ ಸಹಾಯವನ್ನು ನೀಡತೊಡಗಿತು. ಅನಂತರ ತಾನೇ ಯೋಜನೆಗಳನ್ನು ರೂಪಿಸಿ ಕಾರ್ಯರೂಪಕ್ಕೆ ತರಲು ಪ್ರಾರಂಭಿಸಿತು. ಹೀಗೆ ಕೇಂದ್ರ ಮತ್ತು ರಾಜ್ಯಗಳು ನೇರವಾಗಿ ಹಾಗೂ ಪರೋಕ್ಷವಾಗಿ ಕೈಗೊಂಡ ರಚನಾತ್ಮಕ ಕಾರ್ಯಗಳಲ್ಲಿ ಕೆಲವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಟ್ರಸ್ಟ್ ತಾನೇ ಮೊದಲು ಕೈಗೊಂಡ ಕಾರ್ಯವೆಂದರೆ ಗಾಂಧೀಜಿ ಬಳಸಿದ ವಸ್ತುಗಳು, ಪುಸ್ತಕಗಳು,



ಲೇಖನಗಳು (ಅವರೇ ಬರೆದಿದ್ದು ಮತ್ತು ಇತರರು ಗಾಂಧಿ ಬಗ್ಗೆ ಬರೆದಿದ್ದು) ಇವುಗಳನ್ನು ಸಂಗ್ರಹಿಸಿಕೊಡಲಾಗಿತ್ತು. ಅನಂತರ ಗಾಂಧಿಯನ್ನು ಕುರಿತ ಚಲನಚಿತ್ರಗಳನ್ನು ಅದರ ಬಿಡಿ ಭಾಗಗಳನ್ನು ಸಂಗ್ರಹಿಸಿತು. 1949ರ ವೇಳೆಗೆ ಇವೆಲ್ಲದರ ವಸ್ತು ಸಂಗ್ರಹಾಲಯ ಸ್ಥಾಪನೆಗೆ ಯೋಚಿಸಲಾಯಿತು. 1950ರಲ್ಲಿ ಗಾಂಧಿ ಚಲನಚಿತ್ರ ಸಮಿತಿ ಅಸ್ತಿತ್ವಕ್ಕೆ ಬಂದಿತು. ಕುಷ್ಟರೋಗ ನಿವಾರಣಾ ಕಾರ್ಯ 1950ರಲ್ಲಿ ಸಲಹಾಸಮಿತಿಯಿಂದ ಪ್ರಾರಂಭವಾಯಿತು.

1952ರಲ್ಲಿ ಗಾಂಧೀ ವಿಚಾರಧಾರೆಯ ಪ್ರಚಾರಕ್ಕಾಗಿ ಗಾಂಧೀ ತತ್ವ ಪ್ರಚಾರ ಕೇಂದ್ರಗಳು ಪ್ರಥಮ ಬಾರಿಗೆ ಪ್ರಾರಂಭವಾದವು. ಅದೇ ವರ್ಷ ಜಪಾನಿ ವ್ಯವಸಾಯ ಪದ್ಧತಿ ಮೇರೆಗೆ ಭತ್ತ ಬೆಳೆಯುವ ಪದ್ಧತಿಯನ್ನು ಪ್ರಚಾರ ಕೈಗೊಳ್ಳಲಾಯಿತು. 1953ರಲ್ಲಿ ಗಾಂಧಿ ಸಾಹಿತ್ಯವನ್ನು ಪ್ರಾಂತೀಯ ಭಾಷೆಗಳಲ್ಲಿ ಅನುವಾದಿಸಿ ಪ್ರಕಟಿಸಲು ಕ್ರಮಕೈಗೊಳ್ಳಲಾಯಿತು. 1955ರಲ್ಲಿ ಗಾಂಧಿ ಮನೆ ಯೋಜನೆ ಕೈಗೊಂಡಾಗ ಗ್ರಾಮ ಸೇವಾಕೇಂದ್ರಗಳು ಸ್ಥಾಪನೆಗೊಂಡವು. ಇದೇ ಕಾಲಕ್ಕೆ ನಿಧಿಯಿಂದ ಕಸ್ತೂರಬಾ ಗ್ರಾಮ ಮಿಶ್ರವ್ಯವಸಾಯಯೋಜನೆ ರೂಪುಗೊಂಡಿತು. 1957ರಲ್ಲಿ ಭಂಗಿ ಮುಕ್ತಿ ಚಳುವಳಿಯನ್ನು ನಿಧಿ ಕೈಗೊಂಡಿತು. ಅಧಿಕ ಮಧ್ಯದ ಅವಧಿಯಲ್ಲಿ ಸ್ಮಾರಕನಿಧಿ ಸಂಸ್ಥೆಯ ಚಟುವಟಿಕೆಗಳು ಉತ್ತುಂಗಕ್ಕೇರಿದವು. ಶತಮಾನೋತ್ಸವ ವರ್ಷದವರೆಗೆ ಈ ಎಲ್ಲ ಕಾರ್ಯ ಯೋಜನೆಗಳು ಮುಂದುವರೆದವು.

## ಸಂಸ್ಥೆಗಳ ಮೌಲ್ಯಮಾಪನ

ಗಾಂಧಿ ಸ್ಮಾರಕನಿಧಿ ಸಂಸ್ಥೆಯ ವೈಶಿಷ್ಟವೆಂದರೆ ಭಾರತಾದ್ಯಂತ ಹರಡಿರುವ ನಿಧಿಯೋಜನೆಯಿಂದ ಸಹಾಯ ಪಡೆದ ಸಂಸ್ಥೆಗಳ ಹಾಗೂ ಇತರ ಘಟಕಗಳಿಂದ ಮತ್ತು ತಾವು ಖರ್ಚುಮಾಡಿದ ಹಣದ ಲೆಕ್ಕ ವಿವರಗಳನ್ನು ಕರಾರುವಾಕ್ಕಾಗಿ ಪರಿಶೀಲಿಸಿರುತ್ತದೆ. ಪ್ರತಿಯೊಂದು ಪೈಸೆ ಲೆಕ್ಕವನ್ನು ಕರಾರುವಾಕ್ಕಾಗಿ ಪರಿಗಣಿಸಿರುತ್ತದೆ. ಆದರೆ ವರ್ಷಗಳು ಗತಿಸಿದಂತೆಲ್ಲಾ ಸಂಸ್ಥೆಯ ಕಾರ್ಯ ಬಾಹುಳ್ಯ ವ್ಯಾಪ್ತಿ ಹೆಚ್ಚುತ್ತಾ ಹೋಗಿ ಎಲ್ಲ ಕಡೆಗಳಿಂದಲೂ ಬಂದ ಆದಾಯವೆಷ್ಟು ಖರ್ಚು ಎಷ್ಟು ಯಾವ ರೀತಿ ಆಯಿತು. ಎಂಬ ವಿವರಗಳು ಪೂರ್ಣವಾಗಿ ದೊರಕದಾಗಿದೆ. ಆದರೂ ಸ್ಮರಣನಿಧಿಯ ಎಲ್ಲ ಶಾಖೆಗಳ ವಿವಿಧ ಭಾಗಗಳಲ್ಲಿ ಹಣದ ವಿನಿಯೋಗದ ಬಗ್ಗೆ ಅಷ್ಟೇ ಅಲ್ಲದೆ ಗಾಂಧೀ ತತ್ವಗಳ ಪ್ರಚಾರ ಮತ್ತು ಅದರ ರಚನಾತ್ಮಕ ಕಾರ್ಯಗಳು ಸಾಮಾಜಿಕವಾಗಿ ಜನತೆಗೆ ಎಷ್ಟು ಉಪಯೋಗವಾಗಿದೆ ಎಂಬ ಬಗ್ಗೆಯೂ ಮೌಲ್ಯಮಾಪನ ಮಾಡಲಾಗಿದೆ.

ಸ್ಮಾರಕನಿಧಿಯನ್ನು ಬಳಸಿರುವ ಹಣಕ್ಕೆ ತಕ್ಕಂತೆ ಅದರ ಪರಿಣಾಮವನ್ನು ಪರಿಗಣಿಸಲಾಗಿದೆ. ಪ್ರತಿಯೊಂದು ಕಾರ್ಯಕ್ರಮವನ್ನು ಬಹಳ ಎಚ್ಚರದಿಂದ ಪರಿಶೀಲಿಸಿ ನಿಧಿಯ ಬಳಕೆಯ ಪ್ರಮಾಣ ಅನುಷ್ಠಾನ ಪ್ರಮಾಣವನ್ನು ಲೆಕ್ಕಾಚಾರ ಮಾಡಲಾಗಿದೆ ಆದರೆ ಪ್ರಾರಂಭದಲ್ಲಿ ವೈಜ್ಞಾನಿಕವಾಗಿ ಕ್ರಮಬದ್ಧವಾಗಿ ಕೈಗೊಳ್ಳಲಾಗಲಿಲ್ಲ.

ಈ ರೀತಿ ಕಾರ್ಯ ಸಾಧನೆಗಳ ಮೌಲ್ಯ ಮಾಪನದ ಜತೆಗೆ ಕಾರ್ಯಕರ್ತರು ಆಗಾಗ ನಡೆಸಿದ ಸಮ್ಮೇಳನಗಳು ಗೋಷ್ಠಿಗಳು ಶಿಬಿರಗಳು ಅವರ ಟಿಪ್ಪಣಿಗಳ ತೌಲನಿಕ ಅಧ್ಯಯನ ಇವುಗಳನ್ನು ಪರೀಶೀಲಿಸಲಾಗಿದೆ ಈ ಎಲ್ಲಾ ವಿಧಾನಗಳು ನಿರಂತರ ಆತ್ಮಶೋಧನೆಗೆ ಗಾಂಧೀ ಸಂಘಟನೆಗಳ ಪರಿಶುದ್ಧತೆಗೆ ನೆರವಾಗಿದೆ. ಈ ಬಗೆಯ ಕಾರ್ಯ ಮತ್ತು ಅನೇಕ ಸಭೆಗಳು ಪ್ರಾಂತೀಯವಾಗಿ ನಡೆದು ಸ್ಥಳೀಯ ಸಮಸ್ಯೆಗಳಿಗೆ ಪರಿಹಾರ ಒದಗಿಸಿವೆ. ಆದರೆ 1952–1968ರ ಅವಧಿಯಲ್ಲಿ ನಡೆದ ಅಖಿಲಭಾರತ ಅಧಿವೇಶನಗಳು ಕೇಂದ್ರ ಸಂಸ್ಥೆಯಿಂದ 12ಬಾರಿ ನಡೆದು ಅನೇಕ ಸಮಸ್ಯೆಗಳ ನಿವಾರಣೆ ಆಗಿವೆ.

## ವಿಕೇಂದ್ರಿಕರಣ ಮತ್ತು ಸ್ವಾಯತ್ತೆಯ ಸಂಸ್ಥೆಗಳು

ಮೊದಲೇ ನಿರ್ಧರಿಸಿದಂತೆ ನಿಧಿ ಸಂಗ್ರಹಣೆ ಕಾರ್ಯವನ್ನು ನಿರ್ದಿಷ್ಟ ದಿನಾಂಕಕ್ಕೆ ನಿಲ್ಲಿಸಬೇಕೆಂಬ ನಿರ್ಧಾರದಿಂದ ನಿಧಿ ಸಂಗ್ರಹಕಾರ್ಯಕ್ಕೆ ಟ್ರಸ್ಟ್ ಕೈಹಾಕಲಿಲ್ಲ ಆದರೆ ಟ್ರಸ್ಟ್‌ಗಳ ಮನಸಿನಲ್ಲಿ ಮೂಲನಿಧಿ ಇನ್ನು 10 ವರ್ಷಗಳಲ್ಲಿ ಕರಗಬಹುದೆಂದು ಭಾವನೆ ಮೂಡಿತು ಕರಗುತ್ತಿರುವ ಬಗ್ಗೆ ಚಿಂತಿಸಬೇಕೇ ಅಥವಾ ಗಾಂಧೀ ತತ್ವಾನುಷ್ಠಾನದ ಕಾರ್ಯಕ್ರಮಗಳನ್ನು ಮುಂದುವರಿಸುವುದು ಹೇಗೆ ಎಂಬ ಚಿಂತೆ ಟ್ರಸ್ಟ್‌ಗಳಿಗೆ ಉಂಟಾಯಿತು. ಏನೇ ಆಗಲಿ ಗಾಂಧೀ ತತ್ವಗಳ ಅನುಷ್ಠಾನದ ಚಟುವಟಿಕೆಗಳು ನಿಲ್ಲಬಾರದು. ನಿರಂತರವಾಗಿ ಸಾಗಬೇಕು ಜನತೆಗೆ ಸತತವಾಗಿ ಸಾಮಾಜಿಕ ಸೇವೆ ಸಲ್ಲಬೇಕು. ಹಾಗಾದಲ್ಲಿ ಮಾತ್ರ ಸರ್ವೋದಯ ತತ್ವಗಳ ಸಾಧನೆ ಶಕ್ಯ ಎಂದು ನಿರ್ಧರಿಸಲಾಯಿತು.



ಈ ರೀತಿ ನಿರ್ಧರಿಸಲು ಅನೇಕ ವಿಚಾರಗಳು ಟ್ರಸ್ಟ್‌ಗಳ ಮನಸ್ಸಿನಲ್ಲಿತ್ತು. ವಿಕೇಂದ್ರಿಕರಣದ ಒತ್ತಡ, ಕಾರ್ಯನಿರತ ಜನರಿಗೆ ತಮ್ಮದೇ ಆದ ಆಸ್ತಿ ಅಧಿಕಾರಾಪೇಕ್ಷೆಗಳು ಉಂಟಾದುದು ಕೆಲವು ರಚನಾತ್ಮಕ ಕಾರ್ಯಗಳನ್ನು ವಿಶೇಷ ರೀತಿಯಲ್ಲಿ ಕೈಗೊಂಡಿದ್ದು ಕಾರ್ಯವ್ಯಾಪ್ತಿ ವಿಶಾಲಗೊಂಡು ಅಧಿಕ ಕಾರ್ಯದ ಒತ್ತಡ ಉಂಟಾದದು ಇವೆಲ್ಲದರ ಪರಿಣಾಮವಾಗಿ ವಿಕೇಂದ್ರೀಕರಣದ ಜವಾಬ್ದಾರಿಗಳು ಕಾರ್ಯಗಳು ಅಧಿಕವಾಗಿ ಟ್ರಸ್ಟ್‌ಗಳ ಪಾಲಿಗೆ ಬಂದವು.

ಎರಡು ಬಗೆಗಳಲ್ಲಿ ವಿಕೇಂದ್ರೀಕರಣವು ರೂಪುಗೊಂಡಿತು. ಕೆಲವು ಸಂಸ್ಥೆಗಳು ಅರೆ ಸ್ವಾಯತ್ತತೆ ಅಥವಾ ಹೆಚ್ಚು ಕಡಿಮೆ ಪೂರ್ಣ ಸ್ವಾಯುತ್ತತೆಯನ್ನೇ ಹೊಂದಿದವು ಮತ್ತು ಕೆಲವು ಸಂಸ್ಥೆಗಳು ಸಂಪೂರ್ಣವಾಗಿ ಸ್ವಾಯುತ್ತ ಹೊಂದಿ ನೋಂದಣಿಗೊಂಡ ಸಂಸ್ಥೆಗಳಾದವು. ಟ್ರಸ್ಟಿನ ಶತಮಾನೋತ್ಸವಕ್ಕೆ ಮುಂಚೆ ಪೂರ್ಣ ಸ್ವಾಯತ್ತತೆ ಹೊಂದಿದ ಸಂಸ್ಥೆಗಳು ಯಾವುವೆಂದರೆ ಗಾಂಧೀ ಶಾಂತಿ ಪ್ರತಿಷ್ಠಾನ, ವಾರ್ಧಾದ ಗಾಂಧಿಸ್ಮಾರಕ ಕುಷ್ಠ ರೋಗನಿವಾರಣ ಪ್ರತಿಷ್ಠಾನ, ಗಾಂಧೀಸ್ಮಾರಕ ಸಂಗ್ರಹಾಲಯ ಸಮಿತಿ, ವಾರ್ಧಾದ ಸೇವಾಗ್ರಾಮದ ಕಸ್ತೂರಬಾ ಆರೋಗ್ಯಸಂಸ್ಥೆ, ಸೇವಾಗ್ರಾಮ ಆಶ್ರಮ ಪ್ರತಿಷ್ಠಾನ, ಈ ಸಂಸ್ಥೆಗಳಷ್ಟೇ ಅಲ್ಲದೆ ದೆಹಲಿಯ ಗಾಂಧಿ ಶಾಂತಿ ಪ್ರತಿಷ್ಠಾನ 1959ರಲ್ಲಿ ಸ್ವಾಯತ್ತತೆಯ ಸಂಸ್ಥೆ ಆಯಿತು.

ಕುಷ್ಠರೋಗ ನಿವಾರಣಾ ಪ್ರತಿಷ್ಠಾನ 1962ರಲ್ಲಿ ನೋಂದಣಿ ಆದ ಮೇಲೆ ಬಹುಮಟ್ಟಿಗೆ ಸ್ವಾಯತ್ತತೆಯ ಸಂಸ್ಥೆಆಯಿತು. ನೇರವಾಗಿ ಸ್ಮಾರಕನಿಧಿಯು ನಿಯಂತ್ರಣದಲ್ಲಿದ್ದ ಸೇವಾಗ್ರಾಮದ ಕಸ್ತೂರಬಾ ಆಸ್ಪತ್ರೆಯ ಆಡಳಿತಮಂಡಳಿಯ ಟ್ರಸ್ಟ್‌ಗೆ 1965ರಲ್ಲಿ ಕಸ್ತೂರ ಬಾ ಆರೋಗ್ಯ ಸಂಸ್ಥೆ ಲೀನವಾಯಿತು. 1965ರಲ್ಲಿ ಗಾಂಧಿ ಸ್ಮಾರಕ ಸಂಗ್ರಹಾಲಯ ಸಮಿತಿ ನೋಂದಣಿ ಆಯಿತು. ಗಾಂಧೀಜಿಯ ಜೀವನದ ಕೊನೆಯ 10 ವರ್ಷಗಳ ಕಾಲ ವಾಸವಾಗಿದ್ದ ಸೇವಾಗ್ರಾಮ ಆಶ್ರಮವನ್ನು ಗಾಂಧೀ ಸ್ಮಾರಕನಿಧಿ ಸಂಸ್ಥೆಯ ಸ್ವಾಯತ್ತತೆಯ ಮಂಡಳಿಯ ಮೂಲಕ ನಿರ್ವಹಿಸಲು ನಿರ್ಧರಿಸಿತು. ಇದರ ಫಲವಾಗಿ 1968ರಲ್ಲಿ ಸೇವಾಗ್ರಾಮ ಆಶ್ರಮ ಪ್ರತಿಷ್ಠಾನ ಸ್ಥಾಪಿತವಾಯಿತು 1970ಕ್ಕೆ ಮುಂಚೆ ರಾಜ್ಯದ ಮಂಡಳಿಗಳಿಂದ ಸ್ಥಾಪಿತವಾದ ಸಂಸ್ಥೆಗಳು ಅರೆ ಸ್ವಾಯತ್ತತೆ ಹೊಂದಿದ್ದಕ್ಕೆ ಗಡಿ ಪ್ರದೇಶ ಸಂಯೋಜನಾ ಸಮಿತಿಯಿಂದ ಸಾಕ್ಷಿಯಾಗಿ 1969ರಲ್ಲಿ ಹಿಮಾಲಯ ಸೇವಾ ಸಂಘವೆಂದು ನೋಂದಣಿ ಆಯಿತು.

## ಗಾಂಧಿಶತಮಾನೋತ್ಸವ – 1969

ಗಾಂಧಿ ಸ್ಮಾರಕನಿಧಿ ಸಂಸ್ಥೆಯ ಶತಮಾನೋತ್ಸವ ವರ್ಷದಾದ್ಯಂತದಿಂದ 10 ವರ್ಷ ಮುಂದುವರೆಯ ಬೇಕು ಏಕೆಂದರೆ ಶತಮಾನದ ವರ್ಷದ ಕಾರ್ಯಕ್ರಮಗಳನ್ನು ಸಕಾಲದಲ್ಲಿ ಮುಂದುವರೆಸಲು ಅಗತ್ಯವಾಗಿದೆ ಎಂದು ನಿರ್ಧರಿಸಲಾಯಿತು. ಈ ನಿರ್ಧಾರಕ್ಕೆ ಅನುಗುಣವಾಗಿ 1961ರಲ್ಲಿ ಗಾಂಧೀ ಜನ್ಮ ಶತಮಾನೋತ್ಸವ ಕಾರ್ಯ ಕ್ರಮದ ಸಿದ್ಧತಾ ಕಾರ್ಯ ಕ್ರಮಗಳನ್ನು ಕೈಗೊಳ್ಳಲಾಯಿತು.

ಸಂಗ್ರಹಾಲಯ ಸಮಿತಿ ಮೂಲಕ ದೆಹಲಿಯಲ್ಲಿದ್ದ ಎಲ್ಲ ವಿದೇಶೀ ರಾಯಭಾರಿ ಸಂಸ್ಥೆಗಳಿಗೂ ಶತಮಾನೋತ್ಸವ ಕಾರ್ಯಕ್ರಮಗಳನ್ನು ನಡೆಸಲು ಪೂರ್ವಸಿದ್ಧತೆಗಳನ್ನು ಕೈಗೊಳ್ಳಬೇಕೆಂದು ಸೂಚಿಸಿತು.

1962ರಲ್ಲಿ ಶತಮಾನೋತ್ಸವದ ಕಾರ್ಯಕ್ರಮಗಳ ರೂಪರೇಷೆ ನಿರ್ಧರಿಸಲು ಸಿದ್ಧತಾ ಸಮಿತಿಯೊಂದನ್ನು ರಚಿಸಲಾಯಿತು. ಈ ಸಮಿತಿಗೆ ಆರ್. ಆರ್. ದಿವಾಕರರು ಅಧ್ಯಕ್ಷರಾದರು. ದಿವಾಕರರು ಸ್ಮಾರಕನಿಧಿಯ ಅಧ್ಯಕ್ಷರೂ ಆಗಿದ್ದರು. ಈ ಕಾರ್ಯ ಮಹತ್ವಪೂರ್ಣವಾದ ಕಾರ್ಯವಾಗಿತ್ತು. ಈ ಸಮಿತಿ ರೂಪಿಸಿದ ಕಾರ್ಯಕ್ರಮಗಳಲ್ಲಿ ಕೆಲವು ಶತಮಾನೋತ್ಸವ ವರ್ಷದಲ್ಲಿ ಆಚರಿಸವಂಥವು, ಮತ್ತೆ ಕೆಲವು ಶತಮಾನೋತ್ಸವ ವರ್ಷಕ್ಕೆ ಹಲವು ವರ್ಷಗಳ ಮುಂಚೆ ಪ್ರಾರಂಭಗೊಂಡು ಶತಮಾನೋತ್ಸವ ವರ್ಷದಲ್ಲಿ ಮುಗಿಯುವಂಥವು ಆಗಿದ್ದವು. ಗಾಂಧಿಸ್ಮಾರಕ ನಿಧಿಯ ಗಾಂಧಿ ಶತಮಾನೋತ್ಸವದ ಕಾರ್ಯ ಸಂಪೂರ್ಣ ವೆಚ್ಚವನ್ನು ಭಾರತ ಸರ್ಕಾರವೇ ವಹಿಸಿಕೊಂಡಿತು. ಅಲ್ಲದೆ ಶತಮಾನೋತ್ಸವ ಕಾರ್ಯಕ್ರಮ ನಡೆಸಲು ಗಾಂಧೀ ಶತಮಾನೋತ್ಸವ ಸಮಿತಿಯನ್ನು ರಚಿಸಿತು. ಈ ಸಮಿತಿಗೆ ರಾಷ್ಟ್ರಾಧ್ಯಕ್ಷರು ಅಧ್ಯಕ್ಷರಾಗಿ, ಪ್ರಧಾನಮಂತ್ರಿಗಳು ಉಪಾಧ್ಯಕ್ಷರಾಗಿ, ಸ್ಮಾರಕನಿಧಿ ಅಧ್ಯಕ್ಷರು ಕಾರ್ಯ ದರ್ಶಿಗಳಾಗಿ, ಸ್ಮಾರಕನಿಧಿ ಕಾರ್ಯದರ್ಶಿಗಳು ಸಂಘಟಕರಾಗಿ ನಿಯಮಿತರಾದರು. ಸ್ಮಾರಕನಿಧಿಯ ಕಚೇರಿಯೇ ಈ ಸಮಿತಿಯ ನೆಲೆಯಾಯಿತು. ಈ ಸಮಿತಿಯು ಮಾರ್ಗದರ್ಶನದಲ್ಲಿ ಅನೇಕ ಉಪಸಮಿತಿಗಳು ರಚಿತವಾದವು.



## ನಿಧಿಯ ವರ್ಗಾವಣೆ

ಶತಮಾನೋತ್ಸವ ಕಾರ್ಯಕ್ರಮಗಳು ಯಶಸ್ವಿಯಾಗಿ ದೇಶದೆಲ್ಲೆಡೆ ನಡೆದು ಮುಕ್ತಾಯಗೊಂಡವು. ಆಗ ಗಾಂಧೀ ಸ್ಮಾರಕನಿಧಿ ಸಂಸ್ಥೆಯನ್ನು ಮುಕ್ತಾಯ ಗೊಳಿಸುವ ವಿಚಾರ ಚರ್ಚೆ ಆಯಿತು. ಕೇಂದ್ರ ಸಮಿತಿಯ ಅಸ್ತಿತ್ವ ಅಗತ್ಯವಿದೆ ಮೂಲಧ್ಯೇಯೋದ್ದೇಶಗಳಿಗೆ ತಕ್ಕಂತೆ ಮುಂದುವರೆ ಯುವುದು ಅಗತ್ಯವಿದೆ ಆದರೆ ಮೊದಲಿನ ಹಾಗೆ ಕೇಂದ್ರ ಸಮಿತಿಯ ರೀತಿಯಲ್ಲಲ್ಲ ಮಿತವ್ಯಾಪ್ತಿಯಲ್ಲಿ ಕಾರ್ಯ ಪ್ರವೃತ್ತವಾಗಬೇಕು. ಈ ಸಂಸ್ಥೆಯಿಂದ ಸ್ಥಾಪಿತವಾದ ಸಂಸ್ಥೆಗಳ ಮೇಲಿನ ಉಸ್ತುವಾರಿ ಸಮಿತಿಯಾಗಿ ಕೆಲಸ ಮಾಡಬೇಕೆಂದು ನಿರ್ಧರಿಸಲಾಯಿತು.

ಮೊದಲ ಹೆಜ್ಜೆಯಾಗಿ 20ವರ್ಷಗಳ ಕಾರ್ಯ ಸಾಧನೆಯ ಫಲವಾಗಿ ಸಂಸ್ಥೆ ಗಳಿಸಿದ್ದ ಐದೂವರೆ ಕೋಟಿ ಹಣವನ್ನು 1-4-1970ರಲ್ಲಿ ಸಂಸ್ಥೆಗೆ ಬಿಡಲಾಯಿತು. ಇದರಲ್ಲಿ 5.19 ಕೋಟಿ ರೂ.ಗಳು ದತ್ತಿಗಳಿಂದ, ಪ್ರಾಂತೀಯ ಘಟಕಗಳಿಂದ ಸಂಸ್ಥೆ ಸ್ಥಾಪಿಸಿದ ಸಂಘಗಳಿಂದ, ಅವುಗಳ ಚಟುವಟಿಕೆಗಳಿಂದ ಬಂದ ಹಣವಾಗಿತ್ತು. ಕೇಂದ್ರ ನಿಧಿಸಂಸ್ಥೆ ಈ ಹಣದ ನಿರ್ವಹಣೆ, ಜವಾಬ್ದಾರಿ ಲೆಕ್ಕಪತ್ರಗಳ ವ್ಯವಸ್ಥೆ, ಅಂಗಸಂಸ್ಥೆಗಳ ಖರ್ಚುವೆಚ್ಚಗಳ ಮೇಲ್ವಿಚಾರಣೆ ನೋಡಿಕೊಳ್ಳಬೇಕೆಂದು ನಿರ್ಧರಿಸಲಾಯಿತು.

1970 ಆಗಸ್ಟ್‌ನಲ್ಲಿ ಕಾರ್ಯ ನಿರ್ವಾಹಕ ಸಮಿತಿ ಸಭೆಸೇರಿ 42 ಲಕ್ಷಗಳ ದತ್ತಿಹಣವನ್ನು ಕೆಳಕಂಡಕಾರ್ಯಗಳಿಗೆ ವಿನಿಯೋಗಿಸಲು ನಿರ್ಧರಿಸಿತು. ತಾನು ಸ್ಥಾಪಿಸಿದ ಸಂಸ್ಥೆಗಳ ಆರ್ಥಿಕ ಮತ್ತು ಆಡಳಿತೀಯ ಕಾರ್ಯಕ್ರಮಗಳ ಮೇಲ್ವಿಚಾರಣೆ ಅನುದಾನಕ್ಕಾಗಿ ಈ ಮೂರು ಕಾರ್ಯಕ್ರಮಗಳನ್ನು ಕೈಗೊಳ್ಳಲು ನಿರ್ಧರಿಸಿತು.

1. ಭಾರತದಲ್ಲಿ ಗಾಂಧೀ ತತ್ವದ ಪ್ರಚಾರ ಮತ್ತು ಚಟುವಟಿಕೆಗಳ ಬಗ್ಗೆ ಮಾಹಿತಿ ಕೇಂದ್ರವಾಗಿ ಕಾರ್ಯನಿರ್ವಹಿಸುವುದು.

2. ಕಾರ್ಯಕರ್ತರು ಭಾವನಾತ್ಮಕವಾಗಿ ಒಂದಾಗಿ ಗಾಂಧಿ ತತ್ವಗಳ ಅನುಷ್ಠಾನದಲ್ಲಿ ತೊಡಗುವಂತೆ ಮಾಡುವುದು.

3. ರಚನಾತ್ಮಕ ಕಾರ್ಯಕರ್ತರು ಪರಸ್ಪರ ವಿಚಾರ ವಿನಿಮಯ ಮಾಡಿಕೊಂಡು ಸಾಮೂಹಿಕ ಸಮನ್ವಯ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವಂತೆ ಮಾಡುವ ಹಾಗೂ ಸಂಯೋಜಕ ಸಮಿತಿ ಆಗಿ ಕಾರ್ಯನಿರ್ವಹಿಸುವುದು.

ಈ ರೀತಿಯಾಗಿ ಗಾಂಧೀಸ್ಮಾರಕನಿಧಿ ಸಂಸ್ಥೆ ನಡೆದು ಬಂದದಾರಿಯ ಮುಖ್ಯ ಹೆಜ್ಜೆಗಳಾಗಿವೆ. ಇಂದು ಗಾಂಧಿ ತತ್ವ ಪ್ರಚಾರ ಅನುಷ್ಠಾನದಲ್ಲಿ ನಿರತವಾದ ಸಂಸ್ಥೆಗಳ ಸಂಯೋಜಕ ಶಕ್ತಿಯಾಗಿ ದೇಶದಲ್ಲಿ ಅಗ್ರಗಣ್ಯ ಗಾಂಧಿ ಸಂಸ್ಥೆಯಾಗಿದೆ. ಮಾರ್ಗದರ್ಶಕ ಸಂಸ್ಥೆಯಾಗಿದೆ. ○







# ಉಪ್ಪಿನ ಸತ್ಯಾಗ್ರಹ ಅಥವಾ ದಂಡಿಯಾತ್ರೆಯ ಕಿರುನೋಟ

– ಡಾ॥ ಹೊ. ಶ್ರೀನಿವಾಸಯ್ಯ

**ಭಾ**ರತಕ್ಕೆ ಸ್ವಾತಂತ್ರ್ಯವನ್ನು ಮಹಾತ್ಮ ಗಾಂಧೀಜಿಯವರು ತಂದುಕೊಟ್ಟ ಮಾರ್ಗವು ಒಂದು ನೂತನ ಮಾರ್ಗವಾಗಿದೆ. ಸತ್ಯ–ಅಹಿಂಸೆಗಳೇ ಅದರ ಅಸ್ತ್ರಗಳು. ಅದು ಶಸ್ತ್ರಗಳ ಯುದ್ಧವಲ್ಲ, ಹಿಂಸಾ ದ್ವೇಷಗಳಿಂದ ಕೂಡಿದ, ಹಾಗೂ ರಕ್ತಪಾತಗಳಿಂದ ಕೂಡಿದ್ದು ಅಲ್ಲ. ಸತ್ಯಾಗ್ರಹವು, ತ್ಯಾಗಗಳಿಂದ ಕೂಡಿದ್ದು. ದೇಶದ ಸಮಸ್ಯೆಗಳನ್ನು ಪರಿಹರಿಸಲು ಹೋರಾಟ ನಡೆಸಿ, ಆಗಿನ ಆಡಳಿತಗಾರರನ್ನು ಪ್ರೀತಿಯಿಂದ ಕಂಡರು, ಅವರ ದುರಾಡಳಿತವನ್ನು ವಿರೋಧಿಸಿ ಪ್ರತಿಭಟಿಸಿದರು ಬಾಪೂಜಿ. ಭಾರತದಲ್ಲಷ್ಟೇ ಏಕೆ, ಜಗತ್ತಿನಲ್ಲೇ ಗುಲಾಮಗಿರಿ ಮಾಯವಾಗಿದೆ. ಈ ಮಾರ್ಗದಲ್ಲಿ ಜನಸಾಮಾನ್ಯರೂ ಭಾಗವಹಿಸುವ ಅವಕಾಶವಿದೆ. ಗಾಂಧೀಜಿಯವರು ರೂಪಿಸಿದ ಸತ್ಯಾಗ್ರಹಕ್ಕೆ ಹಲವಾರು ಘಟನೆಗಳು ಕಾರಣವಾಗಿದ್ದು, ಅದು ಸತ್ಯ, ಅಹಿಂಸೆಗಳ ನೆಲೆಗಟ್ಟಿನ ಮೇಲೆ ನಿಂತಿದ್ದರಿಂದ, ಜಗತ್ತಿನ ದೊಡ್ಡ ಸಾಮ್ರಾಜ್ಯವೂ ಸಹ ಮಣಿಯುವಂತಾಯಿತು.

1929ರಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಗಾಂಧೀಜಿಯನ್ನು ಅಧ್ಯಕ್ಷರಾಗಲು ಆಹ್ವಾನ ನೀಡಿತು. ಅವರು ಆ ಹುದ್ದೆಯನ್ನು ನಿರಾಕರಿಸಿದರು. ಆ ಸ್ಥಾನಕ್ಕೆ ಪಂಡಿತ್ ಜವಹರ್‌ಲಾಲ್ ನೆಹರೂರವರು ಅಧ್ಯಕ್ಷರಾದರು. ರಾಜಕೀಯ ಚಟುವಟಿಕೆಗಳು ಹೆಚ್ಚಾದವು. ಈ ಚಟುವಟಿಕೆಗಳನ್ನು ಕುಂದಿಸಲು ಯುಕ್ತಿಯಿಂದ ಆಗಿನ ವೈಸರಾಯಿ ಲಾರ್ಡ್ ಇರವಿನ್ ಹಿಂದೂಸ್ಥಾನಕ್ಕೆ ಯಾವ ಸುಧಾರಣೆ ಕೊಡಬೇಕೆಂಬುದನ್ನು ಯೋಚಿಸಲು ಚಕ್ರಗೋಷ್ಠಿಯೊಂದು ಸೇರಿಸಲಿದೆ ಎಂದು ಪ್ರಕಟಣೆ ಹೊರಡಿಸಿದರು. ಈ ಸಂದರ್ಭದಲ್ಲಿ ಸರ್ವಪಕ್ಷ ಸಮ್ಮೇಳನ ದೆಹಲಿಯಲ್ಲಿ ಸೇರಿತು. ಗಾಂಧೀಜಿಯೂ ಅದರಲ್ಲಿ ಭಾಗವಹಿಸಿದರು. ಕೆಲವು ನಿಯಮಗಳ ಮೇಲೆ ಈ ಸಭೆ ವೈಸರಾಯರ ಪ್ರಕಟಣೆಯನ್ನು ಅಂಗೀಕರಿಸಿತು. ಆದರೆ ಬ್ರಿಟಿಷ್ ಸರಕಾರ ಇದಕ್ಕೆ ಒಪ್ಪಲಿಲ್ಲ.

1930ರಲ್ಲಿ ಲಾಹೋರಿನಲ್ಲಿ ನಡೆದ ಮಹಾಸಭೆ ಸ್ವಾತಂತ್ರ್ಯ ಸೂಚನೆಗಳನ್ನು ಒಪ್ಪಿತು. ಸಂಗ್ರಾಮದ ಕಹಳೆ ಕೂಗಿತು. ಈ ಸಮರದಲ್ಲಿ ನಾಯಕತ್ವವನ್ನು ಗಾಂಧೀಜಿಯವರಿಗೆ ವಹಿಸಿದರು. ಹೋರಾಟ ಯಾವಾಗ ಹೇಗೆ ಪ್ರಾರಂಭವಾಗಬೇಕೆಂಬ ನಿರ್ದೇಶಕರೂ ಅವರೇ ಆಗಿದ್ದರು. 1930ರ ಜನವರಿ 26ನೇ ದಿನ ಸ್ವಾತಂತ್ರ್ಯ ದಿನಾಚರಣೆಯನ್ನು ದೇಶದಲ್ಲಿ ಎಲ್ಲ ಕಡೆಯೂ ಗಂಭೀರವಾಗಿ ಆಚರಿಸಿದರು.

ಜನ ಈ ಸಮರದ ಕಹಳೆಯ ಕೂಗಿಗಾಗಿ ಆತುರದಿಂದ ಕಾಯ್ದು ತುದಿಗಾಲಿನಲ್ಲಿ ನಿಂತಿದ್ದರು. ಗಾಂಧೀಜಿಗೆ ಇದರ ಅರಿವು ಆಗಿತ್ತು. ಇದು ಸರಿಯಾದ ಕಾಲವೆಂದು ತಿಳಿದಿದ್ದರು. ಇದಕ್ಕೆ ತಕ್ಕ ಸನ್ನಿವೇಶಗಳು ಒದಗಿಬಂದವು. ಚೌರಿಚೌರ ಘಟನೆಯಿಂದ ಚಳವಳಿ ನಿಂತ ಮೇಲೆ ಗಾಂಧೀಜಿ ಜನರಿಗೆ ಚಳುವಳಿಯ ರೀತಿ ನೀತಿಯುನ್ನು ಸದಾ ಬೋಧಿಸಿ, ಅವರಿಗೆ ರಕ್ತಗತವಾಗುವಂತೆ ಮಾಡಿದ್ದರು.

ಅಹಿಂಸಾ ಮಾರ್ಗದಲ್ಲಿ ಇದ್ದ ಅಪನಂಬಿಕೆ ಹೋಗಿ ಸ್ವರಾಜ್ಯ ಸಾಧಿಸಲು ಅಹಿಂಸಾಮಾರ್ಗ ಒಂದೇ ಎಂಬ ನಂಬಿಕೆ ಜನರಲ್ಲಿ ಹುಟ್ಟಿತು. ಈ ಮಾರ್ಗದಲ್ಲಿ ನಡೆದರೆ ಮಾತ್ರ ಗಾಂಧೀಜಿಗೆ ಸಂತೋಷವಾಗುವುದೆಂದು ಅರಿವು ಜನರಲ್ಲಿ ಉಂಟಾಯಿತು. ಶಾಸನ ಭಂಗ ರೂಪದಲ್ಲಿ ಹೋರಾಟ ನಡೆಸಲು ಸಿದ್ಧರಾದರು. ಗಾಂಧೀಜಿ ಅವರು ನೀಡಿದ ಈ ಹೊಸ ಮಾರ್ಗದ ಒಂದು ಚಳವಳಿ ಉಪ್ಪಿನ ಸತ್ಯಾಗ್ರಹ. ಕಾನೂನು ಭಂಗ ಚಳುವಳಿಗೆ ಗಾಂಧೀಜಿ ಉಪ್ಪಿನ ಸತ್ಯಾಗ್ರಹ ಆಯ್ಕೆ ಮಾಡಿಕೊಂಡಿದ್ದು ಬಹಳ ಜನರಿಗೆ ಆಶ್ಚರ್ಯ ಉಂಟುಮಾಡಿತು.

## ಉಪ್ಪಿನ ಸತ್ಯಾಗ್ರಹ :

ಆ ವೇಳೆಗೆ ಬ್ರಿಟಿಷ್ ಸರ್ಕಾರ ಜನಸಾಮಾನ್ಯರಿಗೆ ಅತ್ಯವಶ್ಯಕವಾಗಿ ಬೇಕಾದ ಉಪ್ಪಿನ ಮೇಲೆ ತೆರಿಗೆಯನ್ನು ವಿಧಿಸಿತು. ಉಪ್ಪನ್ನು ತೆರಿಗೆ ಕೊಡದೆ ತಯಾರಿಸಿದವರಿಗೆ, ಸಂಗ್ರಹಿಸಿದವರಿಗೆ, ಕಠಿಣ ಶಿಕ್ಷೆ ವಿಧಿಸಲಾಗಿತ್ತು. ಉಪ್ಪಿನ ತೆರಿಗೆಯನ್ನು ಕೊಡದ ಹೇಡಿಗಳಿಗೆ 3 ತಿಂಗಳ ಜೈಲು ಶಿಕ್ಷೆ ವಿಧಿಸಲಾಗಿದ್ದನ್ನು ಗಾಂಧೀಜಿಯವರು 'ಯಂಗ್



ಇಂಡಿಯಾ' (6.3.1930ರಲ್ಲಿ) ದಲ್ಲಿ ಎಲ್ಲರ ಗಮನಕ್ಕೆ ತಂದರು. ಅದರಲ್ಲೂ "ಹೇಡಿಗಳು" ಇಂಬ ಪದ ಉಪಯೋಗಿಸಿರುವುದು ಅವರ ಮನಸ್ಸಿಗೆ ಬಹಳ ನೋವನ್ನೇ ಉಂಟುಮಾಡಿತು. ಇದ್ದಕ್ಕಿದ್ದಂತೆ "ಉಪ್ಪು" ಒಂದು ಆಕರ್ಷಕ ಶಬ್ದವಾಯಿತು. ಅದೇ ಸ್ವಾತಂತ್ರ್ಯ ಚಳವಳಿಯ ಮಂತ್ರವಾಯಿತು.

ಉಪ್ಪಿನ ತೆರಿಗೆಯನ್ನು ರದ್ದುಗೊಳಿಸಬೇಕೆಂದು ಗಾಂಧೀಜಿಯವರು ವೈಸರಾಯಿಯವರಿಗೆ ಪತ್ರದ ಮೂಲಕ ಕೇಳಿಕೊಂಡರು. "ಎಲ್ಲರ ಆಹಾರದಲ್ಲಿ ಉಪ್ಪು ಅವಶ್ಯವಾಗಿದ್ದರೂ ಈ ತೆರಿಗೆ ತುಂಬಾ ಭಾರ. ತೆಗೆದು ಹಾಕಿದರೆ ಬಡಜನರಿಗೆ ಅತ್ಯಂತ ಪ್ರಯೋಜನ, ಉಪಕಾರ" ಎಂದು ತಿಳಿಸಿದರು.

ಗಾಂಧೀಜಿಯವರು ಉಪ್ಪಿನ ಕಾನೂನು ವಿಧಿಯನ್ನು ಮುರಿಯಲು ತಾನು ಹೊರಟಿರುವುದನ್ನು ತಿಳಿಸಿದರು. ಈ ಬಗ್ಗೆ ಚರ್ಚಿಸಲು ಸಿದ್ಧರಾಗಿದ್ದರು. ಚರ್ಚೆಗೆ ಸರ್ಕಾರ ಸಿದ್ಧವಾದರೆ ಸತ್ಯಾಗ್ರಹವನ್ನು ಮುಂದೆ ಹಾಕಲೂ ಸಿದ್ಧವೆಂಬುದನ್ನೂ ತಿಳಿಸಿದರು. "ಇದು ಸತ್ಯಾಗ್ರಹಿಯ ಸರಳವಾದ ಮತ್ತು ಪವಿತ್ರವಾದ ಕರ್ತವ್ಯ. ಉಪ್ಪಿನ ಶಾಸನ ಮುರಿಯಲು ಸತ್ಯಾಗ್ರಹ ಪ್ರಾರಂಭಿಸಬೇಕಾಗುತ್ತದೆ. ನಾನು ದಸ್ತಗಿರಿಯಾದರೂ ಸತ್ಯಾಗ್ರಹ ಮುಂದುವರಿಸಲು ಸತ್ಯಾಗ್ರಹಿಗಳು ಸಿದ್ಧವಾಗಿದ್ದಾರೆ" ಎಂದು ತಿಳಿಸಿದರು. ಈ ಪತ್ರವನ್ನು ಒಬ್ಬ ಆಂಗ್ಲ ಮಿತ್ರನ ಕೈಯಲ್ಲಿ ಕಳುಹಿಸಿದರು.

ಆದರೆ ವೈಸರಾಯಿ ಇದಕ್ಕೆ ಒಪ್ಪಲಿಲ್ಲ. ಕಾನೂನು ಮುರಿಯುವುದು ಶಾಂತಿ ಭಂಗ ಮಾಡುವ ಉದ್ದೇಶ  ಕಾನೂನು ಪ್ರಕಾರ ಕ್ರಮ ತೆಗೆದುಕೊಳ್ಳುವುದಾಗಿ ಉತ್ತರಿಸಿದರು.

ಗಾಂಧೀಜಿ ಪತ್ರಿಕೆಯಲ್ಲಿ ಬರೆದರು "ಮೊಳಕಾಲು ಊರಿ ರೊಟ್ಟಿ ಬೇಡಿದರೆ ದೊರೆತದ್ದು ಕಲ್ಲು"

"ಆಡಳಿತ ದೃಷ್ಟಿಯಲ್ಲಿ ಜನಾಂಗ ಅರಿತಿರುವ ಸಾರ್ವಜನಿಕ ಶಾಂತಿ, ಸಾರ್ವಜನಿಕ ಸೆರೆಮನೆ ಶಾಂತಿ. ಭಾರತ ಬಹು ವಿಶಾಲವಾದ ಒಂದು ದೊಡ್ಡ ಸೆರೆಮನೆ. ನಾನು ಕಾನೂನು ಮುರಿಯುತ್ತೇನೆ. ಗಾಳಿ, ಬೆಳಕಿಗಾಗಿ ತವಕಿಸುವ ಜನರ ಬಾಯಿ ಕಟ್ಟಿಸುವಂತಹ ಏಕಾಂತ ಸಂಕಟದ ಕಡ್ಡಾಯ ಶಾಂತಿಯನ್ನು ಭಂಗಪಡಿಸುವುದು ನನ್ನ ಪವಿತ್ರ ಕರ್ತವ್ಯ" ಎಂದರು. ಗಾಂಧಿಜಿ ಚಿಕ್ಕದಾದ ತಮ್ಮ ಆಶ್ರಮವಾಸಿಗಳ ಗುಂಪಿನೊಡನೆ ಸತ್ಯಾಗ್ರಹ ಹೂಡಲು ನಿರ್ಣಯ ಮಾಡಿದರು. ಇದುವರೆಗೆ ಜನರನ್ನು ಕಾಯ್ದಿರಿಸಿದ್ದರು. ಹೆಚ್ಚು ಕಾಲ ನಿಯಮಗಳ ಪಾಲನೆಯಲ್ಲಿ ತೊಡಗಿಸಿದ್ದರಿಂದ, ತಮ್ಮ ಮತ್ತು ಸತ್ಯಾಗ್ರಹದ ಒಳ್ಳೆಯ ದಾಖಲೆ ಸ್ಥಾಪಿಸಲು ಅವರು ಸಮರ್ಥರೆಂದು ಹೀಗೆ ಇರಿಸಿದ್ದರು. 1930ರ ಮಾರ್ಚಿ ಎರಡನೇ ತಾರೀಖು ಗಾಂಧೀಜಿ ಅವರು ತಮ್ಮ ಸುಪ್ರಸಿದ್ಧ ಪತ್ರವನ್ನು ವೈಸರಾಯಿಗೆ ಹೀಗೆ ಬರೆದರು.

"ಪ್ರಿಯ ಮಿತ್ರ,

"ಯಾವ ಅಪಾಯಕಾರಿ ಕಾರ್ಯಕ್ರಮವನ್ನು ಕೈಗೊಳ್ಳಲು ಅನೇಕ ವರುಷಗಳಿಂದ ನಾನು ಹಿಂಜರಿಯುತ್ತಿದ್ದೇನೋ ಅಂಥ ಸವಿನಯ ಶಾಸನ ಭಂಗದ ಚಳವಳಿಯನ್ನು ಪ್ರಾರಂಭಿಸುವ ಮುನ್ನ ನಿಮ್ಮ ಹತ್ತಿರ ಒಂದು ಮನಸಾರೆ ಮಾರ್ಗಾನ್ವೇಷಣೆ ಮಾಡಬಯಸುತ್ತೇನೆ."

ಈ ಪತ್ರ ಅವರ ಮುಖ್ಯ ತತ್ವವನ್ನು (ಅಂದರೆ "ನಾನು ಯಾವ ಜೀವಜಂತುವನ್ನು ಅದರಲ್ಲಿಯೂ ಮಾನವ ಮಾರ್ಗವನ್ನು ಉದ್ದೇಶಪೂರ್ವಕ ಹಿಂಸಿಸಲಾರೆ) ಎಂದು ಪ್ರಸ್ತಾಪಿಸುತ್ತಾ, ಅನಂತರ ಬ್ರಿಟಿಷ್ ರಾಜ್ಯಾಡಳಿತ ಭಾರತವನ್ನು ಸೂರೆಗೊಂಡುದಕ್ಕಾಗಿ ಖಂಡಿಸಬೇಕಾಗುತ್ತದೆ. ಈ ವಿಚಾರಗಳನ್ನು ಆಲೋಚಿಸಬೇಕೆಂದು ವೈಸರಾಯಿಯನ್ನು ಅವರು "ಕಾಲೂರಿ" ಬೇಡಿಕೊಳ್ಳುತ್ತಾರೆ : "ಹೀಗೆ ವಿಷಯ ಮಂಥನ ಮಾಡಲು ಸಾಧ್ಯವಾಗದಿದ್ದರೆ ಈ ತಿಂಗಳ ಹನ್ನೊಂದನೆಯ ದಿನವನ್ನ ಆಶ್ರಮದ ಸಹಚಾರಿಗಳಲ್ಲಿ ಸಾಧ್ಯವಾದಷ್ಟು ಅನುಯಾಯಿಗಳನ್ನು ಕರೆದುಕೊಂಡು ಉಪ್ಪಿನ ಶಾಸನ ವಿಧಿ ಕ್ರಮಗಳನ್ನು ಮುರಿಯಲು ಹೊರಡುವೆನು. ನನ್ನ ಉದ್ದೇಶ ಕೈಗೂಡದಂತೆ ಭಂಗ ಪಡಿಸಲು ನನ್ನನ್ನು ದಸ್ತಗಿರಿ ಮಾಡುವುದು ತಮ್ಮ ಕೈಯಲ್ಲಿದೆ ಎಂದೂ ಸಹ ನಾ ಬಲ್ಲೆ. ನನ್ನ ತರುವಾಯ ಈ ನನ್ನ ಕಾರ್ಯಕ್ರಮವನ್ನು ಒಂದು ಶಿಸ್ತಿನ ಕ್ರಮದಲ್ಲಿ ಮುಂದುವರಿಸಿಕೊಂಡು ಬರಲು ಸಹಸ್ರಾರು ಜನ ಸಿದ್ಧವಾಗಿರುವುದಾಗಿ ನಾನು ಆಶಿಸುತ್ತೇನೆ."

ಲಾರ್ಡ್ಇರ್ವಿನ್ ಒಂದು ಭಯಂಕರ ಸಮಸ್ಯೆಯನ್ನು ಎದುರಿಸಬೇಕಾಯಿತು. ಗಾಂಧೀಜಿಯನ್ನು ದಸ್ತಗಿರಿ ಮಾಡಬೇಕೇ, ಬೇಡವೇ ಎಂಬುದರ ಬಗ್ಗೆ



ಬೇಕಾದಷ್ಟು ಸರ್ಕಾರದಲ್ಲಿ ಚರ್ಚೆಯೂ ಆಯಿತು. ನಿರ್ಧಾರ ತೆಗೆದುಕೊಳ್ಳುವುದೂ ಕಷ್ಟವಾಯಿತು. ವೈಸರಾಯಿಯವರಿಗೆ ಅಧಿಕಾರಿಗಳು ಗಾಂಧೀಜಿಯ ದೃಢ ನಿಶ್ಚಯವನ್ನು ತಿಳಿಸಿದರು.

"ಆಶ್ರಮ ಸ್ಥಾಪಿಸಿ 15 ವರ್ಷಗಳಾದುವು. ಇಷ್ಟು ಕಾಲಾನಂತರ ಇಂತಹ ಹೊರೆಗಳನ್ನು ಆಶ್ರಮ ನಿರ್ವಹಿಸಲಾರದೆ ಹೋದರೆ ನಾನು ಮತ್ತು ಅದು ಕಣ್ಮರೆಯಾಗಬೇಕು. ಆದುದರಿಂದ ದೇಶಕ್ಕೂ, ಆಶ್ರಮಕ್ಕೂ, ನನಗೂ ಕ್ಷೇಮ" ಎಂದು ಹೇಳಿದರು. ಕಡೆಗೆ ತಮ್ಮ ಮನಸ್ಸಿನ ಆಲೋಚನೆಯನ್ನು ಪ್ರಕಟಿಸಿದರು. ಉಪ್ಪಿನ ಸತ್ಯಾಗ್ರಹ ಮಾಡಲು ನಿರ್ದಿಷ್ಟ ಸ್ಥಳ "ದಂಡಿ" ದೂರದ ಒಂದು ಹಳ್ಳಿ. 241 ಮೈಲಿ. (385 ಕಿಲೋ ಮೀಟರ್). ನಿರ್ಜನಪ್ರದೇಶ, ಕುಡಿಯಲು ನೀರಿಲ್ಲ, ಇರಲು ಸ್ಥಳ ಇರಲಲ್ಲ. ರೈಲು ನಿಲ್ದಾಣ 16 ಕಿ.ಮೀ ದೂರ ರಸ್ತೆ ಇಲ್ಲ.

ಸತ್ಯಾಗ್ರಹಿಗಳ ಮೊದಲ ತಂಡ ಆರಿಸುವುದು ಕಷ್ಟವಾಯಿತು. ಅನೇಕರು ಹೊರಗಡೆಯಿಂದ ಸತ್ಯಾಗ್ರಹದಲ್ಲಿ ಭಾಗವಹಿಸಲು ಧಾವಿಸಿ ಬಂದರು. ಹೆಂಗಸರೂ ಇದರಲ್ಲಿ ಭಾಗವಹಿಸಲು ಆಶಿಸಿದರು. "ಅವರ ಸರದಿ ಈಗಲ್ಲ" ಎಂದು ಗಾಂಧೀಜಿ ಒಂದು ಕಾರಣ ಕೊಟ್ಟರು. "ನಾನು ಎದುರಾಳಿ ವಿಚಾರ ಗಮನಿಸಬೇಕು. ನಾವು ಸಂಕಟಕ್ಕೆ, ನೋವಿಗೆ ಗುರಿಯಾಗುತ್ತೇವೆ. ಹಿಂಸೆಯೂ ಇರಬಹುದು. ಸರಕಾರ ಸ್ತ್ರೀಯರು ಇರುವುದರಿಂದ ಶಿಕ್ಷಿಸಲು ಹಿಂದೆಗೆಯಬಹುದು" ಎಂದು ಮೊದಲ ತಂಡದಲ್ಲಿ ಅವರನ್ನು ಸೇರಿಸಲಿಲ್ಲ. ಆಶ್ರಮದಲ್ಲೇ ಇದ್ದ ಮೀರಾ ಬೆಹನ್ ಮೊದಲಾದವರು ಅಪೇಕ್ಷೆ ಪಟ್ಟರು. "ನೀವು ಬೇಡ. ನಿಮಗೆ ಇದಕ್ಕಿಂತ ಘನವಾದ ಮತ್ತು ಪವಿತ್ರವಾದ ಕಾರ್ಯವಿದೆ. ಆಶ್ರಮದಲ್ಲಿ ಇದ್ದು ಅದರ ಕಾರ್ಯ ನಡೆಸಿ ಎಂದರು.

ಪ್ರಥಮ ಪ್ರಾರ್ಥನಾ ಸಭೆಯಲ್ಲಿ ಸತ್ಯಾಗ್ರಹಿಗಳ 78 ಜನರ ಹೆಸರುಗಳನ್ನು ಪ್ರಕಟಿಸಿದರು. ದಂಡಿಯಾತ್ರೆಯಲ್ಲಿ ಭಾಗವಹಿಸಲು ಅವಕಾಶ ದೊರಕಿದ ಕರ್ನಾಟಕದ ಏಕೈಕ ಹೆಮ್ಮೆಯ ಯುವಕ ಮೈಲಾರ ಮಹದೇವ್ ಮಾರ್ಥಾಂಡ.

ದಿನಕ್ಕೆ 10 ಮೈಲಿ (16 ಕಿ.ಮೀ.) ಪ್ರಯಾಣ. ಒಂದು ಹಳ್ಳಿಯಲ್ಲಿ ಒಂದು ದಿನ ಶಿಬಿರ, ಪ್ರಾರ್ಥನಾ ಸಭೆಗಳು, ಭೇಟಿಗಳು ಯಾತ್ರೆಯ ಉದ್ದೇಶ. ಆ ಜನಗಳಿಗೆ ತಿಳುವಳಿಕೆ, ಸೂತ್ರಯಜ್ಞ, ವಾರಕ್ಕೊಂದು ದಿನ ವಿಶ್ರಾಂತಿ, ಗ್ರಾಮ ಸ್ವಚ್ಛತೆ, ಶಿಕ್ಷಣ ; ಇವುಗಳಲ್ಲಿ ಗ್ರಾಮಸ್ಥರನ್ನು ತೊಡಗಿಸುವುದು. ಹೀಗೆ ಸಾಗಿತ್ತು ಗಾಂಧೀಜಿಯ ದಂಡಿಯಾತ್ರೆಯ ದಿನಚರಿ.

ಸಾಬರಮತಿಯ ಆಶ್ರಮದಿಂದ 1930 ಮಾರ್ಚ್ 12 ರಂದು ಹೊರಟು ಸರಿಯಾಗಿ ಇಪ್ಪತ್ತೈದು ದಿನಗಳಿಗೆ ಏಪ್ರಿಲ್ ಐದರಂದು ದಂಡಿಗೆ ಸತ್ಯಾಗ್ರಹಿಗಳ ತಂಡ ಬಂದು ಸೇರಿತು. 25 ದಿನಗಳಲ್ಲಿ "ಸಾಬರಮತಿ" ಆಶ್ರಮದಿಂದ "ದಂಡಿ" ಸೇರಬೇಕು. ಮಾರ್ಚ್ 12ರಂದು ಪ್ರಾರಂಭ – ಏಪ್ರಿಲ್ 6ನೇ ತಾರೀಖು ದಂಡಿಯಲ್ಲಿ ಉಪ್ಪಿನ ಸತ್ಯಾಗ್ರಹ ನಡೆಸಬೇಕೆಂದು ನಿರ್ಧರಿಸಿದರು.

ಗಾಂಧೀಜಿಯವರು ಸಾಬರಮತಿಯಿಂದ ಈ ಕೆಳಗೆ ವಿವರಿಸಿದ ಮಾರ್ಗ ಅನುಸರಿಸಿ ಪಾದಯಾತ್ರೆಯ ಮೂಲಕ ದಾಂಡಿಯನ್ನು ತಲುಪಿದರು.

ಸಾಬರಮತಿ ಆಶ್ರಮದಿಂದ ದಂಡಿಗೆ ಪ್ರಯಾಣ ಮಾಡಿದ ಮಾರ್ಗ ಈ ಕೆಳಕಂಡ ನಕ್ಷೆಯಲ್ಲಿದೆ.

| ದಿನಾಂಕ | ಸ್ಥಳ | ಅಂತರ |
|---|---|---|
| 12–3–1930 | ಅಸಲಾಲಿ | 13 ಮೈಲುಗಳು |
| 13–3–1930 | ಬರೆಜಾ, ನವಗಾಮ್ | 9 ಮೈಲುಗಳು |
| 14–3–1930 | ವಸ್ನಾ, ಮತರ | 10 ಮೈಲುಗಳು |
| 15–3–1930 | ದಭಾನ್, ನಾದ್ಯೆದ | 15 ಮೈಲುಗಳು |
| 16–3–1930 | ಬೊರಿಯಾವಿ, ಆನಂದ | 15 ಮೈಲುಗಳು |
| 17–3–1930 | ಮೌನ ಆಚರಣೆ ದಿನ (ಆನಂದದಲ್ಲಿ) | |



| | | |
|---|---|---|
| 18-3-1930 | ನಪಾ, ಬೊರಸದ್ | 11 ಮೈಲುಗಳು |
| 19-3-1930 | ರಾಸ್, ಕಂಕಪುರ | 12 ಮೈಲುಗಳು |
| 20-3-1930 | ಮಾಹಿಸಾಗರ ನದಿ ದಾಟಿದರು | 11 ಮೈಲುಗಳು |
| 21-3-1930 | ಗಜೇರಾ, ಅಂಖಿ | 11 ಮೈಲುಗಳು |
| 22-3-1930 | ಜಂಬೂಸರ್ ಅಮೋದ | 10 ಮೈಲುಗಳು |
| 23-3-1930 | ಬುವಾ, ಸಮ್ನಿ | 10 ಮೈಲುಗಳು |
| 24-3-1930 | ಸಮ್ನಿಯಲ್ಲಿ ಮೌನ ಆಚರಣೆ | |
| 25-3-1930 | ತ್ರಾಲಸಾ ದಿರೋಲ್ | 10 ಮೈಲುಗಳು |
| 26-3-1930 | ಬ್ರೋಚ್, | 12 ಮೈಲುಗಳು |
| | ಅಂಕಲೇಶ್ವರ ನರ್ಮದಾ ನದಿ ದಾಟಿದರು | |
| 27-3-1930 | ಸಜೋದ, ಮುಂಗ್ರೋಳ್ | 12 ಮೈಲುಗಳು |
| 28-3-1930 | ರಾಯಮಾ | 9 ಮೈಲುಗಳು |
| | ಉಮರಾಚಿ ಕಿಮ್ ನದಿಯನ್ನು ದಾಟಿದರು | |
| 29-3-1930 | ಇರ್ಥಮ್, ಬಟಗಾಮ್ | 10 ಮೈಲುಗಳು |
| 30-3-1930 | ಸಂಧೀರ, ದೇಲಾಡ್ | 9 ಮೈಲುಗಳು |
| 31-3-1930 | ದೇಲಾಡ್‌ರಲ್ಲಿ ಮೌನ ವ್ರತ | |
| 1-4-1930 | ಛಪ್ರಾಭಾಥಾ, | 11 ಮೈಲುಗಳು |
| | ಸುರತ್(ತಾಪಿನದಿಯನ್ನು ದಾಟಿದರು) | |
| 2-4-1930 | ದಿಂಡೋಲಿ, ವಂಜ್ | 11 ಮೈಲುಗಳು |
| 3-4-1930 | ಧಾಮನ್, ನವಸಾರಿ | 12 ಮೈಲುಗಳು |
| 4-4-1930 | ವಿಜಲ್‌ಪೂರ, ಕರಾಡಿ | 14 ಮೈಲುಗಳು |
| 5-4-1930 | ದಾಂಡಿ ಗ್ರಾಮ | 4 ಮೈಲುಗಳು |

ಅಮೇರಿಕಾ ಪತ್ರಿಕಾ ಪ್ರತಿನಿಧಿ ಒಬ್ಬ ಸತ್ಯಾಗ್ರಹದ ಸಂದೇಶ ಕೇಳಿದ. ಒಂದು ಚೂರು ಕಾಗದದಲ್ಲಿ ಗಾಂಧೀಜಿ ಹೀಗೆ ಬರೆದರು - ``I want world sympathy in the battle of right , against might".

- M.K.Gandhi, 5-4-30

ಸಾಮ್ರಾಜ್ಯಶಾಹಿ ಶಕ್ತಿಯ ಎದುರಾಗಿ ಹೋರಾಡುವ ಪ್ರಜೆಗಳ ಈ ಸತ್ಯ ಯುದ್ಧದಲ್ಲಿ ನನಗೆ ಜಗತ್ತಿನ ಸಹಾನುಭೂತಿ ಬೇಕಾಗಿದೆ.

- ಎಂ. ಕೆ. ಗಾಂಧಿ, 5-4-30

ಗಾಂಧೀಜಿಯು ಸಾಬರಮತಿ ಆಶ್ರಮದಿಂದ ಉಪ್ಪಿನ ಸತ್ಯಾಗ್ರಹಕ್ಕಾಗಿ ಯಾತ್ರೆಯನ್ನು ಮೊದಲು ಮಾಡಿದರು. ಆಶ್ರಮ ಸೋದರಿಯರು ಈ ನಾಯಕನ ಹಣೆಗೆ ಕುಂಕುಮವಿಟ್ಟು, ಆರತಿ ಎತ್ತಿ, ಸಂಗ್ರಾಮದಲ್ಲಿ ಜಯವನ್ನು ಬಯಸಿ ವಿಜಯಯಾತ್ರೆಗೆ ಬೀಳ್ಕೊಟ್ಟರು. ವಿದ್ಯುತ್ ಪ್ರವಾಹದಂತೆ ಈ ಸುದ್ದಿ ದೇಶ ವಿದೇಶಗಳಲ್ಲಿ ಹರಡಿತು. ಯಾತ್ರಿಕರ ಶ್ರೇಣಿ ದಿನೇ ದಿನೇ ಬೆಳೆಯುತ್ತಾ ಹೋಯಿತು. ಗಾಂಧೀಜಿ ದಂಡಧರರಾಗಿ ಶಾಂತಿಯುತವಾಗಿ ಪ್ರಸನ್ನರಾಗಿ ನಿರ್ಭೀತರಾಗಿ, ಪ್ರಭಾವವನ್ನು ಬೀರುತಿದ್ದ



ಮುಖ ಮುದ್ರೆಯಿಂದ, ಕೂಡಿ ಹೆಜ್ಜೆಗಳನ್ನಿಡುತ್ತ ಆಶ್ರಮದಿಂದ 241 ಮೈಲಿ ದೂರದ (385 ಕಿ.ಮೀ) ಸಮುದ್ರ ದಡಕ್ಕೆ ಪ್ರಯಾಣ ಪ್ರಾರಂಭಿಸಿದರು.

ಅನುಯಾಯಿಗಳ ಗುಂಪು ಶ್ರೇಣಿ ನಾಯಕನನ್ನು ಅನುಸರಿಸಿ ಸಾಗುತ್ತಿತ್ತು. ಅನಿವಾರ್ಯವಾಗಿ ದಸ್ತಗಿರಿ ಆದರೆ ಕ್ರಮ ಜರಿಗಿಸಲು ಕಾಂಗ್ರೆಸ್ ಅಧ್ಯಕ್ಷರಿಗೆ ವಿಶೇಷ ಸರ್ವಾಧಿಕಾರ ಕೊಡಲಾಗಿತ್ತು. ಗಾಂಧೀಜಿಯ ಉಪ್ಪಿನ ಶಾಸನ ಉಲ್ಲಂಘನೆ ಮಾಡಿ ಚಳುವಳಿಯನ್ನು ದೇಶ–ವಿದೇಶಗಳಲ್ಲಿ ಕಾತುರತೆಯಿಂದ ಕಾಯುತ್ತಿದ್ದರು.

ಜಲಿಯನ್ ವಾಲಾಬಾಗ್‌ನ ಬಲಿದಾನದ ಜ್ಞಾಪಕಾರ್ಥವಾಗಿ ವರ್ಷ ವರ್ಷವೂ ಆಚರಿಸುತ್ತಿದ್ದ ರಾಷ್ಟ್ರೀಯ ಸಪ್ತಾಹ ಏಪ್ರಿಲ್ 6ನೇ ತಾರೀಖು ಪ್ರಾರಂಭವಾಯಿತು. ಅದೇ ದಿನ ಸಂಗ್ರಾಮದ ಸೂತ್ರಧಾರರಾದ ಗಾಂಧೀಜಿ ದಂಡಿಯ ಬಳಿ ಸಮುದ್ರ ತೀರದಲ್ಲಿ ಉಪ್ಪಿನ ಶಾಸನ ಭಂಗದ ಆರಂಭೋತ್ಸವ ನೆರವೇರಿಸಲು ತೀರ್ಮಾನ ಮಾಡಿದ್ದರು.

ಸರಕಾರ ಕೂಡ ಎಲ್ಲ ರೀತಿಯ ಎಚ್ಚರಿಕೆ ವಹಿಸಿತು. ಗಾಂಧೀಜಿಯ ದಸ್ತಗಿರಿ ಮಾಡಿದರೆ, ದೇಶದಲ್ಲಿ ಶಾಂತಿ ಭಂಗವಾಗುವ ಭೀತಿ. ಕೆಲವರು ಮಾತ್ರ ಇವರ ಜೊತೆಯಾಗಿಲ್ಲ. ಈ ಸಂದರ್ಭವನ್ನು ( ದಿ ಅರ್ಲ್ ಆಫ್ ಬಿಕನ್ ಲೀಡ್) The Earl of Birkenlead ಅವರ ಆತ್ಮಕಥೆಯಲ್ಲಿ ಸೆಕ್ರೆಟಿ ಆಫ್ ಸ್ಟೇಟ್‌ರವರಿಗೆ (Secretary of State) 7–4–1920ರಲ್ಲಿ ಬರೆದ ಪತ್ರದಲ್ಲಿ ಪ್ರಕಟಿಸಿದ್ದಾರೆ.

"ಈ ಮನುಷ್ಯನಿಗೆ ದಂಡಿಯಾತ್ರೆಯನ್ನು ಮುಗಿಸಲು ಕೊನೆಯ ಆಸೆ. ಆದರೆ ನನಗೆ ತಿಳಿದಿರುವಂತೆ ಆತನ ರಕ್ತದೊತ್ತಡ ಹೆಚ್ಚುತ್ತದೆ. ಬಹಳ ಗಂಭೀರ, ಆತನ ಹೃದಯದ ಆರೋಗ್ಯ ಚೆನ್ನಾಗಿಲ್ಲ. ಕೆಲವು ದಿನಗಳ ಹಿಂದೆ ನನಗೆ ತಿಳಿದಂತೆ ಆತನ ಕುಂಡಲಿ ಪ್ರಕಾರ ಈ ವರ್ಷ ಸಾಯುತ್ತಾನೆ. ಅದಕ್ಕಾಗಿ ಈ ಕೊನೆ ಹೋರಾಟದ ಪ್ರಯತ್ನ. ಇದು ಒಳ್ಳೆಯ ಸಂತೋಷದ ಸುದ್ದಿಯಲ್ಲವೆ ?"

ಸರ್ಕಾರ ಯಾರನ್ನೂ ದಸ್ತಗಿರಿ ಮಾಡಲಿಲ್ಲ. "ಏಪ್ರಿಲ್ 5ನೇ ತಾರೀಖು ದಂಡಿ ತಂಡದವರು ಸಮುದ್ರ ದಡ ಸೇರಿದರು. 6ನೇ ತಾರೀಖು ಬೆಳಗ್ಗೆ ಆರಾರು ಜನರು ಗುಂಪಾಗಿ ಹೋಗಿ ಸಮುದ್ರದ ನೀರನ್ನು ತಂದು ಉಪ್ಪನ್ನು ತಯಾರಿಸಿದರು. ಸಮುದ್ರದಲ್ಲಿ ಗಾಂಧೀಜಿ ಸ್ನಾನ ಮಾಡಿದರು. ಗಾಂಧೀಜಿ ಬೆಳಗ್ಗೆ 8.30ಕ್ಕೆ ಒಂದು ಹಿಡಿ ಉಪ್ಪನ್ನು ಕೈಯಲ್ಲಿ ಹಿಡಿದು, ಇನ್ನು ಮುಂದೆ ಯಾರು ಬೇಕಾದರೂ ಉಪ್ಪು ತಯಾರಿಸಬಹುದು. ಶಾಸನವನ್ನು ಮುರಿಯಲಾಗಿದೆ ಎಂದು ಘೋಷಿಸಿದರು, ಕೆಲವರು ಉಪ್ಪನ್ನು ಮಾರಲು ಪ್ರಯತ್ನಪಟ್ಟರು. ಆದರೆ ಅಧಿಕಾರಿಗಳು ಉಪ್ಪನ್ನು ಸ್ವಾದೀನಪಡಿಸಿಕೊಂಡರು. ಗಾಂಧೀಜಿಯವರು "ಕಳ್ಳನ ಕೈಯಿಂದ ಕಳ್ಳತನ ಮಾಡಿದ ಸಾಮಾನನ್ನೂ ಬಲವಂತವಾಗಿ ಕಿತ್ತುಕೊಳ್ಳುವುದಿಲ್ಲ, ದಸ್ತಗಿರಿ ಮಾಡಿದ ಮೇಲೆ ತಮ್ಮ ವಶಕ್ಕೆ ತೆಗೆದುಕೊಳ್ಳುತ್ತಾರೆ. ಇಲ್ಲಿ ಅಧಿಕಾರಿಗಳು ದಸ್ತಗಿರಿ ಮಾಡದೇ ಉಪ್ಪನ್ನು ಬಲವಂತವಾಗಿ ಕಿತ್ತು ಕೊಂಡಿದ್ದಾರೆ. ಇದು ತಪ್ಪು ಅಪರಾಧ" ಎಂದರು.

ಉತ್ಸಾಹದಿಂದ ಕೂಡಿದ ಸರೋಜಿನಿನಾಯ್ಡು "ವಿಮೋಚಕನಿಗೆ ಗೆಲುವಾಗಲಿ" ಎಂದು ಕೂಗಿದರು. ಅಲ್ಲಿ ನೆರೆದ ಜನರು ಜಯಘೋಷಿಸಿದರು.

ಕಾರ್ಯಕರ್ತರು ಏಪ್ರಿಲ್ 13ರ ವರೆಗೆ ಉಪ್ಪು ಕಾಯಿದೆ ಮಾಡಿ ನಂತರ ಗಾಂಧೀಜಿಯ ಆದೇಶದ ಮೇಲೆ ಖಾದಿ ಪ್ರಚಾರ, ವಿದೇಶೀ ವಸ್ತುಗಳ ನಿಷೇಧ, ವಿದೇಶೀ ಬಟ್ಟೆ ಬಹಿಷ್ಕಾರದ ಬಗ್ಗೆ ಪ್ರಚಾರ ಕಾರ್ಯದಲ್ಲಿ ತೊಡಗಿದರು.

ಇದು ದೇಶವು ದಾರಿ ಕಾಣುತ್ತಿದ್ದ ಸಂಕೇತವಾಯಿತು. ನಾಡಿನ ತುಂಬ ಹಳ್ಳಿಗಳಲ್ಲಿ ಮತ್ತು ಹೊಳೆಗಳಲ್ಲಿ ಹೆಂಗಸರು, ಗಂಡಸರು, ಯುವಕರು ತೆರಿಗೆ ಕೊಡದೆ ಉಪ್ಪನ್ನು ತಯಾರಿಸಿ ಮಾರ ತೊಡಗಿದರು.

ಮೇ 4ನೇ ತಾರೀಖು ಸರಕಾರ ಗಾಂಧೀಜಿಯವರನ್ನು ಸೆರೆ ಹಿಡಿದು ಪುಣೆಯ ಸಮೀಪದಲ್ಲಿನ ಯರವಾಡಾ ಕಾರಾಗೃಹಕ್ಕೆ ಕಳುಹಿಸಿತು.

ಗಾಂಧೀಜಿ "ಧಾರಾಸನ"ಕ್ಕೆ ಹೋಗಬೇಕಾಗಿತ್ತು. ಆಗ ಈ ಯೋಜನೆಯನ್ನು ಶ್ರೀಮತಿ ಸರೋಜಿನಿನಾಯ್ಡು ಕೈಗೊಂಡರು. ಅವರ ನೇತೃತ್ವದಲ್ಲಿ 2500 ಅಹಿಂಸಾಬದ್ಧ ಸ್ವಯಂ ಸೇವಕರು "ಧಾರಾಸನ" ಉಪ್ಪಿನ ಮಳಿಗೆಯನ್ನು ಮುತ್ತಿದರು. ಆದರೆ ಉಪ್ಪಿನ ದಂಡೆಗಳನ್ನು ತಂತಿ, ಬೇಲಿಯಿಂದ ಮತ್ತು ಕಂದಕಗಳಿಂದ ಸುತ್ತಿವರಿಸಿದ್ದರು. ಲಾಠಿಗಳನ್ನು ಹಿಡಿದ 400 ಜನ ಪೊಲೀಸರು ಮತ್ತು ಬಂದೂಕುಗಳೊಡನೆ 25 ಜನ ಅಲ್ಲಿಯೇ ಸಿದ್ಧವಾಗಿ ನಿಂತಿದ್ದರು.



ಈ ಬೇಲಿಯ ಆಚೆಗೆ ದೂರದಲ್ಲಿ ಸತ್ಯಾಗ್ರಹಿಗಳು ನಿಂತಿದ್ದರು. ಒಂದೊಂದೇ ತಂಡ ಕಂದಕ ಮತ್ತು ಮುಳ್ಳಿನ ತಂತಿಯ ಬೇಲಿಯತ್ತ ಮುಂದುವರಿಯಿತು. ಪೊಲೀಸರು ಮುಂದೆ ನುಗ್ಗಿ ಅವರ ತಲೆಯ ಮೇಲೆ ಉಕ್ಕಿನ ತುಂಡುಗಳಿಂದ, ಲಾಠಿಗಳಿಂದ ಹೊಡೆದರು. ಅವರಲ್ಲಿ ಒಬ್ಬರೂ ಕೂಡ ಆತ್ಮರಕ್ಷಣೆಗಾಗಿ ಕೈಯನ್ನು ಎತ್ತಲಿಲ್ಲ. ಅವರು ಅಲ್ಲಿಯೇ ಬಿದ್ದುಕೊಂಡು, ನೋವಿನಿಂದ ನರಳಿದರು. ತಲೆ ಬುರುಡೆಗಳು ಭುಜಗಳು ಒಡೆದು ಅವರ ಬಿಳಿಯ ಬಟ್ಟೆಗಳು ರಕ್ತದಿಂದ ಕೆಂಪಾದವು.

ಆದರೆ ಭಯ ಪಡಲಿಲ್ಲ. ಒಂದು ವಿಫಲವಾದರೆ ಮತ್ತೊಂದು ದಂಡಿಯಾತ್ರಿಕರು ಹೊಡೆತ ಬೀಳಿವವರೆಗೆ ಮುಂದುವರೆದರು. ಸರಕಾರದ ಈ ಕಾಡು ನಡತೆಗೆ ಇಡೀ ದೇಶವೇ ವಿರುದ್ಧ ನಿಂತಿತು. ಸತ್ಯಾಗ್ರಹಿಗಳನ್ನು ಶ್ಲಾಘಿಸಿದರು, ಗೌರವಿಸಿದರು. ದೇಶದಾದ್ಯಂತ ಸತ್ಯಾಗ್ರಹ ಪ್ರಾರಂಭವಾಯಿತು. ಆದರೆ ಶಾಂತಿಯುತವಾಗಿತ್ತು. ಎಲ್ಲ ಕಡೆ ದೇಶಭಕ್ತಿ ಗೀತೆಗಳನ್ನು ಹಾಡತೊಡಗಿದರು. ಎಲ್ಲರ ಮನೆಯಲ್ಲಿ ನೂಲಲು ಪ್ರಾರಂಭಿಸಿದರು.

ಬ್ರಿಟಿಷರ ಆಳ್ವಿಕೆಯು ಭಾರತೀಯರ ಶಾಂತಿ ಚಳುವಳಿಯನ್ನು ತಡೆಯಲು ಅಸಾಧ್ಯವಾಯಿತು. ಏನಾದರು ಒಪ್ಪಂದ ಮಾಡಿಕೊಳ್ಳಬೇಕೆಂದು ಲಾರ್ಡ್ ಇರ್ವಿನ್ ಗಾಂಧೀಜಿಯವರೊಡನೆ ಮಾತನಾಡಲು ಬಯಸಿ ಜನವರಿ 26ರಂದು ಗಾಂಧೀಜಿ ಸೇರಿ ಎಲ್ಲಾ ನಾಯಕರನ್ನು ಯಾವ ಶರತ್ತು ಇಲ್ಲದೆ ಬಿಡುಗಡೆ ಮಾಡಿದರು. ಫೆಬ್ರವರಿ 17ರಂದು ಪ್ರಾರಂಭವಾದ ಮಾತುಕತೆಗಳಿಗೆ ಒಂದು ಅಂಕಿತ ದೊರೆಯಿತು. ಗಾಂಧೀಜಿಯವರು ಆಂದೋಲನವನ್ನು ನಿಲ್ಲಿಸಬೇಕೆಂದು ನಿರ್ಧರಿಸಿದರು.

ಉಪ್ಪಿನ ಸತ್ಯಾಗ್ರಹದ ಸ್ವರೂಪವನ್ನು ಪಂಡಿತ್ ಜವಹರಾಲಾಲ್ ನೆಹರೂ ಹೀಗೆ ಬಣ್ಣಿಸಿದ್ದಾರೆ. "ದಂಡಿಯಾತ್ರೆಯ ಸಂದರ್ಭದಲ್ಲಿ ಅವರನ್ನು ಸಂದರ್ಶಿಸಲು ಹೋಗಿದ್ದೆವು. ಆಗ ತಮ್ಮ ತುಕಡಿಂಯೊಂದಿಗೆ ಜಂಬೂಸರ್ ಎಂಬಲ್ಲಿ ಬೀಡುಬಿಟ್ಟಿದ್ದರು. ಅಲ್ಲಿ ಕೆಲ ಗಂಟೆಗಳ ಕಾಲ ಅವರೊಡನೆ ಇದ್ದೆವು. ಅನಂತರ ಅವರು ತಮ್ಮ ಸೈನ್ಯ ಹಾಗೂ ಸಿಬ್ಬಂದಿಯೊಂದಿಗೆ ಉಪ್ಪಿನ ಸಮುದ್ರದ ಕಡೆ ಯಾತ್ರೆಯಲ್ಲಿ ಮುಂದಿನ ಊರಿಗೆ ಪ್ರಯಾಣ ಬೆಳೆಸಿದರು. ಆದೃಶ್ಯ ನನಗೆ ಆಶ್ಚರ್ಯ ಉಂಟುಮಾಡಿತು. ಕೈಯಲ್ಲಿ ಒಂದು ಲಾಠಿ, ಎಲ್ಲರೆದುರಿನಲ್ಲಿ ಏಕಾಕಿಯಾಗಿ ಹಿಂಬಾಲಕರಿಗೆ ಮಾರ್ಗದರ್ಶನ ಮಾಡುತ್ತಾ ದಿಟ್ಟ ಹೆಜ್ಜೆಯನ್ನಿಟ್ಟು ನಡೆದಿದ್ದರು. ನೆಟ್ಟ ದೃಷ್ಟಿ, ಪ್ರಶಾಂತ ಹಾಗೂ ಗಂಭೀರ ಮುಖಮುದ್ರೆ, ನಿಜಕ್ಕೂ ಆ ದೃಶ್ಯ ಅಚ್ಚೊತ್ತಿ ನಿಂತಿದೆ ಮನಸ್ಸಿನಲ್ಲಿ. ಅತ್ಯಂತ ಪ್ರಭಾವಶಾಲಿಯಾಗಿತ್ತು. ಎದೆ ನಡುಗಿಸುವಂತಿತ್ತು.

ಗಾಂಧೀಜಿಯುವರು ಉಪ್ಪಿನ ಸತ್ಯಾಗ್ರಹ ನಡೆಸಿದ್ದರಿಂದ ದೇಶದ ಸ್ವಾತಂತ್ರ್ಯಕ್ಕೆ ಇದು ದಾರಿದೀಪವಾಯಿತು. ಗಾಂಧೀಜಿಯ ಸತ್ಯ ಅಹಿಂಸೆಗಳಿಗೆ ವಿಜಯವಾಯಿತು. ಈ ಯಾತ್ರೆಯು ನೇರವಾಗಿ ದಂಡಿಯನ್ನು ತಲುಪುವುದಕ್ಕೆ ಮಾತ್ರ ಸೀಮಿತವಲ್ಲ. ಇದು ಪೂರ್ಣ ಸ್ವರಾಜ್ಯ ದೇಶಕ್ಕೆ ಸಿಗುವವರೆಗೂ ಮುಂದುವರಿಯುವ ಯಾತ್ರೆಯಾಗಿತ್ತು. ಗಾಂಧೀಜಿ ಕರೆಗೆ ಓಗೊಟ್ಟು ಕೆಲವರು ಸರ್ಕಾರಿ ಕೆಲಸಕ್ಕೆ ರಾಜೀನಾಮೆ ನೀಡಿ ಈ ಯಾತ್ರೆಯಲ್ಲಿ ಸೇರಿದರು. ಈ ಚಳುವಳಿ ಬ್ರಿಟಿಷ್ ಸರ್ಕಾರಕ್ಕೆ ಎಸೆದ ಸವಾಲಾಗಿತ್ತು. ❑





# ಪ್ರಜಾಪ್ರಭುತ್ವ ಮತ್ತು ಪ್ರಜಾಪ್ರತಿನಿಧಿಗಳ ಹೊಣೆಗಾರಿಕೆ ಹಾಗೂ ಮೂಲ ಕರ್ತವ್ಯಗಳು

- ಡಾ॥ ಚಂಬಿಪುರಾಣಿಕ್

**ಭಾ**ರತದ ಇಂದಿನ ಅಭಿವೃದ್ಧಿ ಪಥದ ಹೊಸ ಸವಾಲುಗಳನ್ನು ಎದುರಿಸುವಲ್ಲಿ ನಮ್ಮ 'ಸಂವಿಧಾನ' ಮತ್ತು 'ಜನತೆಯ ಆಶೋತ್ತರಗಳು' ನಮಗಿರುವ ಮುಖ್ಯವಾದ ಮಾರ್ಗ ಸೂಚಿಗಳಾಗಿರುತ್ತವೆ. ಕಾಲಕಾಲಕ್ಕೆ ಇವುಗಳ ಆಧಾರದ ಮೇಲೆ ನಮ್ಮ ರಾಷ್ಟ್ರದ ಪ್ರಗತಿ ಮತ್ತು ಉದ್ದೇಶಿತ ಗುರಿಗಳನ್ನು ಈಡೇರಿಸುವಲ್ಲಿ, ಈ ಹಿನ್ನಲೆಯಲ್ಲಿ ನಮಗೆ ನಾವೇ ನಮ್ಮನ್ನು ಮತ್ತು ನಮ್ಮ ರಾಜಕೀಯ ವ್ಯವಸ್ಥೆಯ ಕಾರ್ಯಾಚರಣೆಯನ್ನು ವಿಮರ್ಶೆ ಮಾಡಬೇಕಾಗುತ್ತದೆ.

ಆದರೆ ಭಾರತದ ಸಂವಿಧಾನದ ಉದ್ದೇಶಿತ 'ಕಲ್ಯಾಣ ರಾಜ್ಯ' (Welfare State)ವನ್ನು ಸ್ಥಾಪಿಸುವಲ್ಲಿ ಕಳೆದ 64 ವರ್ಷಗಳಲ್ಲಿ ನಾವು ಒಟ್ಟಾರೆ ಸಾಧಿಸಿರುವ ಪ್ರಗತಿ ಇಂದು ಎಲ್ಲ ವರ್ಗಗಳ ಜನತೆಗೆ ತಲುಪಿಲ್ಲ ಎಂಬುದಕ್ಕೆ ವಿಶೇಷ ಸಂಶೋಧನೆ ಮತ್ತು ಸಾಕ್ಷ್ಯಗಳ ಅಗತ್ಯವಿರುವುದಿಲ್ಲ. ಇದು ವಿಷಾದನೀಯ ಎಂದು ಸಹ ಒತ್ತಿ ಹೇಳಬೇಕಾಗಿದೆ.

ನಮ್ಮ ಸುತ್ತಮುತ್ತ ನಡೆಯುತ್ತಿರುವ ವಿದ್ಯಮಾನಗಳನ್ನು ದಿನನಿತ್ಯ ಗಮನಿಸಿದಲ್ಲಿ, ಹಿಂದಿಗಿಂತ ಇಂದು ಪ್ರಜಾಪ್ರಭುತ್ವವನ್ನು ಶಿಥಿಲಗೊಳಿಸುತ್ತಿರುವ ಪ್ರಸಂಗಗಳೇ ಹೆಚ್ಚಾಗಿವೆ. ಪ್ರತಿದಿನ ಮಾಧ್ಯಮಗಳ ಮೂಲಕ ಹೊರಬರುತ್ತಿರುವ ಸುದ್ದಿ ಸಮಾಚಾರಗಳ ಮತ್ತು ಮಾಹಿತಿಗಳನ್ನು ಗಮನಿಸಿದರೆ, ಒಂದು ರೀತಿಯ 'ಸಿನಿಕತನ' ಉಂಟಾಗುತ್ತದೆ. ಇಂತಹ ವಿರೋಧಾಭಾಸಗಳಿಗೆ ಮತ್ತು ಮಾರಕ ಬೆಳವಣಿಗೆಗಳಿಗೆ ಕೊನೆ ಎಂದು? ನಮ್ಮ ಅಧಿಕಾರಯುತ ಜನಪ್ರತಿನಿಧಿಗಳು. ಸರ್ಕಾರ ಮತ್ತು ಆಡಳಿತಗಾರರು ಇನ್ನೂ ಏಕೆ ಸುಮ್ಮನಿದ್ದಾರೆ? ಇವರೇ ಅಸಹಾಯಕರಾದರೆ ಇನ್ನು ಬೆಕ್ಕಿಗೆ ಗಂಟೆ ಕಟ್ಟುವವರು ಯಾರು ಎಂಬ ಸಂಶಯ ಮತ್ತು ವೇದನೆ ಒಟ್ಟಿಗೆ ಆಗುತ್ತಿದೆ. ಇದು ನಿಜಕ್ಕೂ ಅಪಾಯಕಾರಿ ಬೆಳವಣಿಗೆ ಎನ್ನಬಹುದು!

ವಾಸ್ತವದಲ್ಲಿ, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ತಮ್ಮ ನಿಜವಾದ ಕರ್ತವ್ಯಗಳಲ್ಲಿ ದೂರ ಸರಿದು ಜನತೆಯ ಆಶೋತ್ತರಗಳನ್ನು ಈಡೇರಿಸುವಲ್ಲಿ ವಿಫಲವಾಗಿ. ಯಾವುದೋ 'ತುರ್ತು' ಪರಿಹಾರ ಅಥವಾ ಬದಲಾವಣೆ ಆಗುತ್ತದೆ ಎಂದು ಭಾವಿಸಿರುವುದು ಗೋಚರವಾಗುತ್ತಿದೆ. ಒಂದು ವೇಳೆ ಒಳ್ಳೆಯ ಅಭಿವೃದ್ಧಿ ಆಗಿದ್ದಲ್ಲಿ, ಇಂದು ನಮ್ಮ ದೇಶದಲ್ಲಿ ಭ್ರಷ್ಟಾಚಾರ ಅಧಿಕಾರಶಾಹಿಯ ನಿರಂಕುಶ ಹಿಡಿತದಿಂದಾಗಿ ಮಿತಿಮೀರಿ ಬೆಳೆದು ನಿಂತಿದೆ. ಜನಪ್ರತಿನಿಧಿಗಳು ಜನತೆಯ ಭಾವನೆಗಳಿಂದ ದೂರವೆನ್ನಬಹುದು!! ಏಕೆಂದರೆ, ಇವುಗಳಿಂದ ನಮ್ಮ ಪ್ರಜಾಸತ್ತೆಯ ಬೇರುಗಳೇ ಅಲುಗಡಲಾರಂಭಿಸಿವೆ.

ದೇಶದಲ್ಲಿ ಇಂದು ಪಾರದರ್ಶಕತೆ ಮತ್ತು ಪ್ರಾಮಾಣಿಕತೆಗಳು ಪರಕೀಯ ಭಾವನೆಗಳಾಗಿವೆಯೇ ಎಂದು ಭಾಸವಾಗುತ್ತಿದೆ. ಇವುಗಳ ವಿರುದ್ಧ ಜನತೆಯು ತಮ್ಮ ಸಹನೆಯನ್ನು ಕಳೆದುಕೊಂಡು ಹತಾಶ ಮನೋಭಾವದಿಂದ ಪ್ರತಿದಿನವೂ ನೊಂದು ನಾನಾರೀತಿಯ ಪ್ರತಿಭಟನೆಗಳಿಗೆ ಮಾರುಹೋಗುತ್ತಿದ್ದಾರೆ. ಇದಕ್ಕೆ ಮೂಲ ಎನ್ನುವಂತೆ ಎರಡು ಮುಖ್ಯ ಅಂಶಗಳನ್ನು ವಿಶೇಷವಾಗಿ ಇಲ್ಲಿ ಚಿಂತನೆಗೆ ಒರೆಹಚ್ಚಬೇಕಾಗಿದೆ. ಒಂದು, ಆರ್ಥಿಕ ಪ್ರಜಾಪ್ರಭುತ್ವದ ಒತ್ತಡಗಳು ಸದ್ಯದ ರಾಜಕೀಯ ಪ್ರಜಾಪ್ರಭುತ್ವಕ್ಕೆ ಸವಾಲಿನಂತೆ ಕಂಡು ಬರುತ್ತಿವೆ. ಇನ್ನೊಂದು, ನಮ್ಮ ರಾಷ್ಟ್ರದ ಆರ್ಥಿಕ ಪ್ರಜಾಪ್ರಭುತ್ವಕ್ಕೆ ಸವಾಲಿನಂತೆ ಕಂಡು ಬರುತ್ತಿವೆ. ಇನ್ನೊಂದು, ನಮ್ಮ ರಾಷ್ಟ್ರದ ಆರ್ಥಿಕ ಪ್ರಗತಿಯ ಫಲಗಳು ಎಲ್ಲ ಜನರಿಗೆ ತಲುಪುತ್ತಿಲ್ಲ ಎಂಬ ಕಳಕಳಿಯ ಅನುಭವ ಎದ್ದು ಕಾಣುತ್ತಿದೆ.

ಇಂತಹ ಮಿತಿಮೀರಿದ ವಿಷಮ ಹಾಗೂ ಅಭದ್ರ ರಾಜಕೀಯ ಆರ್ಥಿಕ ಸ್ಥಿತಿಯಲ್ಲಿ, ನಮ್ಮ ಸಂಸದೀಯ ಪ್ರಜಾಪ್ರಭುತ್ವ (Parliamentary Democracy) ತನ್ನ ಜವಾಬ್ದಾರಿಯುತ ಪಾತ್ರವನ್ನು ಹೇಗೆ ನಿರ್ವಹಿಸಿದೆ ಮತ್ತು ಒಂದು ವೇಳೆ ಅದು ವಿಫಲವಾಗಿದೆ ಎಂದು ಕಂಡುಬಂದಲ್ಲಿ ಅದರ ಮುಂದಿನ ಪರಿಹಾರೋಪಾಯದ ಪ್ರಯತ್ನಗಳೇನು ಎಂದೂ ಸಹ ಆಲೋಚಿಸಬೇಕಾಗಿದೆ. ಪ್ರಸ್ತುತ ಲೇಖನದಲ್ಲಿ, ಕೆಲವು ಪ್ರಮುಖ ವಿಚಾರಗಳನ್ನು



'ಶಾಸಕರು' ಮತ್ತು 'ಶಾಸಕಾಂಗ ಎಂಬವುಗಳಿಗೆ ಮಾತ್ರ ಸೀಮಿತ ರೀತಿಯಲ್ಲಿ ವಿಮರ್ಶೆಗೆ ಪ್ರಯತ್ನಿಸಬೇಕಾಗಿದೆ. ಇದರಲ್ಲಿ ಒಂದುಮೂಲ ಉದ್ದೇಶವೂ ಸಹ ಇದೆ. ನಮ್ಮ ನಡುವಿನ ಗೊಂದಲಗಳು ಮತ್ತು ಗಂಡಾಂತರಕಾರಿ ಆರ್ಥಿಕ ಹಾಗೂ ರಾಜಕೀಯ ಸಮಸ್ಯೆಗಳನ್ನು ಅರಿತು, ಅವುಗಳನ್ನು ಪರಿಪಾಠ ಅಥವಾ ಸುಧಾರಣೆಗಳತ್ತ ಗಮನಹರಿಸುವಂತೆ ಮಾಡುವುದು ಅನಿವಾರ್ಯ ಎಂದೆನಿಸುತ್ತದೆ. ಇಂತಹ ಪ್ರಯತ್ನಗಳಿಗೆ 'ರಾಜಕೀಯ ಇಚ್ಛಾಶಕ್ತಿ' (Political Will) ಅತಿ ಪ್ರಾಮುಖ್ಯವಾದ 'ಅಸ್ತ್ರ' ಎಂದು ನೇರವಾಗಿ ಹೇಳಬಹುದು. ಈ ಶಕ್ತಿಯನ್ನು ಪ್ರಜಾಪ್ರಭುತ್ವದ ವಿವಿಧ ಚುನಾವಣೆಗಳ ಮೂಲಕ ಜನತೆಯ ಪ್ರಜಾಪ್ರತಿನಿಧಿಗಳಿಗೆ ಸಂವಿಧಾನದತ್ತವಾಗಿ ನೀಡಿರುತ್ತದೆ. ಆದುದರಿಂದ ಈ ಶಾಸಕಾಂಗ ವ್ಯವಸ್ಥೆಯ ಪರಿಧಿಯಲ್ಲಿ ಮಾತ್ರ ತೀವ್ರ ಸುಧಾರಣೆಗಳನ್ನು ಮತ್ತು ಗುಣಾತ್ಮಕ ಬದಲಾವಣೆಗಳನ್ನು ತರಲು ಸಾಧ್ಯವಿದೆ.

ಹಾದಿ ಬೀದಿಗಳಲ್ಲಿ ಜನಾಭಿಪ್ರಾಯ ಸಾಮೂಹಿಕವಾಗಿ ಕ್ರೋಢೀಕರಿಸಲ್ಪಟ್ಟರೂ ಮತ್ತು ಒತ್ತಡಗಳ ಮೂಲಕ ಸುಧಾರಣೆಗಳನ್ನು ತರಬೇಕೆಂಬುದು ಪ್ರಜಾಪ್ರಭುತ್ವದಲ್ಲಿ ಅನಿವಾರ್ಯವೆಂದೆನಿಸಿದರೂ. ಅದನ್ನು ಶಾಸನಗಳನ್ನು ರಚಿಸುವ ಮೂಲಕ ತರಬೇಕಾಗಿದೆ. ಇದನ್ನು ಬಿಟ್ಟು ಬೇರಾವ ಮಾರ್ಗ ಸಂವಿಧಾನಾತ್ಮಕವೆನಿಸುವುದಿಲ್ಲ. ಅಂತೆಯೇ ಸೂಕ್ತ ತಿದ್ದುಪಡಿಗಳನ್ನು ಮತ್ತು ಪಾರದರ್ಶಕವೆನಿಸುವ ಸಂಸ್ಥೆಗಳ ಸ್ಥಾಪನೆಯನ್ನು (ಉದಾ: ಲೋಕಪಾಲ ಸಂಸ್ಥೆ ಇತ್ಯಾದಿ) ಮಾಡಬೇಕಾದಲ್ಲಿ ಜನಾಭಿಪ್ರಾಯಕ್ಕೆ ಬೆಲೆಕೊಡುವುದು ಅನಿವಾರ್ಯ ಆದರೆ, ಇಂತಹ 'ತುರ್ತು' ಅಥವಾ ಇಡೀ ಜನಸಮೂಹವು ಇದು ಕೂಡಲೇ ನೆರವೇರಬೇಕೆಂಬ ಸನ್ನಿವೇಶಕ್ಕೆ ಕಾರಣಗಳೇನಿರಬಹುದು? ಎಂಬ ಪ್ರಶ್ನೆ ನಮ್ಮೆದುರು ಇಂದು ದೊಡ್ಡದಾಗಿ ಕಾಣಿಸಿಕೊಳ್ಳುತ್ತದೆ. ಅಂದರೆ, ಇಂತಹ ಸುಧಾರಣೆಗಳನ್ನು ಕಳೆದ 25-30 ವರ್ಷಗಳಿಂದ ನಮ್ಮ ಶಾಸಕಾಂಗ ವ್ಯವಸ್ಥೆಯಲ್ಲಿ ಆಗಾಗ್ಗೆ ಚರ್ಚಿಸಿ ಕರಡುಗಳನ್ನು ಶಾಸನಗಳ ರೂಪದಲ್ಲಿ ಮಂಡಿಸಿ ಅವುಗಳನ್ನು ತರುವಲ್ಲಿ ಆಯಾ ಕಾಲದ ಸರ್ಕಾರಗಳು ಮತ್ತು ಶಾಸಕಾಂಗವು ತನ್ನ ಹೊಣೆಗಾರಿಕೆಯನ್ನು ಪ್ರಾಮಾಣಿಕವಾಗಿ ನಿರ್ವಹಿಸಿಲ್ಲ ಎಂಬುದು ಅಂಗೈಗೆ ಕನ್ನಡಿ ಹಿಡಿದಂತಾಗಿದೆ. ಆದುದರಿಂದ ಈಗ ಜನಾಭಿಪ್ರಾಯವನ್ನು ಮೂಡಿಸಲು ಮತ್ತು ಶಾಸಕಾಂಗದ ಮೇಲೆ ಒತ್ತಡ ಹೇರಲು ಸರ್ಕಾರೇತರ ಹಾಗೂ ಜನಪರ ಸಂಘಟನೆಗಳು ಆಂದೋಲನಗಳನ್ನು ನಡೆಸಿರುತ್ತಾರೆ. ಇಂತಹ ಸನ್ನಿವೇಶದಲ್ಲಿ ಶಾಸಕಾಂಗ ಮತ್ತು ಸರ್ಕಾರಗಳು ಜನತೆಯನ್ನು ಸಮರ್ಪಕವಾಗಿ ಮತ್ತು ಪಾರದರ್ಶಕವಾಗಿ ನಡೆಸುವಲ್ಲಿ ಎಡವಿರುವುದನ್ನು ನಾವು ಕಾಣುತ್ತಿದ್ದೇವೆ. ಈ ತರಾತುರಿಯಲ್ಲಿ ಇರುವ ಶಾಸನಗಳ ತಿದ್ದುಪಡಿ ಅಥವಾ ಹೊಸ ಸಂಸ್ಥೆಯ ಸ್ಥಾಪನೆಯ ಬಗ್ಗೆ ಕ್ರಮ ಕೈಗೊಳ್ಳುವುದು ಅನಿವಾರ್ಯವೆನಿಸಿದೆ. ಇಂತಹ ಸಂದಿಗ್ಧ ಸನ್ನಿವೇಶ ನಿರ್ಮಾಣವಾಗಿರುವಾಗ ಶಾಸಕಾಂಗ ತನ್ನ ಕರ್ತವ್ಯಗಳನ್ನು ಆದ್ಯತೆಯ ಆಧಾರದ ಮೇಲೆ ಮಾಡದೆ ರಸ್ತೆ ರಾಜಕೀಯ ಮತ್ತು ಕೆಲವು ಶ್ರೇಷ್ಠ ಹಾಗೂ ಪ್ರಾಮಾಣಿಕ ಸಾಮಾಜಿಕ ನೇತಾರರ ಮೂಲಕ ಒತ್ತಾಯ ಪೂರ್ವಕವಾಗಿ ಕೈಗೊಳ್ಳುವಂತಾಗಿದೆ. ಆದರೆ ಒಂದು ವಾಸ್ತವ ಸಂಗತಿ ಮತ್ತು ಸಂವಿಧಾನಾತ್ಮಕ ಕ್ರಮವನ್ನು ನಾವು ಕಡೆಗಾಣಿಸಬಾರದು. ಅದೆಂದರೆ ನ್ಯಾಯಬದ್ಧ ಮತ್ತು ಪಾರದರ್ಶಕವಾದ ಶಾಸನಗಳನ್ನು ರಚಿಸಿ ಹೊಸ ವ್ಯವಸ್ಥೆಯನ್ನು ತರುವುದನ್ನು ಶಾಸಕಾಂಗ ತನ್ನ ಕರ್ತವ್ಯವೆಂದು ನಿಭಾಯಿಸಬೇಕಾಗಿ ಬಂದಿದೆ. ಇದಲ್ಲದೆ ಬೇರಾವ ಮಾರ್ಗದಿಂದ ಸುಧಾರಣೆಯನ್ನು ತರಲು ಸಾಧ್ಯವಿಲ್ಲ. ಪುನಃ ಇಂತಹ ಬೃಹತ್ ಸುಧಾರಣೆ ಆಗಬೇಕದರೆ, ನಮ್ಮ ಸಂವಿಧಾನವೇ ನಮಗೆ ಮೂಲ ಆಧಾರ ಉಳಿದ ಇತರೆ ಮಾರ್ಗಗಳೆಲ್ಲಾ ಜನಾಭಿಪ್ರಾಯನ್ನು ರೂಪಿಸುವ ಹಾಗೂ ಪ್ರತಿಬಿಂಬಿಸುವ ಸಾಧನಗಳು ಮಾತ್ರ.

### ಸಂವಿಧಾನದಲ್ಲಿನ ಆಶೋತ್ತರಗಳು

ಭಾರತದ ಸಂವಿಧಾನವು, ರಾಷ್ಟ್ರದ ಸ್ಥಾಪನೆಗಾಗಿ ಹೋರಾಡಿದ ಸ್ವಾತಂತ್ರ್ಯ ಸಂಗ್ರಾಮದ ಆದರ್ಶಗಳನ್ನು ಮತ್ತು ಹೊಸ ಮಹತ್ವಾಕಾಂಕ್ಷೆಗಳನ್ನು ಪ್ರತಿನಿಧಿಸುವ ಪವಿತ್ರ ದಾಖಲೆ. ಸ್ವತಂತ್ರರಾದ ಜನತೆಯ ಆಶೋತ್ತರಗಳನ್ನು ಹೇಗೆ ಜಾರಿಗೊಳಿಸುವುದು ಎಂಬುದನ್ನು ಅಧಿಕಾರಯುತವಾಗಿ ತಿಳಿಸುವ ವಿಧಿವಿಧಾನಗಳ ಸುದೀರ್ಘ ಮಾರ್ಗದರ್ಶಿಯಾಗಿರುತ್ತದೆ. ಆದುದರಿಂದ, ಸಂವಿಧಾನವು ಒಂದು ರಾಷ್ಟ್ರದ ಪ್ರಭುತ್ವದ



ಆತ್ಮ ಚರಿತ್ರೆಯನ್ನು ಅಥವಾ ಅಧಿಕಾರವನ್ನು ಹಂಚಿ ನಿಯಂತ್ರಿಸುವ ವ್ಯವಸ್ಥೆಯ ಸ್ವರೂಪ ಎಂದು ಸಂವಿಧಾನದ ಚಿಂತಕ ಕೆ. ಸಿ. ವೀರ್ ಎಂಬುವರು ವ್ಯಾಖ್ಯಾನಿಸುತ್ತಾರೆ.

ಇಂತಹ ಸಂವಿಧಾನವು ನವ ರಾಷ್ಟ್ರ ನಿರ್ಮಾಣದ ಭದ್ರ ಬುನಾದಿ ಮತ್ತು ವಿವರಗಳ ಸ್ಪಷ್ಟ ಕೈಪಿಡಿ. ಇದರ ಆಧಾರದ ಮೆಲೆ ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗಳು ನಮ್ಮ ವೈವಿಧ್ಯಮಯ ಭಾರತದ ಸಂವಿಧಾನಾಧಾರಿತ ಪ್ರಜಾಪ್ರತಿನಿಧಿ ಸರ್ಕಾರವನ್ನು ನಮಗೆ ನಾವೇ ಕೊಡುಗೆಯಾಗಿ ಕೊಟ್ಟಿರುತ್ತೇವೆ. ಅಂದರೆ, ಇಂತಹ ಪ್ರಜಾಪ್ರತಿನಿಧಿ ಸರ್ಕಾರವನ್ನು (Respective Government) ಇಂದಿನ ಪರಿಸ್ಥಿತಿಯಲ್ಲಿ ನಾವು ಒರೆಹಚ್ಚಿ ಅದನ್ನು ವಿಮರ್ಶಿಸುವುದು ಸೂಕ್ತವೆನಿಸುತ್ತದೆ. ಭಾರತವು ಒಂದು ಸಂಕೀರ್ಣವಾದ ಹಾಗೂ ವಿಶೇಷವಾದ ಅರೆ-ಒಕ್ಕೂಟ ವ್ಯವಸ್ಥೆ ಎಂದು ಗುರುತಿಸಲಾಗಿದೆ. ಏಕೆಂದರೆ ಇಲ್ಲಿ ಕೇಂದ್ರ ಪ್ರಧಾನಿತ ರಾಜ್ಯ ಸರ್ಕಾರಗಳ ಪರಸ್ಪರ ಸಹಕಾರದ ಮತ್ತು ಕೇಂದ್ರ ಸರ್ಕಾರದ ಮೇಲುಸ್ತುವಾರಿಯ ವ್ಯವಸ್ಥೆಯಾಗಿದೆ. ಇದೆಲ್ಲವನ್ನು ನಮ್ಮ ಸಂವಿಧಾನ ಸ್ಪಷ್ಟವಾಗಿ ತಿಳಿಸುತ್ತದೆ. ಈ ವ್ಯವಸ್ಥೆಯನ್ನು ನಾವು ಇಂದು ಹೇಗೆ ವಿಮರ್ಶಿಸುವುದು ಎಂಬುದನ್ನು ನಾವು 'ಶಾಸಕಾಂಗ'ದ ಕರ್ತವ್ಯಗಳನ್ನು ವಿಶೇಷವಾಗಿ ಪರಿಗಣಿಸಿ ಪರಿಶೀಲಿಸುವುದು ಅಗತ್ಯವೆನಿಸುತ್ತದೆ. ಅಂದರೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಯಾವ ರೀತಿಯಲ್ಲಿ ತಮ್ಮ ವ್ಯಾಪ್ತಿಯ ಹೊಣೆಗಾರಿಕೆ ಮತ್ತು ಕರ್ತವ್ಯಗಳನ್ನು ಇದುವರೆವಿಗೂ ನಿರ್ವಹಿಸಿವೆ ಎಂಬುದನ್ನು ಸಂಕ್ಷಿಪ್ತವಾಗಿ ಪರೀಶೀಲಿಸಬಹುದಾಗಿದೆ. ಮುಂದೆ ಅವುಗಳು ತಮ್ಮ ಈ ಸಂವಿಧಾನಾಧಾರಿತ ಅಧಿಕಾರಗಳನ್ನು ಹೇಗೆ ಬಳಸಬಹುದು ಎಂಬುದನ್ನು ಸಹ ಸೂಚಿಸುವುದು ಸಮಂಜಸವೆನಿಸುತ್ತದೆ. ಇದರೊಂದಿಗೆ, ನಮ್ಮ ಈ ಪ್ರಗತಿಪರವಾಗಬೇಕಾಗಿದ್ದ ಸಂಕೀರ್ಣ ರಾಜಕೀಯ ಪ್ರಯೋಗಗಳನ್ನು ನಮ್ಮ ಪ್ರಜಾಪ್ರತಿನಿಧಿಗಳು ಯಾವ ರೀತಿಯಲ್ಲಿ ಯಶಸ್ಸುಗಳಿಸುವಲ್ಲಿ ಅಥವಾ ಮಂದಗತಿಯಲ್ಲಿ ಸಾಗುವುದಕ್ಕೆ ಕಾರಣರಾಗಿದ್ದಾರೆ ಎಂಬುದನ್ನೂ ಸಹ ವಿಶೇಷ ದೃಷ್ಟಿಯಿಂದ ವಿಮರ್ಶಿಸ ಬೇಕಾಗಿದೆ.

## ಪ್ರಸಾವನೆ : (Preamble)

ನಮ್ಮ ಸಂವಿಧಾನದ ಒಟ್ಟಾರೆ ಸಾರಾಂಶ ಅಥವಾ ಮೂಲ ಆಶಯ ಗಳನ್ನು ಅದರ 'ಪ್ರಸ್ತಾವನೆ'ಯಲ್ಲಿ ಮುಂದೆ ತಿಳಿಸುವಂತೆ ಪ್ರಸ್ತುತಪಡಿಸಲಾಗಿದೆ:

"ಭಾರತೀಯ ಜನತೆಯಾದ ನಾವು ಒಗ್ಗಟ್ಟಾಗಿ ಮತ್ತು ನಮ್ಮಲ್ಲಿರುವ ವಿವಿಧತೆಗಳ ನಡುವೆಯೂ ಒಂದಾಗಿ ಬಾಳುವ ಸಂಕಲ್ಪವನ್ನು ಮಾಡುತ್ತೇವೆ. ಈ ರಾಷ್ಟ್ರದ ಪ್ರಜೆಗಳಾದ ನಾವು ನಮ್ಮ ಭಾರತವನ್ನು ಒಂದು ಸಾರ್ವಭೌಮ, ಧರ್ಮಾತೀತ ಪ್ರಜಾಪ್ರಭುತ್ವಾಧಾರಿತ ಗಣತಂತ್ರವನ್ನಾಗಿ ಸ್ಥಾಪಿಸಿ, ನಮ್ಮೆಲ್ಲ ಜನತೆಗೆ ನ್ಯಾಯ, ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವವನ್ನು ಸದಾ ಕಾಪಾಡುತ್ತೇವೆ ಎಂದು ಪ್ರಮಾಣೀಕರಿಸಿ. ಇದನ್ನು ನಮಗೆ ನಾವೇ ಗಣರಾಜ್ಯ (Republic) ಎಂಬುದರಡಿ ಅರ್ಪಿಸಿಕೊಂಡಿರುತ್ತೇವೆ. ಇದೇ ನಮ್ಮ ರಾಷ್ಟ್ರದ ಪ್ರಭುತ್ವಾಧಿಕಾರದ ಆತ್ಮ ಅಥವಾ ಚಲನಶಕ್ತಿ ಇದ್ದಂತೆ ಎಂದು ಭಾವಿಸುವುದಾಗಿದೆ. ಈ ಪ್ರಸ್ತಾವನೆ ನ್ಯಾಯಾಂಗದ ವಿಮರ್ಶೆಯ ಪರಿಧಿಗೆ ಅಥವಾ ಸಂವಿಧಾನ ವಿಧಿಗಳ ಭಾಗವಲ್ಲದಿದ್ದರೂ, ಇದೇ ಸರ್ಕಾರದ ಸ್ವರೂಪ, ಕಾರ್ಯಚರಣೆ ಹಾಗೂ ಸತ್ವವನ್ನು ಪಕ್ಷಿ ನೋಟವೆನ್ನುವಂತೆ ತಿಳಿಯಪಡಿಸುತ್ತದೆ.

## ಅಧಿಕಾರಗಳ ವಿಭಜನೆ

ನಮ್ಮ ಸಂವಿಧಾನದಲ್ಲಿ ವಿವಿಧ ವಿಧಿಗಳು ಅಥವಾ ನ್ಯಾಯ ನಿಯಮಗಳ ಮೂಲಕ ಇಡೀ ರಾಷ್ಟ್ರದ ಅಧಿಕಾರವನ್ನು ಹೇಗೆ ವಿಭಜಿಸಲಾಗಿದೆ ಮತ್ತು ನಮ್ಮ ಪ್ರಜಾಪ್ರಭುತ್ವವನ್ನು ಆರಂಭದ ಪ್ರಸ್ತಾವನೆಯಲ್ಲಿ ಉಲ್ಲೇಖಿಸಿರುವ ಎಲ್ಲ ಆಶಯಗಳನ್ನು ಪಾಲಿಸಲೆಂದೇ ಪ್ರಭುತ್ವದ ಅಧಿಕಾರವನ್ನು (Sovereign Power) ಆಯಾ ಅಂಗಗಳ ಮತ್ತು ವಿವಿಧ ಸ್ತರಗಳ ವಿಕೇಂದ್ರಿತ ಅಧಿಕಾರವನ್ನು ಹಾಗೂ ಕರ್ತವ್ಯಗಳನ್ನು, ಜವಾಬ್ದಾರಿ, ವ್ಯಾಪ್ತಿ, ಪರಸ್ಪರ ಸಹಯೋಗದ ಮತ್ತು ನಿಯಂತ್ರಣದ ಸೂತ್ರಗಳನ್ನು ಮತ್ತು ನಿಯಮಾತ್ಮಕ ವಿವರಗಳನ್ನು ಅನೇಕ ವಿಧಿಗಳು ಮತ್ತು ನ್ಯಾಯ ನಿಯಮಗಳನುಸಾರ ಕ್ರಮಬದ್ಧವಾಗಿ ಸೂಚಿಸಲಾಗಿದೆ.

## ಸರ್ಕಾರದ ಪ್ರಮುಖ ಅಂಗಗಳು

ನಮಗೆಲ್ಲಾ ತಿಳಿದಿರುವಂತೆ, ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗಳ ನಡುವಿನ



ಅಧಿಕಾರ ವಿಭಜನೆ ಮತ್ತು ಪೂರಕ ನಿಯಂತ್ರಾತ್ಮಕ ಅಂಶಗಳನ್ನು (Checks and balances) ಸ್ಪಷ್ಟವಾಗಿ ತಿಳಿಸಲಾಗಿದೆ. ಒಂದು ವೇಳೆ ಕಾರ್ಯಾಂಗ ಮತ್ತು ಶಾಸಕಾಂಗಗಳಲ್ಲಿ ಅಧಿಕಾರದ ದುರುಪಯೋಗ ಅಥವಾ ಸಂವಿಧಾನದಲ್ಲಿನ ಆಶಯಗಳಿಗೆ ವ್ಯತಿರಿಕ್ತವಾಗಿ ವರ್ತಿಸಿದಲ್ಲಿ, ಅವುಗಳನ್ನು ಹೇಗೆ ನಿಭಾಯಿಸುವುದು ಎಂಬುದನ್ನೂ ಸಹ ನ್ಯಾಯಾಂಗದ ವಿಮರ್ಶೆಗೆ ಒಳಪಡಿಸಲಾಗಿದೆ. ಅಂದರೆ ಈ ಎರಡೂ ಪ್ರಮುಖ ಅಂಗಗಳ ನಡುವೆ ಘರ್ಷಣೆಯಾದಲ್ಲಿ ಮತ್ತು ಸಂವಿಧಾನದ ಮೂಲ ರಚನೆ (Basic Structure) ಯಂತೆ ಎಲ್ಲ ಅಂಗಗಳು ಕರ್ತವ್ಯ ನಿರ್ವಹಿಸಿದಿದ್ದಲ್ಲಿ ಅವುಗಳಿಗೆ ಎಚ್ಚರಿಕೆ ನೀಡಿ ಸಂವಿಧಾನದ ಸ್ವರೂಪವನ್ನು ಕಾಪಾಡುವುದು ಸಹ ಬಹಳ ಮಹತ್ವದ ಅಂಶವಾಗಿದೆ. ಅಂದರೆ ನಮ್ಮ ರಾಷ್ಟ್ರದ ಜನತೆಯ ಮೂಲಭೂತ ಹಕ್ಕುಗಳು, ನ್ಯಾಯಾಂಗದ ಸ್ವತಂತ್ರ ಅಸ್ತಿತ್ವ ಮತ್ತು ಪ್ರಜಾಪ್ರಭುತ್ವವನ್ನು ದಮನ ಮಾಡುವ ಎಲ್ಲ ಪ್ರಸಂಗಗಳಲ್ಲಿ ಅದನ್ನು ನ್ಯಾಯಾಂಗ ವಿಮರ್ಶೆಗೊಳಪಡಿಸಿ ತೀರ್ಪು ನೀಡುವ ಅಧಿಕಾರವನ್ನು ಎತ್ತಿ ಹಿಡಿಯಲಾಗಿದೆ. ಇದುವರೆವಿಗೂ ನ್ಯಾಯಾಂಗ ತನ್ನ ಈ ಪಾತ್ರವನ್ನು ಬಹುಪಾಲು ಸನ್ನಿವೇಶಗಳಲ್ಲಿ ನಿರ್ಭೀತಿಯಿಂದ ಮತ್ತು ಪಕ್ಷಪಾತರಹಿತವಾಗಿ ನಿರ್ವಹಿಸಿದೆ ಎಂದು ತೃಪ್ತಿಕರವಾಗಿ ಗುರುತಿಸ ಬಹುದಾಗಿದೆ.

### ಪ್ರಜಾಪ್ರತಿನಿಧಿಗಳ ಪಾತ್ರ

ನಮ್ಮ ಶಾಸಕಾಂಗದಲ್ಲಿ 'ಪ್ರಜಾಪ್ರತಿನಿಧಿಗಳ' ಪಾತ್ರ ಅತ್ಯಂತ ಜವಾಬ್ದಾರಿಯುತ ಹಾಗೂ ಪ್ರಜೆಗಳ ವಿಶ್ವಾಸವನ್ನು ಸದಾ ರಕ್ಷಿಸುವಂತಹ ಗುರಿಯನ್ನು ಹೊಂದಿದೆ.

ಕಳೆದ 64 ವರ್ಷಗಳಲ್ಲಿ, ಅದರಲ್ಲೂ 1950 ರಿಂದ 2011 ರವರೆಗೆ ಸಂವಿಧಾನದ ಮೂಲ ತತ್ವಾಂಶಗಳ ಹಿನ್ನೆಲೆಯಲ್ಲಿ ನಮ್ಮ 'ಗಣರಾಜ್ಯದ (Republic) ಪ್ರಜಾಪ್ರತಿನಿಧಿಗಳು ತಮ್ಮ ಕರ್ತವ್ಯ ಪಾಲನೆಯಲ್ಲಿ ಹೇಗೆ ಯಶಸ್ವಿಯಾಗಿದ್ದಾರೆ ಎಂಬುದನ್ನು ಪರಿಪೂರ್ಣವಾಗಿ ವಿಮರ್ಶಿಸುವುದು ಕಷ್ಟ ಸಾಧ್ಯ. ಈ ಹಿಂದಿನ ಪ್ರಜಾಪ್ರತಿನಿಧಿಗಳ ಕೊಡುಗೆಯನ್ನು ಇಂದಿನ ಪ್ರಜಾಪ್ರತಿನಿಧಿಗಳ ಪಾತ್ರ ಅಥವಾ ಕೊಡುಗೆಗೆ / ಸೇವಾ ತತ್ಪರಿಣತಿಗೆ ಹೋಲಿಸಿದರೆ, ಇಂದು ಅದು ಜನತೆಯ ಪರವಾಗಿ ಇದೆ ಎಂದು ವಿಶ್ವಾಸದಿಂದ ಹೇಳುವುದು ಕಠಿಣವೆನಿಸುತ್ತದೆ. ಏಕೆಂದರೆ ಬಹುಪಾಲು ಪ್ರಜಾಪ್ರತಿನಿಧಿಗಳ ಇಂದಿನ ನಡವಳಿಕೆಯನ್ನು ಪರಿಶೀಲಿಸಿದಾಗ, ಅವರುಗಳಲ್ಲಿ ಸಂವಿಧಾನದ ನಿಜವಾದ ಅರಿವು ಹಾಗೂ ಅರ್ಪಣಾಭಾವನೆಯ ಕಾರ್ಯ ಗಳ ಕೊರತೆ ಎದ್ದು ಕಾಣುತ್ತದೆ. ಇದು ಅತ್ಯಂತ ದುರದೃಷ್ಟಕರವಾದ ಸಂಗತಿ.

ಪ್ರಜೆಗಳಾದ ನಾವು ಅವರುಗಳಲ್ಲಿ ಚುನಾವಣೆಯ ನಂತರ ನಂಬಿಕೆ ಇಡಲಾಗದ ಸ್ಥಿತಿಯಲ್ಲಿ ಇದ್ದೇವೆ. ನಮ್ಮ ಇಡೀ ಪ್ರಜಾತಂತ್ರ ವ್ಯವಸ್ಥೆ ಒಂದು ರೀತಿಯ ವಿರೋಧಾಭಾಸಗಳಲ್ಲಿ ತೊಳಲಾಡುತ್ತಿದೆಯೇನೋ ಎಂದೆನಿಸುತ್ತದೆ. ಈ ದುರ್ದೆಸೆಗೆ ಅಥವಾ ಅಪನಂಬಿಕೆಗೆ ಕಾರಣವೆನಿಸುವ ಅಂಶಗಳಾವುವು ಎಂದು ಚಡಪಡಿಸುವಂತಾಗಿದೆ! ಆದರೆ, ಇಲ್ಲಿನ ಚರ್ಚೆಗೆ ಸಂಕ್ಷಿಪ್ತವಾಗಿ ಸೀಮಿತಗೊಳಿಸುವಂತೆ ವ್ಯಸನದ ಪರಿಸ್ಥಿತಿ ಇರಬಹುದು ಎಂದು ಸ್ಮರಿಸಿ, ಮುಂದಿನ ಸಾಲುಗಳಲ್ಲಿ ಆಧಾರಸಹಿತವಾಗಿ ಕೆಲವು ವಿಚಾರಗಳ ಬಗ್ಗೆ ಮಾತ್ರ ಪ್ರಸ್ತಾಪಿಸಲಾಗಿದೆ.

### ಶಾಸಕಾಂಗದಲ್ಲಿ ನಡವಳಿಕೆಗಳು

ನಮ್ಮ ಚುನಾಯಿತ ಪ್ರತಿನಿಧಿಗಳು ಸಂಸತ್ತಿನಲ್ಲಿ ಮತ್ತು ಆಯಾ ರಾಜ್ಯದ ಶಾಸಕಾಂಗ ಸಭೆಗಳಲ್ಲಿ ಹೇಗೆ ನಡೆದುಕೊಂಡಿದ್ದಾರೆ ಮತ್ತು ಯಾವ ರೀತಿ ನಡೆದುಕೊಳ್ಳಬಹುದಿತ್ತು ನಾವು ಅವರುಗಳು ವರ್ತಿಸಿರುವುದನ್ನು ಪರೀಕ್ಷೆಗೆ ಒಳಪಡಿಸಿದಾಗ ಅಚ್ಚರಿಯುಂಟಾಗಬಹುದು. ಇಂತಹ ವಿಫಲ ನಡವಳಿಕೆ ಮತ್ತು ಅಪನಂಬಿಕೆಗಳಿಗೆ ಅವರುಗಳೇ ನೇರವಾಗಿ ಹೊಣೆಯಾಗುತ್ತಾರೆ. ಅವರುಗಳನ್ನು ಚುನಾವಣೆಯಲ್ಲಿ ಆರಿಸಿ ಕಳುಹಿಸಿದ ಮತದಾರರಲ್ಲ!

ಹಾಗೆಯೇ ಈ ಶಾಸನ ಸಭೆಗಳ ಸದಸ್ಯರುಗಳನ್ನು ಈ ಪರಿಸ್ಥಿತಿಗೆ ತಳ್ಳಿದವರು ಆಯಾ ಪಕ್ಷಗಳು ಮತ್ತು ಅವುಗಳ ಜವಾಬ್ದಾರಿಯುತ ನೇತಾರರು ಎಂದೂ ಸಹ ಗುರುತಿಸಬಹುದಾಗಿದೆ. ಇಂದು ಯಾವುದೇ ರಾಜಕೀಯ ಪಕ್ಷದಲ್ಲಿ ಪ್ರಾಮಾಣಿಕವೆನಿಸುವ ಶಿಸ್ತು ಅಥವಾ ಆಂತರಿಕ ಪ್ರಜಾಪ್ರಭುತ್ವ (Inner Democracy) ಎಂಬುದು ಇಲ್ಲವೆನ್ನಬಹುದು.

ಭಾರತವು ವಿಶ್ವದ ಅತಿ ಹೆಚ್ಚಿನ ಜನಸಂಖ್ಯಾ ಬಲವುಳ್ಳ ವಿಶಾಲ ಪ್ರಜಾಪ್ರಭುತ್ವ, ಇದುವರೆವಿಗೂ ಇದು



ಒಂದು ರಿತಿಯಲ್ಲಿ ಮುಂದುವರೆದಿರುವುದು ನಮ್ಮ ಜನತೆಯ ಗೆಲುವೇ ಹೊರತು ಶಾಸಕರುಗಳ ಪ್ರಯತ್ನದಿಂದಲ್ಲ ಎಂದು ವಿಷಾದದಿಂದ ಹೇಳಬಹುದಾಗಿದೆ. ಕಳೆದ 64 ವರ್ಷಗಳಿಂದ ಈ ಪ್ರಜಾಪ್ರಭುತ್ವ ವ್ಯವಸ್ಥೆ ಅನೇಕ ಸವಾಲುಗಳು ಮತ್ತು ಗಂಭೀರ ಸನ್ನಿವೇಶಗಳನ್ನು ಎದುರಿಸಿ ಮುಂದುವರೆದಿದೆ! ಇತರೆ ಪ್ರಜಾಪ್ರಭುತ್ವಗಳು ಮತ್ತು ನಮ್ಮ ನೆರೆಹೊರೆಯ ದೇಶಗಳಿಗೆ ಹೋಲಿಸಿದರೆ, ನಮ್ಮ ಪ್ರಜಾಪ್ರಭುತ್ವ ಪ್ರಗತಿ ಸಾಧಿಸಿದ್ದು ಇದು ವಿಶ್ವದ ಗಮನ ಸೆಳೆದಿದೆ. ಆದರೂ ವಿರೋಧಾಭಾಸಗಳ ನಡುವೆ ಇದು ತೊಳಲಾಡುತ್ತಿರುವುದೂ ಸಹ ನಮ್ಮೆದುರು ಇರುವ ದ್ವಂದ್ವ ಪರಿಸ್ಥಿತಿ ಎಂದೆನಿಸುತ್ತದೆ!

### ಇಂದಿನ ಸ್ಥಿತಿಗತಿಗಳು

ನಮ್ಮ ಸಂಸದೀಯ ಸರ್ಕಾರದ ವ್ಯವಸ್ಥೆಯಲ್ಲಿ ಕಾರ್ಯಾಂಗಕ್ಕಿಂತ ಶಾಸಕಾಂಗ ವ್ಯವಸ್ಥೆ ಪ್ರಥಮಸ್ಥಾನದಲ್ಲಿರುವ ಪ್ರಮುಖ ಅಂಗಾಂಗ. ಶಾಸಕಾಂಗವು ಚರ್ಚಿಸಿ ಅಂಗೀಕರಿಸುವ ನೀತಿ ನಿಯಮಗಳು ಹಾಗೂ ಕಾನೂನುಗಳು ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇರಿಸಿರುವ ಜನತೆಯ ಇಚ್ಛೆಯನ್ನು ಪ್ರತಿಬಿಂಬಿಸುತ್ತವೆ. ಆದರೆ ಇಂದು ಶಾಸಕಾಂಗಗಳು ನಿರ್ವಹಿಸುತ್ತಿರುವ ಪಾತ್ರವನ್ನು ವಿಮರ್ಶಿಸಿದಾಗ ಅವುಗಳ ಪ್ರಾಮುಖ್ಯತೆ ಮತ್ತು ಕೊಡುಗೆ ಕ್ಷೀಣಿಸಿರುವುದು ನೇರವಾಗಿ ಗೋಚರಿಸುತ್ತದೆ.

ಪ್ರಜಾಪ್ರತಿನಿಧಿಗಳ ಪಾತ್ರಕ್ಕಿಂತ ಮೇಲಾಗಿ ಅವರ ಕರ್ತವ್ಯಗಳು ಮತ್ತು ಜವಾಬ್ದಾರಿಗಳನ್ನು ಅರಿತ ಕೊಳ್ಳುವುದು ಅಗತ್ಯವಾಗಿದೆ. ಒಂದು ಆಶ್ಚರ್ಯದ ಸಂಗಿತಿಯೆಂದರೆ, ಇತ್ತೀಚಿನ ಮಾಹಿತಿ ಹಕ್ಕಿನ ಸೌಲಭ್ಯದಿಂದಾಗಿ ಈ ಬಗ್ಗೆ ಅನೇಕ ಲಿಖಿತ ಪ್ರಶ್ನೆಗಳನ್ನು ಕೇಳಿದವರಿಗೆ, ಸಿಕ್ಕ ಅಧಿಕೃತ ಉತ್ತರದ ಪ್ರಕಾರ ಇವುಗಳನ್ನು ನಿರ್ಧಿಷ್ಟವಾಗಿ ಸಿದ್ಧಪಡಿಸಿಲ್ಲ ಎಂದು ತಿಳಿದುಬಂದಿದೆ. ನಮ್ಮ ದೇಶದ ರಾಜ್ಯ ಶಾಸಕಾಂಗಗಳಲ್ಲಿ ಕೇವಲ ಸಿಕ್ಕಿಂ ರಾಜ್ಯವನ್ನು ಬಿಟ್ಟರೆ ಬೇರಾವ ರಾಜ್ಯದ ಶಾಸಕಾಂಗಳಲ್ಲಿ ಲಿಖಿತವಾದ ಯಾವುದೇ ಕ್ರಮಬದ್ಧ ಕರ್ತವ್ಯಗಳು ಮತ್ತು ಜವಾಬ್ದಾರಿಗಳನ್ನು ಕ್ರೋಢೀಕರಿಸಿಲ್ಲ ಎಂಬುದು ವಾಸ್ತವ ಚಿತ್ರ. ಚುನಾವಣಾ ಆಯೋಗವು ಸಹ ಈ ಬಗ್ಗೆ ತಮಗೆ ಮಾಹಿತಿ ಇಲ್ಲ ಎಂದು ತಿಳಿಸಿರುತ್ತದೆ. ನಮ್ಮ ಸಂಸದೀಯ ವ್ಯವಹಾರಗಳ ಸಚಿವರ ಕಛೇರಿ ಮತ್ತು ಕೇಂದ್ರ ಕಾನೂನಿನ ಸಚಿವರ ಕಚೇರಿಯಿಂದ ಈ ಬಗ್ಗೆ ಲೋಕಸಭಾ ಕಾರ್ಯಾಲಯ ನೀಡಿದ ವಿವರಣೆ ಹೀಗಿದೆ; "ಸಂಸತ್ತಿನ ಅಥವಾ ರಾಜ್ಯ ಶಾಸಕಾಂಗಗಳ ಸದಸ್ಯರುಗಳ ಕರ್ತವ್ಯಗಳು ಮತ್ತು ಜವಾಬ್ದಾರಿಗಳನ್ನು ಪಟ್ಟಿ ಮಾಡಿರುವ ಮಾಹಿತಿ ಅಥವಾ ಅವರ ಹೊಣೆಗಾರಿಕೆ (Accountability) ಯ ಬಗ್ಗೆ ವಿವರಗಳಿಲ್ಲ" ಎಂದು ಜೂನ್ 3, 2009ರಲ್ಲಿ ಉತ್ತರ ನೀಡಲಾಗಿದೆ. ಕೇವಲ ಸಭಾನಡವಳಿಕೆಗಳು ಮತ್ತು ನಿಯಮಾವಳಿಗಳು ಮಾತ್ರ ಇವೆ. ಇದನ್ನೇ ನಾವು ಅತಿ ವಿಚಿತ್ರವಾದ ಸಂಗತಿ ಎಂದು ಪರಿಗಣಿಸಬೇಕಾಗುತ್ತದೆ.

ಅಂದರೆ ಶಾಸಕರುಗಳಿಗೆ ನಿರ್ದಿಷ್ಟ ಕರ್ತವ್ಯಗಳಿಲ್ಲ ಎಂಬುದು ಅವರನ್ನು ನೇರವಾಗಿ ನಿಯಂತ್ರಿಸುವ ಮತ್ತು ಸರಿಯಾಗಿ ಕಾರ್ಯ ನಿರ್ವಹಿಸಿಲ್ಲ ಎಂದು ಪ್ರಶ್ನಿಸುವ ಅಧಿಕಾರ ಜನತೆಗೆ ಇಲ್ಲ. ಕೇವಲ ಚುನಾವಣೆಗಳ ಸಂದರ್ಭದಲ್ಲಿ ಇದನ್ನು ಪರಾಮರ್ಶಿಸುವ ಅವಕಾಶ ಮಾತ್ರ ಮತದಾರರಿಗೆ ಪರೋಕ್ಷವಾಗಿ ಇರುತ್ತದೆ. ಈ ಹಿನ್ನೆಲೆಯಲ್ಲಿ ಅವರ ಪಾತ್ರವನ್ನು ವಿಶ್ಲೇಷಿಸಿದರೆ, ಇಂದು ಶಾಸಕಾಂಗದ ಮಹತ್ವವನ್ನು ಕಡಿಮೆಗೊಳಿಸಿ ಕಾರ್ಯಾಂಗದ ಅಧಿಕಾರ ಹೆಚ್ಚಾಗುತ್ತಿರುವುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ರಾಜ್ಯಗಳ ಕರ್ತವ್ಯಗಳು ಅಭಿವೃದ್ಧಿಯ ಹೆಸರಿನಲ್ಲಿ ದಿನೇ ದಿನೇ ಹೆಚ್ಚುತ್ತಿದ್ದು. ಇಂತಹ ಸನ್ನಿವೇಶದಲ್ಲಿ ಅತ್ಯಂತ ಪರಿಣಾಮಕಾರಿ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ಶಾಸಕಾಂಗದ ಪಾತ್ರ ಕ್ಷೀಣಿಸಿರುವುದು ವಾಸ್ತವ ಸಂಗತಿ. ಶಾಸಕರುಗಳು ಜನಸಾಮಾನ್ಯರ ಪ್ರತಿನಿಧಿಗಳಾಗಿದ್ದು, ತಮ್ಮ ಕ್ಷೇತ್ರಗಳ ಸಮಸ್ಯೆಗಳ ಬಗ್ಗೆ ಅಗತ್ಯವಾದ ಪರಿಣತಿ. ಬುದ್ಧಿವಂತಿಕೆ ಮತ್ತು ಅಗತ್ಯ ಜ್ಞಾನಹೊಂದಿಲ್ಲದಿದ್ದಲ್ಲಿ, ಕಾರ್ಯಾಂಗ ಆಡಳಿತಾತ್ಮಕ ಕಾರಣಗಳಿಂದಾಗಿ ಮತ್ತು ಉಪನಿಯಮಗಳನ್ನು ರಚಿಸುವ ಮತ್ತು ಜಾರಿಗೆ ತರುವ ಅಧಿಕಾರವನ್ನು ಅಧೀನ ಶಾಸನಗಳನ್ನು ರಚಿಸಿ ನಿಯಂತ್ರಿಸುತ್ತದೆ. ಇದು ಅನಿವಾರ್ಯವಾದರೂ, ಅಪೇಕ್ಷಣೀಯವಲ್ಲ. ಇದರಿಂದಾಗಿ ಇಡೀ ಶಾಸಕಾಂಗ ವ್ಯವಸ್ಥೆಯು ತನ್ನ ಮೂಲ ಅಧಿಕಾರವನ್ನು ಕಾರ್ಯಾಂಗಕ್ಕೆ ಕೊಡುಗೆಯಾಗಿ ನೀಡಿರುವುದು ಕ್ರಮೇಣವಾಗಿ ಅದನ್ನು ತನ್ನ ಬಿಗಿ ಹಿಡಿತದಲ್ಲಿ, ಇಟ್ಟುಕೊಂಡಿದೆ. ಇದು ಶಾಸಕಾಂಗ ವ್ಯವಸ್ಥೆಯನ್ನು ಒಂದು ರೀತಿಯಲ್ಲಿ ಗೌಣವಾಗಿಸಿದೆ ಎಂದು ಗುರುತಿಸಬಹುದಾಗಿದೆ. ಇದು ಆಗಬಾರದಿತ್ತು!



ಆದಾಗ್ಯೂ ಶಾಸಕಾಂಗವೂ ತನ್ನ ಪ್ರಜಾಪರವಾದ ಪ್ರಭಾವವನ್ನು ಉಳಿಸಿಕೊಂಡು, ಕಾರ್ಯಾಂಗದ ಮೇಲೆ ನಿಯಂತ್ರಣ ಹೊಂದುವುದು ಹಿಂದಿಗಿಂತಲೂ ಇಂದು ಅವಶ್ಯಕವಾಗಿದೆ. ಇತ್ತೀಚಿನ ಜನಾಂದೋಲನಗಳು ಮತ್ತು ಮಾಧ್ಯಮಗಳ ಮೂಲಕ ನಾವು ನೋಡುತ್ತಿರುವ ಬೆಳವಣಿಗೆಗಳು ಒಂದು ರೀತಿಯಲ್ಲಿ ಶಾಸಕಾಂಗದ ವಿಫಲತೆಯನ್ನು ಎತ್ತಿ ತೋರಿಸುತ್ತಿವೆ. ಉದಾಹರಣೆಗೆ, 'ಭ್ರಷ್ಟಾಚಾರ'ದ ವಿರುದ್ಧ ನಡೆಯುತ್ತಿರುವ ಪ್ರತಿಭಟನೆಗಳು ಮತ್ತು ಜನಪರನಿಲುವುಗಳು ಇಡೀ ಶಾಸಕಾಂಗ ವ್ಯವಸ್ಥೆ ಇದುವರೆವಿಗೂ ತರದೇ ಇರುವ ಭ್ರಷ್ಟಾಚಾರದ ವಿರುದ್ಧದ ಹೊಸ ಸುಧಾರಣೆಗಳನ್ನು ತರಬೇಕು ಎಂದು ಬೃಹತ್ ಚಳವಳಿಯನ್ನು ಆರಂಭಿಸಿವೆ. ಅಂದರೆ ಜನಸಮೂಹ ಮತ್ತು ಸಮಾಜದ ಹಿತರಕ್ಷಣೆಗಾಗಿ ಶಾಸಕಾಂಗವು ಕೈಗೊಳ್ಳದ ಅಥವಾ ಮರೆಮಾಚುತ್ತಾ ಬಂದಿರುವ 'ಲೋಕಪಾಲ' ಮಸೂದೆಯ ಬಗ್ಗೆ ತೀವ್ರ ಒತ್ತಾಯವನ್ನು ಉಪವಾಸ ಮತ್ತು ಇತರೆ ಚಳವಳಿಗಳ ಮೂಲಕ ಹಾದಿ ಬೀದಿಗಳಲ್ಲಿ ಜನಸಾಗರದಲ್ಲಿ ಪ್ರದರ್ಶಿಸಿ, ಶಾಸಕಾಂಗ ಮತ್ತು ಕಾರ್ಯಾಂಗದ ಆದ್ಯ ಕರ್ತವ್ಯಗಳನ್ನು ನೆನಪುಮಾಡಿಕೊಟ್ಟಿವೆ. ಇದಕ್ಕಿಂತ ಹೆಚ್ಚಿನ ನಿದರ್ಶನ ಶಾಸಕಾಂಗದ ಕುಸಿಯುತ್ತಿರುವ ಪಾತ್ರ ಮತ್ತು ಕರ್ತವ್ಯ ಲೋಪಗಳ ಬಗ್ಗೆ ಇರಲಿಕ್ಕೆ ಸಾಧ್ಯವಿಲ್ಲ! ಜನರೇ ತಮ್ಮ ಪ್ರಜಾಪ್ರತಿನಿಧಿಗಳಿಗೆ ಇಂತಹ ಸಮಗ್ರ ಮಸೂದೆಯನ್ನು ತರಲೇಬೇಕೆಂದು ನಿರ್ಧಿಷ್ಟ ಗಡುವು ನೀಡಿರುವುದೂ ಸಹ ಅಪರೂಪದ ಜನಾಭಿಪ್ರಾಯದ ಐತಿಹಾಸಿಕ ನಿದರ್ಶನವಾಗಿದೆ. ಇದು ಜನರ ಗೆಲುವಾದರೂ ಶಾಸಕಾಂಗದ ಮತ್ತು ಶಾಸಕರುಗಳ ವಿಫಲತೆಯ ಪರಿಣಾಮ ಎಂದು ಖಚಿತಪಡಿಸಬೇಕಾಗುತ್ತದೆ.

ಈ ಹಿನ್ನೆಲೆಯಲ್ಲಿ ಸಂವಿಧಾನದ ರಚನೆಯ ಮೂಲ ಉದ್ದೇಶದಂತೆ ಜನಪ್ರತಿನಿಧಿಗಳು ತಮ್ಮ ಸಂಸದೀಯ ಕರ್ತವ್ಯಗಳ ನಿರ್ವಹಣೆಯ ಬಗ್ಗೆ ಮತ್ತು ಸರ್ಕಾರಗಳು ಶಾಸಕಾಂಗದ ಮಹತ್ವವನ್ನು ಪುನಃ ಎತ್ತಿಹಿಡಿಯುವ ಬಗ್ಗೆ ಚಿಂತಿಸುವುದು ಅತಿ ಜರೂರಾಗಿ ಆಗಬೇಕಾಗಿದೆ. ಇಲ್ಲದಿದ್ದಲ್ಲಿ, 'ಲೋಕಪಾಲ' ಮಸೂದೆಯನ್ನು ತರುವಂತೆ ನೇರವಾಗಿ ಜನತಾ ಸಂಘಟನೆಗಳು ಮತ್ತು ಇತರೆ ಒತ್ತಾಯದ ಸರ್ಕಾರೇತರ ಗುಂಪುಗಳು ಪುನಃ ಚಳವಳಿಯ ಮೂಲಕ ಒತ್ತಾಯ ತರಬಹುದಾಗಿದೆ. ಆದರೆ ಇದು ಆರೋಗ್ಯಕರವಾದ ಸಂಗತಿಯಾಗಿರದೆ, ಸಂಸದೀಯ ಪದ್ಧತಿಯ ನೈಜ ಕರ್ತವ್ಯವನ್ನು ಶಿಥಿಲಗೊಳಿಸಿದಂತಾಗುತ್ತದೆ.

### ಇಂದಿನ ಶಾಸಕಾಂಗದ ಸ್ಥಿತಿ

ಶಾಸಕಾಂಗವು ಇಂತಹ ದುರ್ದೆಶೆಗೆ ತಲುಪಲು ಕಾರಣರಾರು ಇದು ನಮ್ಮ ಪ್ರಜಾಪ್ರತಿನಿಧಿಗಳ ನಿರ್ಲಕ್ಷ್ಯವೇ ಅಥವಾ ಕಾರ್ಯಾಂಗದ ಮೇಲುಗೈಯಿಂದಾಗಿ ಇದು ಕೆಳಗೆ ತಳ್ಳಲ್ಪಟ್ಟಿದೆಯೇ? ಎಂಬ ಪ್ರಶ್ನೆಗಳು ಸಹಜವಾಗಿಯೇ ನಮ್ಮೆದುರು ನಿಲ್ಲುತ್ತವೆ. ಇವರುಗಳು ಜನಸಾಮಾನ್ಯರ ಸಮಸ್ಯೆಗಳು \ ಅಗತ್ಯಗಳನ್ನು ಸರಿಯಾಗಿ ಅರಿಯದೆ, ಇಡೀ ಜವಾಬ್ದಾರಿಯನ್ನು ಸರ್ಕಾರ ಮತ್ತು ಅಧಿಕಾರಿಶಾಹಿಗೆ ವಹಿಸಿರುವ ಸಂಕೀರ್ಣ ಸನ್ನಿವೇಶ ಕಾರಣವೇ? ಯಾವುದು ಸರಿ ಮತ್ತು ಯಾವುದು ಸರಿಯಲ್ಲ ಎಂಬ ಜಿಜ್ಞಾಸೆ ನಮ್ಮ ಮುಂದೆ ಇದೆ. ಇಂದು ಶಾಸನಗಳನ್ನು ರಚಿಸುವ ಕ್ರಿಯೆಯು ಅನೇಕ ಒತ್ತಡಗಳಿಂದಾಗಿ ತಾಂತ್ರಿಕತೆ, ವೈಜ್ಞಾನಿಕ ದೃಷ್ಟಿಕೋನ ಮತ್ತು ಇತರೆ ಆಡಳಿತಾತ್ಮಕ ಪ್ರಭಾವಗಳಿಂದಾಗಿ ತನ್ನ ಮೂಲ ಸ್ವರೂಪದಿಂದ ಪರಿಣಿತಿಯನ್ನು ಮತ್ತು ಹೆಚ್ಚು ಸಮಯವನ್ನು ಇದಕ್ಕಾಗಿ ಮೀಸಲಿಡುವಂತೆ ಸಂಕೀರ್ಣಗೊಳ್ಳುತ್ತಿದೆ. ಇದರಿಂದಾಗಿ ಶಾಸಕಾಂಗ ಕಾರ್ಯಾಂಗದ ನಿರ್ವಾಹಕರ ಹಿಡಿತಕ್ಕೆ ಒಳಗಾಗಿ ತನ್ನ ನಿಜವಾದ ಹೊಣೆಗಾರಿಕೆಯಿಂದ ದೂರ ಹೋಗುತ್ತಿರುವುದು ಬಹುಮುಖ್ಯ ಕಾರಣವೆನ್ನಬಹುದು.

ಈ ಸಮಸ್ಯೆಗೆ ಪರಿಹಾರವೇನು? ಆಡಳಿತದ ನಿಯಂತ್ರಣವನ್ನು ಪಡೆದಿರುವ ಆಡಳಿತ ಪಕ್ಷದ ನೇತಾರರು ಮತ್ತು ವಿರೋಧ ಪಕ್ಷಗಳ ಶಾಸಕಾಂಗ ಪಕ್ಷಗಳ ಸದಸ್ಯರು ಒಟ್ಟಿಗೆ ಸೇರಿ ಇದಕ್ಕೆ ಪರಿಹಾರವನ್ನು ಕಂಡುಹಿಡಿಯಬೇಕಾಗಿದೆ. ಇದನ್ನು ವ್ಯವಸ್ಥೆ ಮತ್ತು ನಿಯಮಾವಳಿಗಳನ್ನು ನಿಷ್ಠೆಯಿಂದ ಅರಿತು. ಅರಗಿಸಿಕೊಂಡು ತಮ್ಮ ಪಾತ್ರ ಮತ್ತು ಸ್ಥಾನದ ಮಹತ್ವವನ್ನು ಈ ಕೂಡಲೇ ವಾಪಸ್ಸು ಪಡೆಯುವ ಪ್ರಯತ್ನಗಳಾಗಬೇಕು. ಅಸಹಾಯಕರಂತೆ ಕುಳಿತರೆ ಅಧಿಕಾರಶಾಹಿ ಇವರನ್ನೂ ಮುಂದೆಯೂ ಸಹ ನಗೆಪಾಟಲಿಗೆ ಗುರಿಮಾಡುತ್ತದೆ. ಒಟ್ಟಿನಲ್ಲಿ ಆಡಳಿತ ಮತ್ತು ವಿರೋಧಪಕ್ಷಗಳು ಕೆಲವೇ ನಾಯಕರುಗಳ ಮೇಲೆ ಅವಲಂಬಿತರಾಗದೆ ಎಲ್ಲ ಶಾಸಕರನ್ನು ಒಳಗೊಂಡಂತೆ ತಮ್ಮ ಆಂತರಿಕ ಚರ್ಚೆ ಮತ್ತು ಪ್ರಜಾತಂತ್ರದ



ಜಾಣ್ಮೆಯನ್ನು ಹೆಚ್ಚಾಗಿ ಪ್ರದರ್ಶಿಸಬೇಕು. ಶಾಸಕಾಂಗದಲ್ಲಿ ಕಾರ್ಯಾಂಗವು ಸಿದ್ಧಪಡಿಸಿ ಮಂಡಿಸುವ ಮಸೂದೆಗಳಿಗೆ, ಆಳವಾಗಿ ಚರ್ಚಿಸದೆ ತಮಗೆ ಇಷ್ಟವಿರಲಿ ಅಥವಾ ಇಲ್ಲದಿರಲಿ ಸರ್ಕಾರ ಮಂಡಿಸಿದ ಮಸೂದೆಗಳಿಗೆ ಯಾಂತ್ರಿಕವಾಗಿ ಮತ್ತು ಅವಸರದಿಂದ ಒಪ್ಪಿಗೆ ನೀಡುವುದು ಈಗ ಹೆಚ್ಚಾಗಿದೆ. ಇಂತಹ ಕರ್ತವ್ಯ ಲೋಪದಿಂದಾಗಿ, ಇಂದು ಶಾಸಕಾಂಗ ತನ್ನ ಅಧಿಕಾರವನ್ನು ಕಳೆದುಕೊಂಡಿದೆ. ಇದು ಆಡಳಿತ ಪಕ್ಷದ ಕತೆಯಾದರೆ, ಇನ್ನು ವಿರೋಧಪಕ್ಷಗಳೂ ಸಹ ಈ ಬಗ್ಗೆ ತಮ್ಮ ಅಸಹಾಯಕತೆಯನ್ನು ಮತ್ತು ಕೇವಲ ಪ್ರಾತಿನಿಧಿಕ ಪಾತ್ರವನ್ನು ಪ್ರದರ್ಶಿಸುತ್ತಿವೆ. ಜನಪರ ಚರ್ಚೆ ಕಡಿಮೆಯಾಗಿ, ಕೇವಲ ಪ್ರಚಾರ, ಅಬ್ಬರ ಮತ್ತು ತೋರಿಕೆಗಾಗಿ ಎಂಬುವಂತೆ ವಿರೋಧಿಸುತ್ತಿರುವುದೂ ಸಹ ಮತ್ತೊಂದು ವಿಚಿತ್ರ ಬೆಳವಣಿಗೆಯಾಗಿದೆ!

ಅಲ್ಲದೆ, ಶಾಸಕರುಗಳಿಗೆ ಪಕ್ಷದ ಶಿಸ್ತಿನ ಭಯ ಮತ್ತು ಬೇರೆ ಬೇರೆ ಹಿತಾಸಕ್ತಿಗಳು ಕಾರಣವಾಗಿದ್ದು, ಏಕೆ ಇವರುಗಳು ಒಗ್ಗಟ್ಟಾಗಿ ತಮ್ಮ ಕರ್ತವ್ಯಗಳನ್ನು ನಿಭಾಯಿಸಲಾಗುತ್ತಿಲ್ಲ ಎಂದು ಆಳವಾಗಿ ಚರ್ಚಿಸಿ ಕಾರ್ಯರೂಪಕ್ಕೆ ತಂದಿರುವ ನಿದರ್ಶನಗಳು ಇಂದು ಕಂಡು ಬರುತ್ತಿಲ್ಲ. ಇಂತಹ ಗೊಂದಲ ಮತ್ತು ರಾಜಕೀಯ ನೈತಿಕತೆಯ ಕೊರತೆ ನಮ್ಮ ಈ ವ್ಯವಸ್ಥೆಗೆ ಕನ್ನಡಿ ಹಿಡಿದಂತಾಗಿದೆ. ಇದನ್ನು ಸಾಮಾನ್ಯ ಪ್ರಜೆಗಳು ಸಹ ಸರಿಯಾಗಿ ಎಚ್ಚರಿಸುವ ಸಾಧನ ಮತ್ತು ಪ್ರಯತ್ನಗಳೆರಡೂ ಕಂಡು ಬರುತ್ತಿಲ್ಲ. ಇದರಿಂದಾಗಿ ಸಾಮಾನ್ಯ ಪ್ರಜೆಗಳನ್ನೂ ಸೇರಿದಂತೆ ಇತರೆ ಎಲ್ಲ ವರ್ಗದ ಸೂಕ್ಷ್ಮಮತಿಗಳು ಒಂದು ರೀತಿಯ ನಿರಾಶಾದಾಯಕ ಸ್ಥಿತಿಯಲ್ಲಿದ್ದಾರೆ. ಇಂತಹ ಆತಂಕಗಳು ಪ್ರಜಾಪ್ರಭುತ್ವಕ್ಕೆ ಮಾರಕವಾಗುವುದಲ್ಲದೆ ಪೂರಕ ಅಥವಾ ರಕ್ಷಕ ಅಂಶಗಳಾಗುವುದಿಲ್ಲ.

ಆದುದರಿಂದ, ಶಾಸಕರುಗಳಾದವರು ತಮ್ಮ ವರ್ಚಸ್ಸು ಕ್ಷೀಣಿಸುತ್ತಿರುವ ಈ ಸಂದರ್ಭದಲ್ಲಿ ತಮ್ಮ ಬಹಳ ಜವಾಬ್ದಾರಿಯಿಂದ ಮತ್ತು ಜನಹಿತವನ್ನು ಕಾಪಾಡಲು ಎಚ್ಚರಗೊಂಡು ಕಾರ್ಯೋನ್ಮುಖರಾಗ ಬೇಕಾಗಿದೆ. ಕಳೆಗುಂದುತ್ತಿರುವ ಈ ವಿಲಕ್ಷಣ ಪರಿಸ್ಥಿತಿಯನ್ನು ಹೋಗಲಾಡಿಸುವುದು ಅತಿ ಜರೂರಾಗಿ ಆಗಬೇಕಾಗಿದೆ. ಒಟ್ಟಿನಲ್ಲಿ, ಇಂದಿನ ಯುವ ಪೀಳಿಗೆ ಮತ್ತು ಮುಂದೆ ಪ್ರಜಾತಂತ್ರವನ್ನು ಉಳಿಸುವ ಉದ್ದೇಶದಿಂದ, ಶಾಸಕಾಂಗವು ಅನೇಕ ಅಗತ್ಯ ಸುಧಾರಣೆಗಳನ್ನು ತಂದು ತಮ್ಮ ನಿಜವಾದ ಅಸ್ತಿತ್ವವನ್ನು ಪುನರ್ ಸ್ಥಾಪಿಸುವ ಪ್ರಯತ್ನ ಅತಿಮುಖ್ಯವಾಗಿ ಆಗಬೇಕಾಗಿದೆ.

## ನಮ್ಮ ಮುಂದಿನ ಮಾರ್ಗಸೂಚಿಗಳು

ಒಟ್ಟಾರೆ ನಮ್ಮ ಈ ಮಹತ್ವದ ಚರ್ಚೆಯ ಹಿನ್ನೆಲೆಯಲ್ಲಿ ಶಾಸಕರಾದವರು ಕರ್ತವ್ಯಗಳನ್ನು ಸಂವಿಧಾನದ ಒಟ್ಟಾರೆ ಆಶಯಗಳ ಆಧಾರದ ಮೇಲೆ ಮುಂದೆ ಪ್ರಸ್ತಾಪಿಸಿರುವ ಅಂಶಗಳತ್ತ ಗಮನಹರಿಸಬೇಕಾಗಿದೆ.

1. ಶಾಸಕರಾದಾಗಿನಿಂದ ತಮ್ಮ ಅವಧಿ ಮುಗಿಯುವವರೆಗೆ ತಾವು ನಿರ್ವಹಿಸಬೇಕಾದ ಕರ್ತವ್ಯಗಳ ಬಗ್ಗೆ ಸ್ಪಷ್ಟ ಅರಿವು ಮತ್ತು ಸೂಕ್ತ ತರಬೇತಿಯನ್ನು ಸಂಕೋಚವಿಲ್ಲದೆ ಪಡೆಯುವುದು.

2. ತಮ್ಮ ತಮ್ಮ ಕ್ಷೇತ್ರದ ಅಗತ್ಯಗಳು ಮತ್ತು ತಮ್ಮ ಪಕ್ಷದ ಪ್ರಣಾಳಿಕೆಯಲ್ಲಿ ಆಶ್ವಾಸನೆಗಳಂತೆ ನೀಡಿರುವ ಕಾರ್ಯಕ್ರಮಗಳ ಬಗ್ಗೆ ಪ್ರಾಮಾಣಿಕವಾಗಿ ಪರಿಶೀಲಿಸಿ, ಶಾಸನಗಳು ಮತ್ತು ತಿದ್ದುಪಡಿಗಳ ಮೂಲಕ ಜಾರಿಗೆ ತರಲು ಪ್ರಯತ್ನಿಸುವುದು.

3. ತಮ್ಮ ಬಂಧುಗಳನ್ನು ಮತ್ತು ತಮ್ಮ ಸ್ಥಾನದ ದುರುಪಯೋಗಗೊಳಿಸುವ ವ್ಯಕ್ತಿಗಳನ್ನು ಆದಷ್ಟೂ ದೂರವಿಟ್ಟು, ತಮ್ಮ ಕ್ಷೇತ್ರದ ಅನುಭವಿ ಹಿರಿಯರು, ಉತ್ಸಾಹಿ ಹಾಗೂ ಕಳಕಳಿಯನ್ನುಳ್ಳ ಯುವ ಕಾರ್ಯಕರ್ತರುಗಳನ್ನು ಆದರ್ಶವೆನ್ನುವ ರೀತಿಯಲ್ಲಿ ಬಳಸಿಕೊಂಡು ಸಮಾಜದ ಮತ್ತು ರಾಷ್ಟ್ರದ ಹಿತವನ್ನು ಕಾಪಾಡುವುದು. ಇಂತಹ ಚಿಂತಕರ, ಕಾರ್ಯಪಟುಗಳ ಮತ್ತು ಸಂಪರ್ಕ ವ್ಯಕ್ತಿಗಳ ಮೂಲಕ ಮಾಹಿತಿ ಪಡೆದು, ಅಗತ್ಯವಾದ ಸೇವಾ ಕಾರ್ಯಗಳನ್ನು ಹಂತಹಂತವಾಗಿ ನಿರ್ವಹಿಸುವುದು. ಇವುಗಳ ಆಧಾರದ ಮೇಲೆ ಶಾಸನ ಸಭೆಗಳು ಮತ್ತು ಸರ್ಕಾರಗಳ ನಡುವೆ ಸಂಪರ್ಕಹೊಂದಿ ಸೂಕ್ತ ಸಮಾಲೋಚನೆಯ ನಂತರ ರಚನಾತ್ಮಕ ಹಾಗೂ ಜನಕಲ್ಯಾಣದ ಕಾರ್ಯಕ್ರಮಗಳನ್ನು ಜಾರಿಗೆ ತರುವುದು.

4. ಶಾಸನ ಸಭೆಯಲ್ಲಿ ಮತ್ತು ತಮಗೆ ವಹಿಸಿರುವ ವಿಷಯ ಸಮಿತಿಗಳಲ್ಲಿ ಭಾಗವಹಿಸಿ, ತಮ್ಮ ನಾಯಕತ್ವದ ಮತ್ತು ಕ್ಷೇತ್ರ ಹಿತದ ಕಳಕಳಿಯನ್ನು ಸದಾ ದೃಷ್ಟಿಯಲ್ಲಿಟ್ಟುಕೊಂಡು ಜನಮೆಚ್ಚುವಂತೆ ಕರ್ತವ್ಯ ನಿರ್ವಹಿಸುವುದು.



5. ತಮ್ಮ ಕ್ಷೇತ್ರ ಮಾತ್ರವಲ್ಲದೆ, ಇತರೆ ಶಾಸಕರುಗಳ ತಮ್ಮ ಕ್ಷೇತ್ರದಲ್ಲಿ ಹೆಚ್ಚಿನ ಹಾಗೂ ಹೊಸ ಪ್ರಯತ್ನಗಳ ಮೂಲಕ ಸುಧಾರಣೆಗಳನ್ನು ತಂದಿದ್ದಲ್ಲಿ, ಅದನ್ನು ಪರಸ್ಪರ ತಮ್ಮ ಕ್ಷೇತ್ರದಲ್ಲೂ ತರುವಂತಹ ಪ್ರಯತ್ನಗಳನ್ನು ಮಾಡುವುದು.

6. ತಮ್ಮಕಾರ್ಯಸಾಧನೆಗಳನ್ನು ಪಟ್ಟಿ ಮಾಡಿ, ಮಾಧ್ಯಮಗಳ ಮೂಲಕ ಆಗಾಗ್ಗೆ ಜನತೆಯ ಮುಂದಿಟ್ಟು ದಾಖಲಾತಿಯ ಮೂಲಕ ತಮ್ಮ ಸೇವಾಚಿತ್ರವನ್ನು ದೃಢೀಕರಿಸುವುದು. ಇವುಗಳ ಬಗ್ಗೆ ಜನತೆಯ ಅಭಿಪ್ರಾಯವನ್ನು ಪಡೆದು ಮುಂದುವರೆಯುವುದು.

7. ಶಾಸಕರುಗಳ ಕಾಲಾವಧಿಯಲ್ಲಿ ತಮಗೆ ಹಿಂದಿದ್ದ ಸಂಪತ್ತು / ಆಸ್ತಿ ಎಷ್ಟಿದ್ದಿತು ಮತ್ತು ತಮ್ಮ ಒಂದು ಅವಧಿಯ ನಂತರ ಎಷ್ಟು ಹೆಚ್ಚಳವಾಗಿದೆ ಮುಂತಾದ ಅಂಶಗಳನ್ನು ಸ್ವಯಂ ಪ್ರೇರಣೆಯಿಂದ ಪ್ರಕಟಿಸುವುದು.

8. ಶಾಸನ ಸಭೆಯಲ್ಲಿ ಆಗಾಗ್ಗೆ ನಡೆಯುವ ಮಹತ್ವದ ಚರ್ಚೆಗಳು, ಪಕ್ಷದೊಳಗಿನ ಸಭೆಗಳು ಹಾಗೂ ಜನತಾ ಸಂಪರ್ಕ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ತಪ್ಪದೇ ಭಾಗವಹಿಸುವುದು.

9. ಆಯಾ ಸರ್ಕಾರಗಳು ರಚಿಸುವ ಶಾಸನಗಳ ಬಗ್ಗೆ ಸಂಬಂಧಿಸಿದ ಉಪನಿಯಮಗಳ ಬಗ್ಗೆ ಪ್ರಕಟಿಸುವ ಸುತ್ತೋಲೆಗಳನ್ನು ಕುರಿತು, ವಿಧಾನಮಂಡಳಗಳಲ್ಲಿ ಮಂಡಿಸುವ ವರದಿಗಳ ಬಗ್ಗೆ ಮತ್ತು ಸಾರ್ವಜನಿಕರಿಗೆ ಸಂಬಂಧಿಸಿದ ಸೇವಾ ಕಾರ್ಯಗಳ ಮಾಹಿತಿಗಳ ಬಗ್ಗೆ ಸದಾ ಸಂಪರ್ಕ ಸೇತುವೆಯಂತೆ ಕಾರ್ಯ ನಿರ್ವಹಿಸುವುದು. ಇದರಿಂದ ಅವರ ಜನತಾಪರವಾದ ನಿಲುವು, ಕರ್ತವ್ಯಗಳು ಮತ್ತು ಸಾಧನೆಗಳನ್ನು ಪಾರದರ್ಶಕವಾಗಿ ಎಲ್ಲರ ಮುಂದೆ ಇಟ್ಟಂತಾಗುತ್ತದೆ.

10. ಈ ಸಮಗ್ರ ಹಾಗೂ ಸಂಕ್ಷಿಪ್ತ ಚರ್ಚೆ ಕೆಲವೇ ವಿಷಯಗಳನ್ನು ಕುರಿತದ್ದಾಗಿದೆ. ಆದರೂ ನಮ್ಮ ಶಾಸಕರುಗಳು ಪ್ರಜಾಪ್ರಭುತ್ವ ಮತ್ತು ಸಂಸದೀಯತೆ (Parliamentary)ಯನ್ನು ತುರ್ತಾಗಿ ರಕ್ಷಿಸಿ, ಅದರ ಮೂಲಸ್ಥಾನ ಮತ್ತು ಕರ್ತವ್ಯಗಳನ್ನು ಪುನಃಶ್ಚೇತನಗೊಳಿಸಬೇಕಾಗಿದೆ. ಇಂತಹ ಪ್ರಯತ್ನ ನಿಜವಾದ ರೀತಿಯಲ್ಲಿ ಕಾರ್ಯರೂಪಕ್ಕೆ ಬಂದಲ್ಲಿ ಶಾಸಕರುಗಳು ತಮ್ಮ ಕರ್ತವ್ಯಗಳ ಬಗ್ಗೆ ಹಾಗೂ ಕ್ಷೀಣಿಸುತ್ತಿರುವ ಅದರ ಉಪಯುಕ್ತತೆಯ ಬಗ್ಗೆ ಪುನಃ ವಿಶ್ವಾಸ ಮೂಡಿಸುವ ಕೆಲಸ ಹಿಂದಿಗಿಂತಲೂ ಇಂದು ಅತಿ ಅಗತ್ಯವಾದುದು ಎನ್ನಬಹುದಾಗಿದೆ.

ಒಟ್ಟಿನಲ್ಲಿ ಪ್ರಜಾಪ್ರತಿನಿಧಿಗಳು / ಶಾಸಕರುಗಳ ಕೆಲಸ / ಜವಾಬ್ದಾರಿಯ ಕೆಲಸ ಕಾರ್ಯಗಳು ಕೇವಲ ಪ್ರಚಾರ, ಪ್ರಭಾವ ಮತ್ತು ಅಧಿಕಾರವನ್ನು ಕಬಳಿಸುವ ವಸ್ತುವಾಗಬಾರದು. ಅದರ ಬದಲು, ಪ್ರತಿಯೊಬ್ಬ ಶಾಸಕನು ಸೇವಾಮನೋಭಾವದಿಂದ ತಮ್ಮ ಪಾಲಿನ ಕರ್ತವ್ಯಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸುವಂತಾಗಬೇಕು. ಇದನ್ನು ಜನತೆ ಸ್ವಾಗತಿಸಿ ಅಂತಹ ಶಾಸಕರುಗಳನ್ನು ಹುರಿದುಂಬಿಸಿದಲ್ಲಿ, ಭಾರತದ ಪ್ರಜಾಸತ್ತೆಯೂ ನಿಜಕ್ಕೂ ಒಂದು ಶ್ರೇಷ್ಠ ಹಾಗೂ ಮಾದರಿ ವ್ಯವಸ್ಥೆಯಾಗುವುದರಲ್ಲಿ ಯಾವುದೇ ಅನುಮಾನವಿಲ್ಲ. ಪ್ರಜಾಪ್ರತಿನಿಧಿಗಳು ಸದಾ ಪ್ರಜಾಪ್ರಭುತ್ವವನ್ನು ಎತ್ತಿ ಹಿಡಿದಲ್ಲಿ ಮತ್ತು ಜನತೆಯ ಕನಿಷ್ಠ ಪೂರೈಕೆಗಳನ್ನು ಈಡೇರಿಸಿದಲ್ಲಿ, ನಮ್ಮ ಸ್ವಾತಂತ್ರ್ಯ ಸಂಗ್ರಾಮದ ಮುಂಚೂಣಿಯಲ್ಲಿದ್ದವರ ಆತ್ಮಕ್ಕೆ ನೆಮ್ಮದಿ ಸಿಕ್ಕು, ನಮ್ಮ ಬೃಹತ್ ಪ್ರಜಾಪ್ರಭುತ್ವ ಮತ್ತು ಸಂಸದೀಯ ವ್ಯವಸ್ಥೆಯ ಮೂಲಕ ಜನತೆಗೆ ಹೆಚ್ಚು ಲಾಭವಾಗುವುದು. ಇದು ಇಂದು ಪ್ರಥಮ ಆದ್ಯತೆಯ ಮೇಲೆ ಆಗಬೇಕೆಂದು ಮನಸಾರೆ ಆಶಿಸಬಹುದಾಗಿದೆ.

**– ಡಾ॥ ಚಂಬಿಪುರಾಣಿಕ್**
ರಾಜ್ಯಶಾಸ್ತ್ರದ (ನಿ.) ಪ್ರಾಧ್ಯಾಪಕ
ಮೈಸೂರು ವಿ.ವಿ. ಮತ್ತು ಡೀನ್ (ಶೈಕ್ಷಣಿಕ)
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ
ನಂ.347, 25ನೇ ಅಡ್ಡರಸ್ತೆ,
ಬನಶಂಕರಿ 2ನೇ ಹಂತ, ಬೆಂಗಳೂರು–560 –070
ಫೋನ್ : 080–32962760
ಮೊಬೈಲ್ : 093410–96998





# ಗಾಂಧೀಜಿಯ ಮೇಲೆ ಟಾಲ್‌ಸ್ಟಾಯ್ ಪ್ರಭಾವ

– ಡಾ. ಕರೀಗೌಡ ಬೀಚನಹಳ್ಳಿ

ಟಾಲ್‌ಸ್ಟಾಯ್ ಯುದ್ಧ, ಶಾಂತಿ, ಧರ್ಮವನ್ನು ಕುರಿತು ಅನೇಕ ಬಗೆಯಲ್ಲಿ ಮಂಥನ ನಡೆಸಿದ್ದಾನೆ. ಯುದ್ಧ ವಿರೋಧಿ ವಿಚಾರಧಾರೆಯನ್ನು ತನ್ನ ಕಾದಂಬರಿಗಳಲ್ಲಿ ಪ್ರತಿಪಾದಿಸಿ ಶಾಂತಿಯ ಸ್ಥಾಪನೆಗಾಗಿ ಪ್ರಯತ್ನಿಸಿದ್ದಾನೆ. ಮನುಷ್ಯ ತನಗಾಗಿ ಬದುಕಬಾರದು; ಇತರರಿಗಾಗಿ, ದೇವರಿಗಾಗಿ ಬದುಕಬೇಕು; ಏಸು ಕ್ರಿಸ್ತನ ಉಪದೇಶಗಳನ್ನು ಅರ್ಥಮಾಡಿಕೊಂಡು ಅವುಗಳನ್ನು ಅನುಷ್ಠಾನಕ್ಕೆ ತಂದು ಇತರರಿಗೂ ತಿಳಿಸಿಕೊಡಬೇಕೆಂದು – ಆ ನಿಟ್ಟಿನಲ್ಲಿ ಪ್ರಯತ್ನ ನಡೆಸಿದ್ದಾನೆ. ಇದರಿಂದಾಗಿ 'ನೀನು ಸೇವೆ ಸಲ್ಲಿಸಬೇಕಾದದ್ದು ನಿನ್ನ ಸಂಸಾರಕ್ಕಲ್ಲ, ದೇವರಿಗೆ' ಎಂದು ತನ್ನ ದಿನಚರಿಯಲ್ಲಿ ಬರೆದುಕೊಂಡಿದ್ದಾನೆ. ಒಂದು ಕಾಲಕ್ಕೆ ತನ್ನ ಜೀವಿತದ ಅವಧಿಯಲ್ಲಿಯೇ ಸರ್ಕಾರ ಮತ್ತು ಚರ್ಚ್‌ನ್ನು ತಾತ್ವಿಕ ಕಾರಣಗಳಿಂದಾಗಿ ವಿರೋಧಿಸಿದವನು; ಅದರಿಂದಾಗಿ ಆತ ಅವೆರಡರ ವಿರೋಧವನ್ನು ಕಟ್ಟಿಕೊಂಡು, ಚರ್ಚಿನಿಂದ ಬಹಿಷ್ಕಾರಕ್ಕೆ ಒಳಗಾದವನು. ತನ್ನ ವ್ಯಕ್ತಿತ್ವದಲ್ಲಿ ಆದ ಬದಲಾವಣೆಗಳಿಂದಾಗಿ ಅನೇಕ ಹಳ್ಳಿಗಳಿಗೆ ಭೇಟಿ ನೀಡಿದನು; ಮಾಸ್ಕೋನಗರದ ಕೊಳಗೇರಿಗಳಿಗೆ ಭೇಟಿ ಕೊಟ್ಟು, ಬಡಜನರೊಂದಿಗೆ ಬೆರೆತನು; ಯುದ್ಧ ಮತ್ತು ಮರಣದಂಡನೆಯನ್ನು ವಿರೋಧಿಸಿದನು. ಸೆರೆಮನೆಗಳಿಗೆ ಭೇಟಿ ಕೊಟ್ಟು ಕೈದಿಗಳ ಬದುಕನ್ನು ಕುರಿತು ಕಾದಂಬರಿ ಬರೆದನು. ರೈತರಿಗೆ ಆಗುತ್ತಿದ್ದ ಅನ್ಯಾಯಗಳನ್ನು ಪ್ರತಿಭಟಿಸಿದನು. ಆಸ್ತಿಯನ್ನೆಲ್ಲಾ ದಾನ ಮಾಡಿ ಬಡವರ ನಡುವೆ ಒಬ್ಬ ಸಾಮಾನ್ಯ ಮನುಷ್ಯನಂತೆ ಬದುಕಿದನು. ತನ್ನ ಹೆಂಡತಿ ಮಕ್ಕಳ ದುಂದು ವೆಚ್ಚವನ್ನು ವಿರೋಧಿಸಿದನು. ತನ್ನ ಶ್ರೀಮಂತಿಕೆಗೆ ದ್ಯೋತಕವಾದ ಬಟ್ಟೆಬರೆಗಳನ್ನು ತ್ಯಜಿಸಿ ಸಾಮಾನ್ಯರಂತೆ ಬಟ್ಟೆಧರಿಸಿ ಓಡಾಡಿದನು. 'ಕೌಂಟ್' ಎಂಬ ತನಗಿದ್ದ ಬಿರುದನ್ನು ತ್ಯಜಿಸಿದನು. ಚಮ್ಮಾರನ್ನೊಬ್ಬನಿಂದ ಕಲಿತು ತನ್ನ ಚಪ್ಪಲಿಗಳನ್ನು ತಾನೇ ಹೊಲಿದುಕೊಂಡನು. ಸಿಗರೇಟ್ ಸೇದುವುದನ್ನೂ, ಮದ್ಯಪಾನ ಮಾಡುವುದನ್ನೂ ಬಿಟ್ಟನು. ತನ್ನ ಕೃತಿಗಳನ್ನು ಯಾರು ಬೇಕಾದರೂ ಪ್ರಕಟಿಸಿಕೊಳ್ಳಬಹುದೆಂದು ಅವುಗಳ ಮೇಲಿನ ಲೇಖಕನ ಹಕ್ಕನ್ನು ಬಿಟ್ಟುಕೊಟ್ಟನು. "ರಷ್ಯಕ್ಕೆ ಇಬ್ಬರು ಚಕ್ರವರ್ತಿಗಳಿದ್ದಾರೆ; ಅರಸು ಮನೆತನದ ಚಕ್ರವರ್ತಿ ಒಬ್ಬ; ಇನ್ನೊಬ್ಬ ಲೇಖಕ ಟಾಲ್‌ಸ್ಟಾಯ್" ಎಂಬ ಜನಜನಿತವಾದ ಎತ್ತರಕ್ಕೆ ಆತ ಬೆಳೆದನು. ಬಡ ರೈತನಂತೆ ವೇಷ ಮರೆಸಿಕೊಂಡು ಬಡಬಗ್ಗರ ಜೊತೆ, ಕಾರ್ಮಿಕರ ಜೊತೆ, ಒಬ್ಬಂಟಿಗಳ ಜೊತೆ ಯಾವ ಸಂಕೋಚವೂ ಇಲ್ಲದೆ ನಿರ್ಭಿಡೆಯಿಂದ ಬೆರೆತನು. ಹಣ, ಆಸ್ತಿ ಬಗ್ಗೆ ತಿರಸ್ಕಾರ ತಾಳಿದನು. ದೇಹ ನಶ್ವರ, ಆತ್ಮ ಅಮರ ಎಂಬ ದಾರ್ಶನಿಕತೆಯ ಕಡೆ ನಡೆದನು. ಮನುಷ್ಯ ಏಕೆ ಬದುಕಬೇಕು? ಹೇಗೆ ಬದುಕಬೇಕು; ಬದುಕಿನ ಅರ್ಥ ಎಂದರೇನು? ಬದುಕನ್ನು ಅರ್ಥಪೂರ್ಣಗೊಳಿಸುವುದು ಹೇಗೆ? – ಎಂಬ ಮೂಲಭೂತ ಪ್ರಶ್ನೆಗಳನ್ನು ಕೇಳಿಕೊಂಡನು. ಈ ಎಲ್ಲಾ ಪ್ರಶ್ನೆಗಳಿಗೆ ತನ್ನ ಸಾಹಿತ್ಯದಲ್ಲಿ ತಾತ್ವಿಕವಾದ ಹುಡುಕಾಟ, ಜಿಜ್ಞಾಸೆಯನ್ನು ನಡೆಸಿದನು. ತನ್ನ ಇಳಿಗಾಲದ ಬದುಕಿನ ದಿನಗಳಲ್ಲಿ ಕ್ರೈಸ್ತ ಧರ್ಮಕ್ಕೆ ಒಲಿದು ಅದರಲ್ಲಿನ ಅಧ್ಯಾತ್ಮಿಕ ತಾತ್ವಿಕ ನೆಲೆಗಳನ್ನು ಅರ್ಥಮಾಡಿಕೊಂಡನು. ಇದರಿಂದ ಹೆಂಡತಿ ಸೋನಿಯಾಗೆ ಎಷ್ಟು ಆಶ್ಚರ್ಯವಾಯ್ತು ಎಂದರೆ ಆಕೆ, 'ಇದೆಲ್ಲ ಕ್ರೈಸ್ತ ಧರ್ಮವು ನಮ್ಮ ಮನೆಯೊಳಗೆ ಪ್ರವೇಶಿಸಿದ್ದರ ಪರಿಣಾಮ. ಕ್ರೈಸ್ತ ಧರ್ಮವೇ ಇಲ್ಲದಿದ್ದರೆ ಚೆನ್ನಾಗಿತ್ತು" ಎಂದು ತನ್ನ ಸೋದರಿಗೆ ಬರೆದ ಪತ್ರದಲ್ಲಿ ತಿಳಿಸಬೇಕಾಗಿ ಬಂತು. ಆಕೆ ತನ್ನ ಜೀವನದುದ್ದಕ್ಕೂ ಅನೇಕ ಕಷ್ಟಗಳನ್ನು ಅವನಿಂದ ಅನುಭವಿಸಿದಳು. ಇಬ್ಬರಿಗೂ ಅಗಾಧವಾದ ವಯಸ್ಸಿನ ಅಂತರವಿತ್ತು. ಜೊತೆಗೆ ಅತಿಯಾದ ಮಕ್ಕಳು, ಅವುಗಳ ವಿದ್ಯಾಭ್ಯಾಸದ ಬಗ್ಗೆ ಆಕೆಯೇ ಜವಾಬ್ದಾರಿ ವಹಿಸಬೇಕಾಗಿ ಬಂತು. ಅದರಿಂದ ಆಕೆಗೆ ಟಾಲ್‌ಸ್ಟಾಯ್ ಮೇಲೆ ತುಂಬಾ ಸಿಟ್ಟಿತ್ತು. ಅವನ ಆಸ್ತಿ ಹಾಗೂ ಕೃತಿಗಳ ಹಕ್ಕಿಗಾಗಿ ಆಕೆ ಹೋರಾಡಬೇಕಾಗಿ ಬಂತು. ಆದರೂ ಟಾಲ್‌ಸ್ಟಾಯ್‌ನ ಪ್ರತಿಭೆಯ ಬಗ್ಗೆ, ಅವನ ಸಾಮರ್ಥ್ಯದ ಬಗ್ಗೆ ಅವಳಿಗೆ ಅಗಾಧ ಗೌರವವಿತ್ತು. ತನ್ನ ಗಂಡ ಟಾಲ್‌ಸ್ಟಾಯ್‌ನ 80ನೇ



ವರ್ಷದ ಹುಟ್ಟುಹಬ್ಬದ ಸಂದರ್ಭದಲ್ಲಿ ಒಂದು ಮಾತನ್ನು ಹೇಳಿದಳು : "ನಮ್ಮ ವೈವಾಹಿಕ ಜೀವನದುದ್ದಕ್ಕೂ ನಾನು ಟಾಲ್‌ಸ್ಟಾಯ್‌ನ ಪ್ರತಿಭೆಯನ್ನೂ, ದೃಢಸಂಕಲ್ಪವನ್ನೂ ಮೆಚ್ಚಿದ್ದೇನೆ. ಆತನ ಎತ್ತರಕ್ಕೆ ಏರಲು ನನ್ನಿಂದ ಸಾಧ್ಯವಾಗಲಿಲ್ಲ. ಆದರೆ ನನ್ನ ಪ್ರೇಮದಿಂದ ಅವನನ್ನು ಸುಖಿಯಾಗಿ ಮಾಡಲು ಆತ್ಮ ಪೂರ್ವಕವಾಗಿ ಶ್ರಮಿಸಿದ್ದೇನೆ." ಈ ಮಾತು ನಿಜ. ಆಕೆ ತನ್ನ ಕರ್ತವ್ಯವನ್ನು ಪ್ರಾಮಾಣಿಕವಾಗಿ ಮಾಡಿದ್ದಾಳೆ; ಟಾಲ್‌ಸ್ಟಾಯ್‌ನ ದೃಢ ಸಂಕಲ್ಪದ ಹುಚ್ಚು ಮನಸ್ಸುಗಳಿಗೆಲ್ಲಾ ಆಕೆ ಮೌನವಹಿಸಿದ್ದಾಳೆ. ಕೆಲವೊಮ್ಮೆ ಪ್ರತಿಭಟಿಸಿ ಅಸಹಾಯಕಳಾಗಿ ಸುಮ್ಮನಾಗಿದ್ದಾಳೆ.

ಯುದ್ಧ, ಧರ್ಮ, ಶಾಂತಿ– ಟಾಲ್‌ಸ್ಟಾಯ್‌ನ ಈ ಬಗೆಗಿನ ಪರಿಕಲ್ಪನೆಗಳಿಗಿಂತ ಆತನ ನೈತಿಕ, ರಾಜಕೀಯ ಮತ್ತು ಸಾಮಾಜಿಕ ವಿವಾದಗಳ ಬಗ್ಗೆ ಕುರಿತು ನಡೆಸಿರುವ ಮತ್ತು ಬರೆದಿರುವ ವಿಚಾರಧಾರೆಗಳು ಸದಾ ಕಾಲಕ್ಕೂ ಪ್ರಸ್ತುತವೆನ್ನಿಸಿವೆ; ಮತ್ತು ಅತ್ಯಂತ ತೀಕ್ಷ್ಣವಾಗಿವೆ. ಟಾಲ್‌ಸ್ಟಾಯ್‌ನ 'ಅಪ್ರತಿರೋಧ ಸಿದ್ಧಾಂತ' (ನಾನ್‌ರೆಸಿಸ್ಟೆನ್ಸ್) ಏನಿದೆ ಅದು ತುಂಬಾ ಪ್ರಸಿದ್ಧ ಮತ್ತು ಪರಿಣಾಮಕಾರಿಯಾದುದಾಗಿದೆ. ಗಾಂಧೀಜಿ ಅವರು ತಮ್ಮ 'ಸತ್ಯಾಗ್ರಹ ಸಿದ್ಧಾಂತ'ದ ರೂಪರೇಷೆಗಳನ್ನು ಸ್ಪಷ್ಟಪಡಿಸಿಕೊಳ್ಳುವಾಗ ಮತ್ತು ನಿರ್ದಿಷ್ಟವಾಗಿ ರೂಪಿಸಿಕೊಳ್ಳುವಾಗ ಟಾಲ್‌ಸ್ಟಾಯ್‌ನ ಈ ಸಿದ್ಧಾಂತ ನೆರವಿಗೆ ಬಂತೆಂದು ಗಾಂಧೀಜಿ ಅವರು ತಮ್ಮ ಆತ್ಮಚರಿತ್ರೆಯಲ್ಲಿ ಹೇಳಿಕೊಂಡಿದ್ದಾರೆ. ಆದರೆ ಟಾಲ್‌ಸ್ಟಾಯ್‌ಗೆ ಈ ಸಿದ್ಧಾಂತವನ್ನು ರೂಪಿಸಿಕೊಳ್ಳಲು ಅವನಿಗೆ 'ಮ್ಯಾಥ್ಯೂ ಸುವಾರ್ತೆ'ಯೇ ಆಕರವಾಗಿತ್ತೆಂದು ತಿಳಿದುಬರುತ್ತದೆ. ಈ 'ಅಪ್ರತಿರೋಧ ಸಿದ್ಧಾಂತ'ವನ್ನು ಸ್ಥೂಲವಾಗಿ ಹೇಳುವುದಾದರೆ, "ಯಾರೇ ಆಗಲೀ ತನಗಿಷ್ಟವಾದುದ್ದನ್ನು ಮಾಡದಂತೆ ತಡೆಯಲು, ತನಗೆ ಬೇಡವಾದುದನ್ನು ಮಾಡುವಂತೆ ಒತ್ತಾಯಿಸಲು ಶಾರೀರಿಕ ಹಿಂಸೆಯನ್ನು ಬಳಸಬಾರದು" –ಎಂಬುದೇ ಇದರ ತಾತ್ತ್ವಿಕ ನಿಲುವಾಗಿದೆ. "ಜಗತ್ತಿನ ಶಾಂತಿಗೆ ಪ್ರೇಮವೊಂದೇ ಮದ್ದು; ಕೇಡನ್ನು ಪ್ರತಿರೋಧಿಸದೆ ಕ್ಷಮೆ ತೋರಿದಾಗ ಶುದ್ಧ ಪ್ರೇಮ ಸಿದ್ಧಿಸುತ್ತದೆ" –ಎಂಬುದು ಟಾಲ್‌ಸ್ಟಾಯ್‌ನ ತತ್ತ್ವ ಸಂದೇಶವಾಗಿದೆ. ಮಹಾತ್ಮ ಗಾಂಧೀಜಿ ಅವರು ಈ ತತ್ತ್ವವನ್ನು ತಮ್ಮ ಜೀವನದ ಹೋರಾಟದ ಪ್ರತಿಕ್ಷಣದಲ್ಲಿಯೂ ಅನುಸರಿಸುತ್ತ ಬಂದಿದ್ದು ಚರಿತ್ರೆಯಿಂದ ಗಾಂಧೀಜಿ ಅವರು ಕ್ಷಮೆ ತೋರಿದಾಗ ಶುದ್ಧ ಪ್ರೇಮ ಹೋರಾಟದ ಪ್ರತಿಕ್ಷಣದಲ್ಲಿಯೂ ಅನುಸರಿಸುತ್ತಾ ಬಂದಿದ್ದು ಚರಿತ್ರೆಯಿಂದ ತಿಳಿದುಬರುತ್ತದೆ.

ಸಾಮಾಜಿಕ ವಿಷಯಗಳ ಬಗ್ಗೆ ಗಾಢವಾಗಿ ಅನುಭವಿಸಿ, ಚಿಂತಿಸಿ ಬರೆದ ಟಾಲ್‌ಸ್ಟಾಯ್‌ನ ಬರಹಗಳು / ಪ್ರಬಂಧಗಳು ಇಂದಿಗೂ ಪ್ರಸ್ತುತ ಮತ್ತು ಪರಿಣಾಮಕಾರಿಯಾಗಿವೆ. ಅವುಗಳಲ್ಲಿ 'ದೇವರ ರಾಜ್ಯ ನಿಮ್ಮೊಳಗೇ ಇದೆ', 'ನಾ ಸುಮ್ಮನಿರಲಾರೆ', 'ಮಾಡಬೇಕಾದ್ದೇನು? 'ಮನುಷ್ಯರು ಮತ್ತನ್ನು ಬರಿಸಿಕೊಳ್ಳವುದೇಕೆ?' –ಎಂಬ ಈ ಪ್ರಬಂಧಗಳಲ್ಲಿ ವ್ಯಕ್ತವಾಗುವ ಟಾಲ್‌ಸ್ಟಾಯ್‌ನ ವಿಚಾರಧಾರೆಯನ್ನು ಇಲ್ಲಿ ಪರಿಶೀಲಿಸಬಹುದಗಿದೆ.

ಭಾರತದಲ್ಲಿ ಹಿಂಸಾಪಥಕ್ಕೆ ಉತ್ತರವಾಗಿ 1908ರಲ್ಲಿ ಮಹಾತ್ಮ ಗಾಂಧೀಜಿಯವರು ಬರೆದ 'ಹಿಂದ್ ಸ್ವರಾಜ್ಯ' ಕೃತಿಗೆ ಪ್ರೇರಣೆಯನ್ನು ನೀಡಿದ ಹಲವಾರು ಕೃತಿಗಳಲ್ಲಿ ಜಾನ್ ರಷ್ಕಿನ್‌ನ 'ಅನ್‌ಟು ದಿಸ್ ಲಾಸ್ಟ್' ಮತ್ತು ಟಾಲ್‌ಸ್ಟಾಯ್‌ನ 'ದಿ ಕಿಂಗ್‌ಡಮ್ ಆಫ್ ಗಾಡ್ ಈಸ್ ಹೆವೆನ್ ವಿತ್ತಿನ್ ಯು' ಎರಡು ಕೃತಿಗಳು ಬಹು ಮುಖ್ಯ ಆಧಾರ ಗ್ರಂಥಗಳಾಗಿವೆ. ಗಾಂಧೀಜಿ ರಷ್ಕಿನ್‌ನ ವಿಚಾರಗಳಿಂದ ಎಷ್ಟು ಪ್ರಭಾವಿತರಾದರು ಎಂದರೆ, 'ಅನ್ ಟು ದಿಸ್ ಲಾಸ್ಟ್' ಕೃತಿಯನ್ನು 'ಸರ್ವೋದಯ' ಎಂಬ ಹೆಸರಿನಿಂದ ಗುಜರಾತಿ ಭಾಷೆಗೆ ಅನುವಾದಿಸಿ 1908ರಲ್ಲಿ ಪ್ರಕಟಿಸುತ್ತಾರೆ. ನಂತರ ಅದನ್ನು ಇಂಗ್ಲೀಷ್ ಭಾಷೆಗೂ ಅನುವಾದಿಸಿ ಪ್ರಕಟಿಸಿದರು. ಹಾಗೆಯೇ ಟಾಲ್‌ಸ್ಟಾಯ್‌ನ ಅನೇಕ ವಿಚಾರಗಳಿಂದ ಗಾಂಧೀಜಿ ಪ್ರಭಾವಿತರಾಗಿದ್ದಾರೆ. 1908ರಲ್ಲಿ ಟಾಲ್‌ಸ್ಟಾಯ್ ಜೊತೆ ಗಾಂಧೀಜಿ ಪತ್ರ ವ್ಯವಹಾರ ಸಹ ಮಾಡಿದ್ದಾರೆ. ತಮ್ಮೊಳಗೆ ಇನ್ನೂ ಅಸ್ಪಷ್ಟವಾಗಿ ರೂಪುಗೊಳ್ಳುತ್ತಿದ್ದ 'ಸತ್ಯಾಗ್ರಹ'ದ ಪರಿಕಲ್ಪನೆಗೆ ಸ್ಪಷ್ಟ ರೂಪ ಬಂದದ್ದು ಟಾಲ್‌ಸ್ಟಾಯ್‌ನ ಕೆಲವು ಬರಹಗಳನ್ನು ಓದಿದ ಮೇಲೆ ಎಂದು ಗಾಂಧೀಜಿಯವರೇ ಸ್ವತಃ ತಮ್ಮ 'ಆತ್ಮ ಚರಿತ್ರೆ'ಯಲ್ಲಿ ಬರೆದುಕೊಂಡಿದ್ದಾರೆ. ಹಾಗೆಯೇ ತಮ್ಮ 'ಆತ್ಮ ಚರಿತ್ರೆ'ಯಲ್ಲಿ ರಷ್ಕಿನ್‌ನ 'ಅನ್‌ಟು ದಿಸ್ ಲಾಸ್ಟ್' ಕೃತಿಯ ಪ್ರೇರಣೆ, ಮಹತ್ವ ಮತ್ತು ಅದರಿಂದ ತಾವು 'ಸರ್ವೋದಯ' ತತ್ವಗಳನ್ನು ರೂಪಿಸುವಲ್ಲಿ ಅನುಸರಿಸಿದ ಮಾರ್ಗವನ್ನು ಕುರಿತು ಬರೆದಿದ್ದಾರೆ. ಗಾಂಧೀಜಿಯವರ



ಮೇಲೆ ತುಂಬಾ ಪ್ರಭಾವ ಬೀರಿದ ಟಾಲ್‌ಸ್ಟಾಯ್ ಅವರ ಈ – 'ದಿ ಕಿಂಗ್‌ಡಂ ಆಫ್ ಗಾಡ್ ಈಸ್ ಹೆವೆನ್ ವಿತ್ತಿನ್ ಯು' – 'ದೇವರ ರಾಜ್ಯ ನಿಮ್ಮೊಳಗೆ ಇದೆ' ಎಂಬ ಪ್ರಬಂಧವು ಹಿಂಸೆಯ ಸ್ವರೂಪ ಮತ್ತು ಶಕ್ತಿಯನ್ನು ಪ್ರತಿಪಾದಿಸುತ್ತದೆ.

## ದೇವರ ರಾಜ್ಯ ನಿಮ್ಮೊಳಗೇ ಇದೆ

**(ದಿ ಕಿಂಗ್‌ಡಂ ಆಫ್ ಗಾಡ್ ಈಸ್ ಹೆವೆನ್ ವಿತ್ತಿನ್ ಯು)**

ಮಹಾತ್ಮ ಗಾಂಧೀಜಿ ಅವರ ಮೇಲೆ ತುಂಬಾ ಪ್ರಭಾವ ಬಿರಿದ ಟಾಲ್‌ಸ್ಟಾಯ್ ಅವರ 'ದೇವರ ರಾಜ್ಯ ನಿಮ್ಮೊಳಗೇ ಇದೆ' (ದಿ ಕಿಂಗ್‌ಡಂ ಆಫ್ ಗಾಡ್ ಈಸ್ ಹೆವೆನ್ ವಿತ್ತಿನ್ ಯು) ಎಂಬ ಬರಹ ಹತ್ತೊಂಬತ್ತನೆಯ ಶತಮಾನದ ಜಮೀನ್ದಾರರ ಮತ್ತು ಸಾಮಾನ್ಯ ರೈತರ ನಡುವಿನ ಶೋಷಣೆಯ ಮುಖಗಳನ್ನು, ಕಿರುಕುಳದ ಸಂಗತಿಗಳನ್ನು ಹಾಗೂ ಹಿಂಸೆಯ ಕರಾಳತೆಯನ್ನು ಹೃದಯ ವಿದ್ರಾವಕವಾಗಿ ಚಿತ್ರಿಸುತ್ತದೆ. ಟಾಲ್‌ಸ್ಟಾಯ್ ಅವರು 1892ರ ಸೆಪ್ಟೆಂಬರ್ 9ರಂದು ರಷ್ಯಾದ ಟೂಲ ಮತ್ತು ರೈಜಾನ್ ಜಿಲ್ಲೆಗಳಲ್ಲಿ ರೈಲು ಪ್ರಯಾಣ ಮಾಡುತ್ತಿದ್ದಾಗ ತಾವು ಕಂಡ ಒಂದು ಘಟನೆಯನ್ನು ಈ ಬರಹದಲ್ಲಿ ನಿರೂಪಿಸುತ್ತಾರೆ. ಆ ಜಿಲ್ಲೆಗಳು ಅದರ ಹಿಂದಿನ ವರ್ಷ ಭೀಕರ ಕ್ಷಾಮಕ್ಕೆ ಬಲಿಯಾಗಿ ತತ್ತರಿಸಿ ಹೋಗಿರುತ್ತವೆ; ಈ ವರ್ಷವೂ ಅದರ ಪರಿಣಾಮ ಇನ್ನೂ ಅಲ್ಲಿ ಉಗ್ರವಾಗಿರುತ್ತದೆ. ಆ ಸಂದರ್ಭದಲ್ಲಿ ಅಲ್ಲಿನ ಒಂದು ಸ್ಟೇಷನ್ನಿನಲ್ಲಿ ಆ ಸಂಸ್ಥಾನದ ಗೌರ್ನರನ ನೇತೃತ್ವದಲ್ಲಿ ಸೈನಿಕ ಪಡೆಯೊಂದು ಒಂದು ರೈಲಿನಲ್ಲಿ ಹೊರಟಿದ್ದನ್ನು ಟಾಲ್‌ಸ್ಟಾಯ್ ಕಂಡು ವಿಚಾರಿಸುತ್ತಾರೆ. ಆ ಸೈನಿಕ ಪಡೆ ಬಂದೂಕಗಳು, ಈಟಿಗಳು, ದೊಣ್ಣೆಗಳು, ಮದ್ದು ಗುಂಡುಗಳು ಮೊದಲಾದ ಯುದ್ಧ ಸಾಮಗ್ರಿಗಳನ್ನು ತುಂಬಿಕೊಂಡು ಹೊಟ್ಟೆಗಿಲ್ಲದೆ ನರಳುತ್ತಿದ್ದ ರೈತರನ್ನು ಹಿಡಿದು ಬಡಿದು ಕೊಲ್ಲುವುದಕ್ಕಾಗಿ ಹೊರಟಿದೆ ಎಂದು ಗೊತ್ತಾಗಿ ಟಾಲ್‌ಸ್ಟಾಯ್ ಮರುಗುತ್ತಾರೆ. ಕ್ರೈಸ್ತ ತತ್ತ್ವದಿಂದ ಪ್ರಭಾವಿತರಾದ ಈ ದಯಾಳು ಸೈನಿಕರು ಹಸಿವಿನಿಂದ ನರಳುತ್ತಿರುವ ತಮ್ಮ ಸೋದರ ಬಡಪಾಯಿ ರೈತರನ್ನು ಬಡಿದು ಕೊಲ್ಲುವುದಕ್ಕಾಗಿ ಹೊರಟಿರುವ ಆ ದೃಶ್ಯವನ್ನು ಟಾಲ್‌ಸ್ಟಾಯ್ ಕಂಡು ಅದಕ್ಕೆ ಟಾಲ್‌ಸ್ಟಾಯ್ ಕಾರಣಗಳನ್ನು ಗುರುತಿಸುತ್ತಾರೆ.

ಒಬ್ಬ ಶ್ರೀಮಂತ ಜಮೀನುದಾರನ ಎಸ್ಟೇಟಿನಲ್ಲಿ ರೈತರು ಮರದ ತೋಪು ಬೆಳೆಸಿದ್ದು, ಅದನ್ನು ರೈತರು ತಮ್ಮ ಉಪಯೋಗಕ್ಕೆ ಬಳಸಿಕೊಳ್ಳುತ್ತಿರುತ್ತಾರೆ. ಆದ್ದರಿಂದ ಅದು ತಮಗೇ ಸೇರಿದ್ದೆಂದು ಅಥವಾ ಅದರಲ್ಲಿ ತಮಗೆ ಸಮಾನ ಹಕ್ಕು ಇದೆಯೆಂದು ಭಾವಿಸಿರುತ್ತಾರೆ. ಆದರೆ ಆ ಜಮೀನುದಾರ ಆ ತೋಪನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡು ಅಲ್ಲಿ ರೈತರು ಬೆಳೆದಿದ್ದ ಮರಗಳನ್ನೆಲ್ಲಾ ಕಡಿಸಲು ಆರಂಭಿಸಿರುತ್ತಾನೆ. ಆಗ ರೈತರು ನ್ಯಾಯಾಲಕ್ಕೆ ದೂರು ಸಲ್ಲಿಸುತ್ತಾರೆ. ಆದರೆ ನ್ಯಾಯಾಧೀಶರು ಶ್ರೀಮಂತ ಜಮೀನುದಾರರ ಪರವಾಗಿಯೇ ತೀರ್ಪು ನೀಡಿರುತ್ತಾರೆ. ಕೋರ್ಟು ಸಹ ಶ್ರೀಮಂತ ಜಮೀನುದಾರರ ಪರವಾಗಿ ಇದ್ದದ್ದು ಎಲ್ಲರಿಗೂ ತಿಳಿದಿರುತ್ತದೆ.

ಇದರಿಂದ ಜಮೀನುದಾರ ಮತ್ತೆ ಮರಗಳನ್ನು ಕಡಿಯತೊಡಗುತ್ತಾನೆ. ಆದರೆ ಮೇಲಾಧಿಕಾರಿಗಳಿಂದ ತಮಗೆ ಅನ್ಯಾಯವಾಗುತ್ತದೆಂದು ನಂಬಿದ್ದ ರೈತರು ಆ ತೀರ್ಪಿಗೆ ಬೆಲೆ ಕೊಡದೆ, ಆ ತೋಪು ಈಗಲೂ ತಮಗೇ ಸೇರಿದ್ದೆಂದು ಘೋಷಿಸಿ, ಈ ದೂರನ್ನು ದೊರೆಯ ತನಕ ತೆಗದುಕೊಂಡು ಹೋಗುತ್ತಾರೆ. ಮರ ಕಡಿಯಲು ಬಂದಿದ್ದ ಜಮೀನುದಾರನ ಕಡೆಯ ಕೆಲಸಗಾರರನ್ನೆಲ್ಲಾ ರೈತರು ಓಡಿಸುತ್ತಾರೆ. ಈ ಸುದ್ದಿ ಪೀಟರ್ಸ್‌ಬರ್ಗ್‌ವರೆಗೆ ಮುಟ್ಟಿ, ನ್ಯಾಯಾಲಯದ ತೀರ್ಪನ್ನು ಕಡ್ಡಾಯವಾಗಿ ಜಾರಿಗೆ ತರಬೇಕೆಂದು ಗೌರ್ನರನಿಗೆ ಸೂಚನೆ ಹೋಗುತ್ತದೆ. ಅಗ ಗೌರ್ನರ್ ಅದಕ್ಕೆ ಸೈನಿಕರ ನೆರವು ಕೇಳಿದ್ದರಿಂದ ಆ ಸೈನಿಕ ಪಡೆ ಮೇಲಾಧಿಕಾರಿಗಳ ಆಜ್ಞೆಯನ್ನು ಜಾರಿಗೆ ತರುವುದಕ್ಕಾಗಿ ಯುದ್ಧ ಸನ್ನದ್ಧರಾಗಿ ಹೊರಟಿರುವುದನ್ನು ತಿಳಿದ ಟಾಲ್‌ಸ್ಟಾಯ್ ಅಂತಹ ಘಟನೆಗಳು ದಿನಬೆಳಗಾದರೆ ರಷ್ಯಾದಲ್ಲಿ ನಡೆಯುತ್ತಿರುವುದನ್ನು ಕಣ್ಣಾರೆ ಕಂಡು, ಮನಸಾರೆ ನೆನೆದು ಕೊರಗುತ್ತಾನೆ.

ರಾಜ್ಯ ವ್ಯವಸ್ಥೆ ಮತ್ತು ಖಾಸಗಿ ಆಸ್ತಿಗಳಿರುವ ಯಾವುದೇ ದೇಶದಲ್ಲಿ ರೈತರು ಪ್ರತಿಭಟಿಸಿದರೆ ಅಧಿಕಾರಶಾಹಿ ಅದನ್ನು ಪ್ರತಿಭಟಿಸಲು ಮಿಲ್ಟ್ರಿ ಅಥವಾ ಸೈನಿಕ ಕ್ರಮವನ್ನು ಅನುಸರಿಸುತ್ತಾ ಬಂದಿರುವುದು ಇತಿಹಾಸದಿಂದ ತಿಳಿದುಬರುತ್ತದೆ. ರಷ್ಯಾದಲ್ಲಿ ಆದದ್ದೂ ಇದೇ; ಮೊದಲು ಸೇನಾ ಮುಖಂಡ ನಯವಾಗಿ ಭಾಷಣ ಮಾಡಿ ಪ್ರತಿಭಟನಕಾರರನ್ನು ಶರಣಾಗುವಂತೆ ಕೋರುತ್ತಾನೆ. ಆಗ ಆ ಉದ್ರಿಕ್ತ ಜನ ಶರಣಾಗದಿದ್ದರೆ ಗೌವ್ನರನು ತನ್ನ ಅಧಿಕಾರ ಚಲಾಯಿಸುತ್ತಾನೆ. ಅಲ್ಲಿಗೂ ಜನರು ಚದುರದಿದ್ದರೆ ಬಂದೂಕಗಳಿಗೆ ಚಾಲನೆ ನೀಡಲು



ಸೈನಿಕರಿಗೆ ಆಜ್ಞಾಪಿಸುತ್ತಾನೆ. ಸತ್ತ ಜನ, ಗಾಯಗೊಂಡ ಜನ ರಸ್ತೆಯಲ್ಲಿ ಉರುಳುತ್ತಾರೆ, ಉಳಿದವರು ಭಯದಿಂದ ಓಡಿಹೋಗುತ್ತಾರೆ. ಗೌರ್ನರನ ಆಜ್ಞೆಯಂತೆ ಸೈನಿಕರು ಪ್ರತಿಭಟನಕಾರರ ಮುಖಂಡರನ್ನು ಹಿಡಿದುಕೊಂಡು ಹೋಗುತ್ತಾರೆ. ಈ ದೌರ್ಜನ್ಯಕ್ಕೆ ಗುರಿಯಾದವರಲ್ಲಿ ರೈತರು, ರೈತರ ಹೆಂಗಸರೂ ಮತ್ತು ಮಕ್ಕಳೂ ಸೇರಿರುತ್ತಾರೆ. ಹಿಡಿದುಕೊಂಡು ಹೋದ ಮುಖಂಡರನ್ನು ಮಿಲ್ಟ್ರಿ ಕೋರ್ಟಿನಲ್ಲಿ ವಿಚಾರಣೆ ಮಾಡಿ, ಅವರು ಹಿಂಸೆಯಲ್ಲಿ ಪಾಲ್ಗೊಂಡವರೆಂದು ನಿಜವಾದರೆ, ಅವರನ್ನು ನೇಣು ಹಾಕಬೇಕೆಂದು ತೀರ್ಪು ನೀಡಲಾಗುತ್ತದೆ. ಇದು ರಷ್ಯಾದಲ್ಲಿ ಮಾತ್ರವಲ್ಲ, ಹಿಂಸೆಯ ಮೇಲೆ ಕಟ್ಟಿದ ವ್ಯವಸ್ಥೆಯುಳ್ಳ ಯಾವುದೇ ದೇಶದಲ್ಲಿ ಸಾಮಾನ್ಯವಾದ ಸಂಗತಿ ಎಂದು ಟಾಲ್‌ಸ್ಟಾಯ್ ಅಭಿಪ್ರಾಯಪಡುತ್ತಾರೆ. ಜನರು ತಮ್ಮ ಹಕ್ಕುಗಳಿಗೆ ನಡೆಸಿದ ಹೋರಾಟಕ್ಕೆ, ಪ್ರತಿಭಟನೆಗೆ ಸಿಗುವ ಪರಿಣಾಮ ಇದು.

ಒಂದು ವೇಳೆ ಪ್ರತಿಭಟನಕಾರರು ಸೈನ್ಯಕ್ಕೆ ಶರಣಾದರೆ, ರಷ್ಯಾಕ್ಕೇ ವಿಶಿಷ್ಟವಾದ ಪದ್ಧತಿ ಎಂಬಂತೆ ಆಚರಣೆಯಲ್ಲಿದೆ. ಗೌರ್ನರ್ ಶರಣಾದ ರೈತರ ಮನೆಯಲ್ಲಿ ಒಬ್ಬೊಬ್ಬ ಸೈನಿಕರನ್ನು ಇರಲು ಹೇಳುತ್ತಾನೆ. ಅಗ ರೈತರು ಎಷ್ಟೇ ಕಷ್ಟವಾದರು ತಿಂಗಳಾನುಗಟ್ಟಲೆ ಆ ಸೈನಿಕರನ್ನು ಸಾಕಬೇಕು. ಇಲ್ಲದಿದ್ದರೆ ಮುಖಂಡರಿಗೆ ಬೆದರಿಕೆ ಹಾಕಿ ಕ್ಷಮಿಸಿ ಹೊರಟು ಹೋಗುತ್ತಾನೆ; ಅಥವಾ ಯಾವ ವಿಚಾರಣೆಯೂ ಇಲ್ಲದೆ ತಮಗೆ ತೋಚಿದ ಹಾಗೆ ಮುಖಂಡರನ್ನು ಹಿಡಿಸಿ ತನ್ನ ಎದುರಿಗೇ ಅವರಿಗೆ ಛಡಿ ಏಟಿನ ಶಿಕ್ಷೆ ವಿಧಿಸಿ ಹೋಗುತ್ತಾನೆ. ಇದು ರಷ್ಯಾದಲ್ಲಿ ಪ್ರತಿಭಟನಕಾರರನ್ನು ಮೇಲಾಧಿಕಾರಿಗಳು ನಡೆಸಿಕೊಳ್ಳುವ ರೀತಿ.

ಟಾಲ್‌ಸ್ಟಾಯ್ ಇಂತಹ ಘಟನೆಗೆ ಪೂರಕವಾಗಿ ತಾವು ಹಿಂದೆ ಒಮ್ಮೆ ಕಣ್ಣಾರೆ ಕಂಡ ಒಂದು ಘಟನೆಯನ್ನು ವಿವರಿಸುತ್ತಾರೆ. ಜಮೀನ್ದಾರರು ಹೇಳಿದಂತೆ ರೈತರು ಕೇಳಿದಿದ್ದರೆ ಅವರಿಗೆ ಕಿರುಕುಳ ಕೊಡುವುದು, ಅಧಿಕಾರಶಾಹಿ ಅವರನ್ನು ಬಡಿದು ಹಿಂಸಿಸಿ ಸಾಯಿಸುವುದು, ಸೈನ್ಯಕ್ಕೆ ಒಪ್ಪಿಸಿ ಅವರಿಂದ ಕೊಲ್ಲಿಸುವುದು, ಇದಕ್ಕೆಲ್ಲಾ ಕಾಯಿದೆ, ಕಾನೂನು, ಸರ್ಕಾರ ಶಾಮೀಲಾಗಿ ನಡೆದುಕೊಳ್ಳುವುದು ಇದನ್ನೆಲ್ಲ ಟಾಲ್‌ಸ್ಟಾಯ್ ಅವರು ಈ ಬರಹದಲ್ಲಿ ನಡೆದ ವಾಸ್ತವ ಘಟನೆಗಳ ಮೂಲಕ ಕಣ್ಣಿಗೆ ಕಟ್ಟುವಂತೆ ನಿರೂಪಿಸುತ್ತಾರೆ.

ಎರಡು ವರ್ಷಗಳ ಹಿಂದೆ ಒರ್ಯೆಲಿನಲ್ಲಿ ನಡೆದ ಒಂದು ಘಟನೆಯನ್ನು ಟಾಲ್‌ಸ್ಟಾಯ್ ನಿರೂಪಿಸುತ್ತಾರೆ. ಈಗ ತಮ್ಮ ಕಣ್ಮುಂದೆ ಹಿಂಸೆ ನಡೆಸಲು ಹೊರಟಿರುವ ಸೈನ್ಯ ಹಿಂದೆ ಬೂಲ ಸಂಸ್ಥಾನದಲ್ಲಿಯೂ ಇಂತಹ ಕಾರ್ಯವನ್ನು ಒರ್ಯೇಲಿನಲ್ಲಿ ಒಬ್ಬ ಜಮೀನುದಾರ ಇದ್ದ. ರೈತರ ಆಸ್ತಿ ಅವರ ಕೈ ಸೇರದಂತೆ ಆತ ಮಾಡಲು ಯತ್ನಿಸಿದ್ದ. ಅದನ್ನು ಆ ರೈತರು ಪ್ರತಿಭಟಿಸಿದರು. ಅ ಜಮೀನುದಾರ ರೈತರ ಅನುಮತಿಯಿಲ್ಲದೆಯೇ ತನ್ನ ಕಾರ್ಖಾನೆಯ ಕುಂಟೆಯ ನೀರನ್ನು ರೈತರ ಜಮೀನು ಮುಳುಗುವಷ್ಟು ಎತ್ತರಕ್ಕೆ ಏರಿಸಲು ಯೋಜನೆ ರೂಪಿಸಿದ್ದ. ಇದು ಗೊತ್ತಾಗಿ ರೈತರು ಪ್ರತಿಭಟಿಸಿದರು. ಆಗ ಜಮೀನುದಾರ ಅಲ್ಲಿಯ ಭಕ್ಷಿಗೆ ಇದರ ಬಗ್ಗೆ ದೂರು ಸಲ್ಲಿಸಿದ. ಅದು ನ್ಯಾಯಾಲಯಕ್ಕೆ ಹೋಯಿತು. ನ್ಯಾಯಾಲಯ ಸಹ ಕ್ರಮಬದ್ಧವಾಗಿಯೇ ಆ ಜಮೀನುದಾರ ನೀರಿನ ಮಟ್ಟವನ್ನು ಹೆಚ್ಚಿಸಿಕೊಳ್ಳಲು ಅನುಮತಿ ನೀಡಿತು. ಆ ಅಕ್ರಮ ತೀರ್ಪಿನ ಬಗ್ಗೆ ರೈತರು ದಂಗೆ ಎದ್ದರು. ಜಮೀನುದಾರ ಹರಿಯುತ್ತಿದ್ದ ನೀರಿಗೆ ಕಟ್ಟೆ ಹಾಕಿ ಏರಿ ಎತ್ತರಿಸಲು ಕಳಿಸಿದ. ಆಗ ರೈತರು ಅದನ್ನು ತಡೆಯಲು ತಮ್ಮ ಹೆಂಗಸರನ್ನು ಕಳುಹಿಸಿದರು. ಹೆಂಗಸರು ಅವರನ್ನು ತಡೆದು ಓಡಿಸಿದರು. ಹೆಂಗಸರು ಮಾಡಿದ ಈ ಕೆಲಸದ ವಿರುದ್ಧ ಜಮೀನುದಾರ ಅಲ್ಲಿಯ ಭಕ್ಷಿಗೆ ದೂರು ಸಲ್ಲಿಸಿದ. ಆಗ ಆ ಭಕ್ಷಿ ಆ ಹಳ್ಳಿಯ ಪ್ರತಿಯೊಂದು ಮನೆಯಿಂದಲೂ ಒಬ್ಬೊಬ್ಬ ಹೆಂಗಸನ್ನು ಬಂಧಿಸುವಂತೆ ಆಜ್ಞೆ ಹೊರಡಿಸಿದ.

ಆದರೆ ಆ ಅಜ್ಞೆಯನ್ನು ಪಾಲಿಸುವುದು ಹೇಗೆ ಎಂಬ ಗೊಂದಲ ಶುರುವಾಯಿತು. ಯಾಕೆಂದರೆ ಒಂದೊಂದು ಮನೆಯಲ್ಲೂ ಐದಾರು ಹೆಂಗಸರು ಇರುತ್ತಿದ್ದರು. ಅವರಲ್ಲಿ ಯಾರನ್ನು ಬಂಧಿಸಬೇಕೆಂಬ ಪ್ರಶ್ನೆ ಜಟಿಲವಾಯಿತು. ಇದರಿಂದ ಪೊಲೀಸರು ಪೇಚಿಗೆ ಸಿಕ್ಕಿ ಹಾಕಿಕೊಂಡರು. ಆಗ ಆ ಪೋಲಿಸರ ನಿಷ್ಕ್ರಿಯತೆಯ ಬಗ್ಗೆ ಜಮೀನ್ದಾರನು ಗೌರ್ನರನಿಗೆ ದೂರು ಕೊಟ್ಟನು. ಆ ಸಮಸ್ಯೆಯನ್ನು ಅರಿಯದ ಗೌರ್ನರ್ ಕೂಡಲೇ ಭಕ್ಷಿಯ ಆಜ್ಞೆಯನ್ನು ಅನುಸರಿಸಬೇಕೆಂದು ಅಲ್ಲಿನ ಗ್ರಾಮ ಪೊಲೀಸ್ ಅಧಿಕಾರಿಗಳಿಗೆ ಆಜ್ಞಾಪಿಸಿದ. ಆಗ ಆ ಪೊಲೀಸ್ ಅಧಿಕಾರಿ ಆಜ್ಞೆಯನ್ನು ಪಾಲಿಸುವ ಸಲುವಾಗಿ



ತಾನೇ ಆ ಹಳ್ಳಿಗೆ ಹೋದ. ತುಂಬಾ ಒರಟಾಗಿ ಆತ ಪ್ರತಿಯೊಂದು ಮನೆಯಿಂದ ಒಬ್ಬೊಬ್ಬ ಹೆಂಗಸನ್ನು ಹಿಡಿದು ತರುವಂತೆ ತನ್ನ ಸಿಬ್ಬಂದಿಗೆ ಆಜ್ಞಾಪಿಸಿದ. ಇದರಿಂದ ಅವನ ಸಿಬ್ಬಂದಿ ಮತ್ತು ಆ ರೈತರ, ಹೆಂಗಸರ ನಡುವೆ ಘರ್ಷಣೆ ಪ್ರತಿರೋಧ ಆರಂಭವಾಯಿತು. ಈ ಗದ್ದಲದಲ್ಲಿ ಗ್ರಾಮ ಪೊಲೀಸ್ ಅಧಿಕಾರಿಗೆ, ಅವನ ಸಿಬ್ಬಂದಿಗೆ ಏಟುಗಳು ಬಿದ್ದವು.

ಇದು ಆಡಳಿತಶಾಹಿಗೆ ಭಯಂಕರವಾದ ಅಪರಾಧವೆಂದು, ಆಜ್ಞಾವಿರೋಧವೆಂದು ಕಂಡಿತು. ಆ ವರದಿ ನಗರಕ್ಕೆ ತಲುಪಿತು. ಆಗ ಗೌರ್ನರ್‌ರನ್ನು ಘರ್ಷಣೆ ನಡೆದ ಜಾಗಕ್ಕೆ ತಾನೇ ಖುದ್ದಾಗಿ ಬರಬೇಕಾಗಿ ಬಂತು. ತನ್ನ ಜೊತೆಯಲ್ಲಿ ಒಂದು ಬೆಟಾಲಿಯನ್ ಸೈನಿಕ ಪಡೆಯನ್ನು ಕರೆದು ತಂದ. ಹೆಚ್ಚಿನ ಸಂಖ್ಯೆಯಲ್ಲಿ ರೈತರು ಜಮಾಯಿಸಿದ್ದರು. ಗೌರ್ನರ್ ಅವರನ್ನು ಉದ್ದೇಶಿಸಿ ಭಾಷಣ ಮಾಡಿ, ಒಂದು ಬೆಂಚನ್ನು ತರಿಸಿದ. ಥಳಿಸುವ ಜನರನ್ನೂ ಕರೆಸಿದ. ಸೈನಿಕರು ಹೊಡೆಯುವ ಕೆಲಸವನ್ನು ನಿರಾಕರಿಸಿದರೆ, ಆ ಊರಿನ ಕೆಲವು ಕುದುರೆಗಳ್ಳರನ್ನು ಆ ಕೆಲಸಕ್ಕೆ ನೇಮಿಸಿಕೊಂಡ. ಅಲ್ಲಿ ನಿಂತಿದ್ದ ಜನರ ಗುಂಪಿನಲ್ಲಿ 12 ಜನ ರೈತರನ್ನು ಆ ಜಮೀನ್ದಾರ ಅಪರಾಧಿಗಳೆಂದು ಗುರುತಿಸಿದ. ಗೌರ್ನರ್ ಅವರನ್ನು ಒಬ್ಬೊಬ್ಬರನ್ನೇ ಕರೆಸಿ ಬಟ್ಟೆ ಬಿಚ್ಚಿಸಿ ಬೆಂಚಿನ ಮೇಲೆ ಮಲಗಿಸಿ ಎಪ್ಪತ್ತು ಛಡಿ ಏಟುಗಳನ್ನು ಕೊಡಿಸಿದ. ಕುದುರೆಗಳ್ಳರು ಬಾರುಕೋಲನ್ನು ಬೀಸಿ ಹೊಡೆಯ ತೊಡಗಿದ್ದರು. ಅವರ ಬೆನ್ನು, ಪೃಷ್ಠ, ತೊಡೆಗಳೆಲ್ಲಾ ಗಾಯ ಬಾಸುಂಡೆಗಳಿಂದ ತುಂಬಿ ಹೋದವು. ಅಪರಾಧಿಗಳ ತಾಯಿ, ಹೆಂಡತಿ, ಮಕ್ಕಳ ಗೋಳಾಟ ಚೀರಾಟ ಮುಗಿಲು ಮುಟ್ಟಿತು. ಆ ಹನ್ನೆರಡು ಜನ ರೈತ ಪ್ರತಿನಿಧಿಗಳ ಸ್ವರ ಸ್ತಬ್ಧವಾಯಿತು. ದೇಶದ ಪ್ರತಿನಿಧಿಯ ಹಾಜರಿಯಲ್ಲಿಯೇ ಈ ಹಿಂಸಾಚಾರ ಸಾಂಗವಾಗಿ ನಡೆಯಿತು.

ಇಂತಹ ಭಯಾನಕವಾದ ಘಟನೆಯನ್ನು ಕಣ್ಣಾರೆ ಕಂಡ ಟಾಲ್‌ಸ್ಟಾಯ್ ಹೋಗಿ ಆ ಗೌರ್ನರನನ್ನು ಕೇಳುತ್ತಾರೆ: "ಜನ ಶರಣಾಗತರಾಗಿರುವಾಗ, ಹಳ್ಳಿಯಲ್ಲೆಲ್ಲೂ ಸೈನಿಕರು ತುಂಬಿಕೊಂಡಿರುವಾಗ ಇಂಥ ಕ್ರೂರ ಹಿಂಸೆಯ ಅಗತ್ಯವಿತ್ತೆ?" ಎಂದು. ಅಗ ಆ ಗೌರ್ನರ್ ಹೇಳುತ್ತಾನೆ: "ರೈತರನ್ನು ಇಂಥ ಕ್ರೂರ ಶಿಕ್ಷೆಗಳಿಗೆ ಒಳಪಡಿಸದಿದ್ದರೆ ಅವರು ರಾಜ ಶಾಸನವನ್ನು ಮತ್ತೆ ಧಿಕ್ಕರಿಸುತ್ತಾರೆ; ಕೆಲವರನ್ನು ಹಿಡಿದು ಉಗ್ರವಾಗಿ ಎಲ್ಲರೆದುರಿಗೆ ದಂಡಿಸಿ ಬಿಟ್ಟರೆ ರಾಜಶಾಸನಕ್ಕೆ ಸರ್ವತ್ರ ಭಯಮಿಶ್ರವಾದ ಗೌರವ ದೊರೆಯುತ್ತದೆ. ಇದು ನನಗೆ ಮನವರಿಕೆಯಾಗಿರುವ ವಿಚಾರ" ಎನ್ನುತ್ತಾನೆ ಆತ.

ಈಗ ಟೂಲದ ಗೌರ್ನರ್ ಸಾಹೇಬನು ಅಧಿಕಾರಿಗಳನ್ನು, ಕೆಲಸಗಾರರನ್ನು ಮತ್ತು ಸೈನಿಕರನ್ನು ಕಟ್ಟಿಕೊಂಡು ಇಂಥದೇ ಕಾರ್ಯವನ್ನು ನಡೆಸಲು ಹೊರಟಿರುವುದನ್ನು ಕಂಡು ಟಾಲ್‌ಸ್ಟಾಯ್ ನೊಂದು ವ್ಯಥೆ ಪಟ್ಟುಕೊಳ್ಳುತ್ತಾನೆ. ರಾಜಶಾಸನವನ್ನು ಕೊಲೆ, ದಂಡನೆ, ಹಿಂಸೆಯ ಮೂಲಕ ತೀರ್ಪನ್ನು ಜಾರಿಮಾಡಲು ಹೊರಟಿರುತ್ತಾರೆ. ಆ ಜಮೀನ್ದಾರ ಆ ರೈತರು ಬೆಳಸಿದ ಮರಗಳನ್ನು ಕಡಿದುಕೊಂಡು ತನ್ನ ಅದಾಯವನ್ನು ಹೆಚ್ಚಿಸಿಕೊಂಡಿದ್ದ. ಆ ಹಣವನ್ನೆಲ್ಲಾ ಮಾಸ್ಕೋ, ಪೀಟರ್ಸ್‌ಬರ್ಗ್ ಅಥವಾ ಪ್ಯಾರಿಸ್‌ನ ಪಾನಮಂದಿರಗಳಲ್ಲಿ ದುಂದುವೆಚ್ಚ ಮಾಡಿ ಕಳೆಯುತ್ತಿದ್ದನೇ ಹೊರತು, ಚಳಿ ಹಸಿವುಗಳಿಂದ ಸಾಯುತ್ತಿದ್ದ ರೈತರ ಕಷ್ಟಕಾರ್ಪಣ್ಯಗಳಿಗೆ ಆತ ಸ್ಪಂದಿಸುವುದಿಲ್ಲ ಎಂಬುದು ಟಾಲ್‌ಸ್ಟಾಯ್‌ಗೆ ಗೊತ್ತಿತ್ತು. ಆಗ ಟಾಲ್‌ಸ್ಟಾಯ್‌ಗೆ ಅನ್ನಿಸುತ್ತದೆ "ದೊಡ್ಡ ಹುದ್ದೆಗಳಲ್ಲಿರುವ ಜನರು ಜೀವನ ವ್ಯವಸ್ಥೆಯು ನ್ಯಾಯಶಾಸ್ತ್ರದ ತತ್ವದ ಮೇಲೆ ನಿಂತಿದೆ ಎಂದು ಭಾವಿಸುತ್ತಾರೆ. ಆದರೆ ಅದು ಅಪ್ಪಟ ಸುಳ್ಳು; ನಯವಂಚನೆಯಷ್ಟೇ ಅಲ್ಲ; ಅದು ಆತ್ಮವಂಚನೆ ಅದು ಇನ್ನೂ ಸರಳವಾದ ತೀರ ಒರಟಾದ ತತ್ವದ ಮೇಲೆ ನಿಂತಿದೆ. ಆ ತತ್ವವೆಂದರೆ ಜನರ ಹಿಂಸೆ ಮತ್ತು ಕೊಲೆ" ಎಂಬ ತೀರ್ಮಾನಕ್ಕೆ ಬರುತ್ತಾರೆ.

ಹಿಂಸಾಚಾರವೂ ತನ್ನಷ್ಟಕ್ಕೇ ಸಹಜವಾದುದೆಂದು, ಅದು ಸಾಮಾನ್ಯವಾದ, ನ್ಯಾಯಸಂಬಂಧವಾದ ರಾಜಕೀಯ ಅಥವಾ ಆರ್ಥಿಕ ಸೂತ್ರಗಳ ಪರಿಣಾಮವಾಗಿ ಬಂದದ್ದೆಂದು ಆ ಜನ ನಂಬಿದ್ದಾರೆ. ರೈತರು ಬೆಳೆಸಿದ ಮರಗಳಿಂದ ಒಡೆಯನಿಗೆ, ಕಾರ್ಖಾನೆಯ ಮಾಲೀಕನಿಗೆ ಹೇರಳ ಲಾಭವಿದೆ. ರೈತರು ಬೆಳೆಸಿದ ಮರಗಳು ಅಧಿಕಾರದ ಹಿಂಸೆಯ ಮೂಲಕ ಜಮೀನುದಾರನ ಸ್ವಂತ ಆಸ್ತಿಯಾಗಿ ಬಿಡುತ್ತವೆ. ಬಡವರ, ರೈತರ ಅಗತ್ಯಗಳನ್ನು ವಂಚಿಸಿ ಶ್ರೀಮಂತ ವರ್ಗದವರು ಅನುಭವಿಸುವ ಹಕ್ಕು ಸೌಲಭ್ಯಗಳೆಲ್ಲಾ ಇದೇ ಲಿಖಿತ, ಕೆಲವು ಸಮಯದಲ್ಲಿ ಅಲಿಖಿತವಾದ ಸೂತ್ರದ ಮೇಲೆ ನಿಂತಿರುವುದನ್ನು ಟಾಲ್‌ಸ್ಟಾಯ್ ಗುರುತಿಸುತ್ತಾರೆ. ಜಮೀನುದಾರರು,



ಬಂಡವಾಳಗಾರರು, ನಿರಂಕುಶ ಮಿಲ್ಟ್ರಿ ಆಡಳಿತ ವ್ಯವಸ್ಥೆಗಳೆಲ್ಲಾ ರೈತರನ್ನು ಶೋಷಿಸುತ್ತವೆ. ಆದರೆ ಚರಿತ್ರೆಯಲ್ಲಿ ಅಲ್ಪಮತೀಯರ ಗುಂಪು ಬಹುಮತೀಯರ ಗುಂಪಿನ ಮೇಲೆ ನಡೆಸುವ ಇಂತಹ ಕ್ರೂರ ದಬ್ಬಾಳಿಕೆ, ಹಿಂಸೆ ದಾಖಲಾಗುವುದಿಲ್ಲ. ಶ್ರೀಮಂತರು ಬಡವರ ಮೇಲೆ ತಮ್ಮ ಹಕ್ಕುಗಳನ್ನು ಬಡಿಗೆ, ಸೆರೆಮನೆ, ಹೊಡೆತ, ಗಲ್ಲು, ಅಪರಾಧ, ಶಿಕ್ಷೆ, ಕೊಲೆ ಮುಂತಾದವುಗಳ ಮೂಲಕವೇ ಸ್ಥಾಪಿಸಿಕೊಂಡಿರುತ್ತಾರೆ. ಇಂತಹ ಇಬ್ಬಂದಿತನವನ್ನು ಟಾಲ್‌ಸ್ಟಾಯ್ ತಮ್ಮ ಈ ಬರವಣಿಗೆಯಲ್ಲಿ ವಿರೋಧಿಸುತ್ತಾರೆ.

ಇಂತಹದೇ ಕೆಲಸವನ್ನು ಮಾಡಲು ವಿಶೇಷ ರೈಲಿನಲ್ಲಿ ಹೊರಟಿರುವ ಗೌರ್‍ನರ್, ಅಧಿಕಾರಿಗಳು, ಸೈನಿಕರನ್ನೆಲ್ಲಾ ಕಂಡು ಹೀಗೆ ಹೇಳುತ್ತಾರೆ: "ಅವರು ಹೊರಟಿದ್ದುದು ಹಸಿದ ತಂದೆ ಅಜ್ಜಂದಿರನ್ನು ಕೊಲ್ಲುವುದಕ್ಕಾಗಿ. ಆದರೆ ತೀರ ಸಾಮಾನ್ಯವಾದ ವ್ಯವಹಾರಕ್ಕಾಗಿ ಅಥವಾ ಒಂದು ಸಂತೋಷದ ಕಾರ್ಯಕ್ಕಾಗಿ ಹೊರಟವರಂತೆ ಉತ್ಸಾಹದಿಂದ ಹೊರಟಿದ್ದರು." ಅವರಿಗೆ ಈ ಪ್ರಯಾಣ ತುಂಬಾ ಸಾಮಾನ್ಯವಾದದ್ದು; ಸರಳವಾದದ್ದು ಎಂಬ ಹಾಗೆ ಇತ್ತು. ಯಾವ ಜನರ ತೆರಿಗೆಗಳಿಂದ ಅವರೆಲ್ಲರ ನಿರ್ವಹಣೆ ಸಾಗಿತ್ತೋ, ಅಂತಹ ಅಸಹಾಯಕ ಹಸಿದ ಜನರ ಹಿಂಸೆ ಅಥವಾ ಕೊಲೆಗಾಗಿ ಈ ಜನ ತಮ್ಮ ಕರ್ತವ್ಯವನ್ನು ತಾವು ಮಾಡುತ್ತಿದ್ದೇವೆ ಎಂಬ ದೃಢ ವಿಶ್ವಾಸದಿಂದ ಹೊರಟವರಂತೆ ಕಾಣುತ್ತಿದ್ದರೆಂದು ಟಾಲ್‌ಸ್ಟಾಯ್ ಆ ಸಂದರ್ಭವನ್ನು ವಿವರಿಸುತ್ತಾರೆ.

ಟಾಲ್‌ಸ್ಟಾಯ್‌ಗೆ ಆ ಜನಗಳೆಲ್ಲರ ಪರಿಚಯವಿದೆ. ಅವರ ಸ್ವಭಾವ, ಅವರ ರೀತಿ ನೀತಿ ಎಲ್ಲಾ ಅವರಿಗೆ ಗೊತ್ತು. ಅವರೂ ಮನುಷ್ಯರೇ ಎಂಬುದು ಗೊತ್ತು. ಆದರೆ ಖಾಸಗಿ ಜೀವನದಲ್ಲಿ ದೌರ್ಜನ್ಯ ಮಾಡಲು ಬಯಸದ ಆ ಜನ ಅಂತಹ ಬಲಾತ್ಕಾರವಾದ ಕಾರ್ಯಾಚರಣೆಗೆ ಹೊರಟಿರುವುದರ ಹಿಂದಿನ ಅರ್ಥವನ್ನು, ವ್ಯವಸ್ಥೆಯ ಕರಾಳ ಮುಖವನ್ನು ಕುರಿತು ಟಾಲ್‌ಸ್ಟಾಯ್ ಈ ಪ್ರಬಂಧದಲ್ಲಿ ಚಿಂತಿಸುತ್ತಾರೆ. ಯಾರೂ ಯಾಕೆ ಈ ವಿಷಯವನ್ನು ಕುರಿತು ಯೋಚಿಸುವುದಿಲ್ಲ ಎಂದು ಪ್ರಶ್ನಿಸುತ್ತಾರೆ. ರಾಜ್ಯದ ಅವ್ಯವಸ್ಥೆಯನ್ನು ಕುರಿತು ಆ ಸೈನಿಕರ ಮುಂದೆ ಮಾತನಾಡಿದರೂ ಆ ಬಗ್ಗೆ ಅವರು ಯೋಚಿಸಲು ಸಿದ್ಧರಿಲ್ಲ. ಈ ಕಾರ್ಯಾಚರಣೆಗೆ ಕಾರಣರಾದ ಜಮೀನುದಾರರು, ಅನ್ಯಾಯದ ತೀರ್ಪು ನೀಡಿದ ನ್ಯಾಯಾಧೀಶರು, ತಮ್ಮ ಸೋದರರನ್ನೇ ಕೊಲ್ಲಲು ಹೊರಟಿರುವ ಸೈನಿಕ ವರ್ಗ ಇವರೆಲ್ಲಾ ಹಾಲಿ ವ್ಯವಸ್ಥೆಯನ್ನು ರಕ್ಷಿಸಿಕೊಂಡು ಬರುವುದೇ ರಾಜ್ಯದ ಹಿತ ಎಂದು ಹೇಳುತ್ತಾರೆಂದು ಟಾಲ್‌ಸ್ಟಾಯ್ ಹೇಳುತ್ತಾರೆ. ಮೇಲಾಧಿಕಾರಿಗಳ ಆಜ್ಞೆಗಳನ್ನು ಕಾರ್ಯಗತ ಗೊಳಿಸುವುದೇ ತಮ್ಮ ಕೆಲಸ ಎನ್ನುತ್ತಾರೆ. ಅವರೆಲ್ಲಾ ಈಗಿನ ವ್ಯವಸ್ಥೆಯ ಬದಲಾವಣೆಗೆ ಅವಕಾಶವಿಲ್ಲ ಎಂದು ನಂಬಿದ್ದಾರೆ. ಇಗಿನ ವ್ಯವಸ್ಥೆ ತೀರ ಅಗತ್ಯ, ನಿರ್ವಿಕಾರವಾದುದು ಇದನ್ನು ಕಾಪಾಡಬೇಕಾದದ್ದು – ಎಲ್ಲರ ಪವಿತ್ರ ಕರ್ತವ್ಯ ಎಂಬ ನಂಬಿಕೆ ಅವರಲ್ಲಿ ಬೆಳೆದು ಬಂದಿದೆ ಎಂದು ಟಾಲ್‌ಸ್ಟಾಯ್ ಹೇಳುತ್ತಾರೆ.

ಪ್ರಸ್ತುತ ಪ್ರಬಂಧದಲ್ಲಿ ಸೈನಿಕರು, ಕ್ರಿಶ್ಚಿಯನ್ ಧರ್ಮ, ಹಿಂಸೆ ಇವುಗಳ ಸಂಬಂಧವನ್ನು ಕುರಿತು ದೀರ್ಘವಾಗಿ ವಿವೇಚಿಸುತ್ತಾರೆ ; ವ್ಯಾಪಾರಿ ಮತ್ತು ಉತ್ಪಾದಕರ ನಡುವಿನ ಸಂಬಂಧಗಳನ್ನು ಕುರಿತು ವಿಶ್ಲೇಷಿಸುತ್ತಾರೆ; ಕಾನೂನು ಮತ್ತು ಜನಸಾಮಾನ್ಯರ ನಡುವಿನ ಅನ್ಯಾಯದ ತೀರ್ಪುಗಳನ್ನು, ಕಟ್ಟು ಕಟ್ಟಳೆಗಳನ್ನು ಕುರಿತು ವಿವರಿಸುತ್ತಾರೆ; ರಾಜಕೀಯ ವ್ಯವಸ್ಥೆಯ ಇಬ್ಬಂದಿ ತನವನ್ನು, ಆಷಾಢಭೂತಿತನವನ್ನು ವ್ಯಾಖ್ಯಾನಿಸುತ್ತಾರೆ; ಯುದ್ಧದ ಅನಾಹುತಗಳನ್ನು, ಹಿಂಸೆಯ ಕ್ರೌರ್ಯಗಳನ್ನು ಕುರಿತು ಅನೇಕ ದೃಷ್ಟಾಂತಗಳ ಮೂಲಕ ವಿಶ್ಲೇಷಿಸುತ್ತಾರೆ. "ಇದನ್ನು ಸಾಧಿಸಲು ಮನುಷ್ಯ ದೊಡ್ಡ ಸಾಹಸವನ್ನೇನೂ ಮಾಡಬೇಕಾಗಿಲ್ಲ; ಅಥವಾ ದಂಡಯಾತ್ರೆ ಮಾಡಬೇಕಾಗಿಲ್ಲ ; ಎಚ್ಚೆತ್ತುಕೊಳ್ಳುವ ಒಂದು ಸಣ್ಣ ಆತ್ಮ ಪ್ರಯತ್ನವನ್ನು ಮಾಡಬೇಕು ಅಷ್ಟೇ" ಎಂಬ ತೀರ್ಮಾನಕ್ಕೆ ಟಾಲ್‌ಸ್ಟಾಯ್ ಬಂದು, "ಇಂತಹ ಪ್ರಯತ್ನ ಸಾಧ್ಯವೇ?" ಎಂದು ಪ್ರಶ್ನೆ ಹಾಕಿಕೊಂಡು ಅದಕ್ಕೆ ಉತ್ತರ ಹುಡುಕುತ್ತಾರೆ. ಈ ಉತ್ತರದಲ್ಲಿ ಅವರು ಈ ಪ್ರಯತ್ನ ಸಾಧ್ಯವಿದೆ ಎಂಬ ನಿಲುವಿಗೆ ಬಂದು ಅದಕ್ಕೆ ಪರ್ಯಾಯಗಳನ್ನು ಸೂಚಿಸುತ್ತಾ, ಇದಕ್ಕಾಗಿ ಮಾನವೀಯ ಭಾವನೆಗಳನ್ನು ಗೌರವಿಸುವ ಕೆಲಸ ಆಗಬೇಕು ಎನ್ನುತ್ತಾರೆ. ಇಂತಹ ಹತ್ತಾರು ಪ್ರಶ್ನೆಗಳನ್ನು ಹಾಕಿಕೊಂಡು ಅವರು ಇಲ್ಲಿ ಸತ್ಯದ ಶೋಧನೆಯನ್ನು ತೊಡಗಿದ್ದಾರೆ. ಕೊನೆಗೆ ಟಾಲ್‌ಸ್ಟಾಯ್ ಈ ಪ್ರಬಂಧದಲ್ಲಿ ಈ ನಿರ್ಣಯಕ್ಕೆ ಬರುತ್ತಾರೆ.



"ಮೊದಲು ದೇವರ ರಾಜ್ಯವನ್ನು, ಆತನ ಸತ್ಯನಿಷ್ಠೆಯನ್ನು ಶೋಧಿಸಿ ಅನಂತರ ನಿಮ್ಮಲ್ಲಿ ದೇವರ ರಾಜ್ಯದ ಸೇವೆ ಬರುತ್ತದೆ. ಅಂದರೆ ಎಲ್ಲಾ ಜೀವಿಗಳಲ್ಲೂ ಸಾಧ್ಯವಾದಷ್ಟು ಹೆಚ್ಚಿನ ಪ್ರಮಾಣದಲ್ಲಿ ಒಗ್ಗಟ್ಟನ್ನು ತರಲು ಸಹಕರಿಸುವುದು. ಈ ಒಗ್ಗಟ್ಟು ಸತ್ಯದ ವಿಚಾರದಲ್ಲಿ ಮಾತ್ರ ಸಾಧ್ಯ. ಯಾವಾಗಲೂ ನಮ್ಮ ಅಧೀನದಲ್ಲಿರುವ ಶಕ್ತಿ ಎಂದರೆ ಅದೊಂದೇ ಆದ್ದರಿಂದ ಸತ್ಯವನ್ನು ಗುರುತಿಸುವುದನ್ನು ಮತ್ತು ಹೇಳುವುದನ್ನು ಆ ದಿವ್ಯಶಕ್ತಿಯು ನಮ್ಮಿಂದ ಬಯಸುತ್ತದೆ. ಅದಕ್ಕಾಗಿ ದೇವರ ರಾಜ್ಯವನ್ನು ಬೆಂಬಲಿಸುವುದೊಂದೇ ಜಗತ್ತಿಗೆ ಸೇವೆ ಸಲ್ಲಿಸುವ ದಾರಿಯಾಗಿದೆ. ಇದೇ ಮಾನವ ಜೀವನದ ಮುಖ್ಯ ಉದ್ದೇಶವೂ ಆಗಿದೆ. ಪ್ರತಿವ್ಯಕ್ತಿಯೂ ಸತ್ಯವನ್ನು ಗುರುತಿಸುವ ಮತ್ತು ಅನುಸರಿಸುವ ಕಾರ್ಯದಲ್ಲಿ ತೊಡಗಿದರೆ ಈ ಸೇವೆ ಪರಿಪೂರ್ಣವಾಗುತ್ತದೆ. ಆದ್ದರಿಂದ ದೇವರ ರಾಜ್ಯ ನಿನ್ನೊಳಗೇ ಇದೆ" ಎನ್ನುತ್ತಾರೆ. ದೇವರಾಜ್ಯ ನಿಮ್ಮೊಳಗೇ ಇದೆ. ಅದನ್ನು ಅರಿಯುವ ಪ್ರಜ್ಞೆ ಮನುಷ್ಯನಿಗೆ ಬರಬೇಕು ಎಂದು ಟಾಲ್‌ಸ್ಟಾಯ್ ಎಚ್ಚರಿಸುತ್ತಾರೆ. ಹಿಂಸೆಯನ್ನು ವಿರೋಧಿಸಿ, ಅಹಿಂಸೆಯನ್ನು, ಮಾನವೀಯತೆಯನ್ನು ಈ ಪ್ರಬಂಧದಲ್ಲಿ ಎತ್ತಿ ಹಿಡಿಯುತ್ತಾರೆ.

ಟಾಲ್‌ಸ್ಟಾಯ್ ಅವರ ಈ ವಿಚಾರಗಳು ಗಾಂಧೀಜಿ ಅವರ ಮೇಲೆ ಪ್ರಭಾವ ಬೀರಿರುವುದರಲ್ಲಿ ಸಹಜವಾಗಿಯೇ ಇದೆ. ಗಾಂಧೀಜಿಗೆ ಕೂಡ ಬದುಕಿನ ಸಾರ್ಥಕತೆಗೆ ಬದುಕಿನ ಧ್ಯೇಯಕ್ಕೆ ಸತ್ಯಾನ್ವೇಷಣೆಯೇ ಗುರಿಯಾಗಿತ್ತು. 'ಇಂತಹ ಸತ್ಯಾನ್ವೇಷಣೆಯಲ್ಲಿ ನಿರತನಾದವನಿಗೆ ದೇವರ ರಾಜ್ಯ ತುಂಬಾ ಹತ್ತಿರ' ಎಂಬ ಋಷಿವಾಣಿಯಲ್ಲಿ ಇಬ್ಬರಿಗೂ ಆಳವಾದ ನಂಬಿಕೆ, ಶ್ರದ್ಧೆ, ವಿಶ್ವಾಸವಿತ್ತು. ❍

**– ಡಾ. ಕರೀಗೌಡ ಬೀಚನಹಳ್ಳಿ**
ಪ್ರಾಧ್ಯಾಪಕರು
ಕನ್ನಡ ವಿಶ್ವವಿದ್ಯಾಲಯ, ಹಂಪಿ
❍





# ಗಾಂಧೀ ವಿಚಾರ ಮತ್ತು ಸರ್ವೋದಯ ಕ್ರಾಂತಿ

– ಸುರೇಂದ್ರ ಕೌಲಗಿ

**ಈ** ಇಪ್ಪತ್ತೊಂದನೇ ಶತಮಾನದ ಅಗತ್ಯ ಸರ್ವೋದಯ ಕ್ರಾಂತಿ.

ಇಂದು ಎಲ್ಲೆಲ್ಲೂ ಸತ್ಯಾಗ್ರಹ, ಧರಣಿ , ಮುಷ್ಕರ, ರಸ್ತೆಬಂದ್, ಸಭಾತ್ಯಾಗ, ಆಮರಣ ಉಪವಾಸ, ಪ್ರತಿಭಟನೆ, ಹಿಂಸಾಚಾರ, ಮುಂತಾವುಗಳು ನಡೆಯುತ್ತಿವೆ. ಇವೆಲ್ಲ ಇಂದಿನ ಸಾಮಾಜಿಕ, ಆರ್ಥಿಕ, ರಾಜಕೀಯ ಸಮಸ್ಯೆಗಳ ಬಗ್ಗೆ ಜನರ ಮನಸ್ಸಿನಲ್ಲಿರುವ ಅಸಂತೋಷ ಮತ್ತು ಕೋಪದ ಸಂಕೇತಗಳಾಗಿವೆ. ಅಲ್ಲದೆ, ಬಗೆಬಗೆಯ ವಾದಗಳೂ ಹುಟ್ಟುತ್ತಿವೆ: ನಕ್ಸಲವಾದ, ಮಾವೋವಾದ, ಲೆನಿನ್‌ವಾದ, ಅಲಖೈದಾವಾದ, ಒಸಾಮಾವಾದ, ಒಬಾಮಾವಾದ, ಬಂಡವಾಳಶಾಹಿವಾದ, ಅಭಿವೃದ್ಧಿ ವಾದ, ಈ ಎಲ್ಲ ಪ್ರಕಾರದ ವಾದಗಳು ಸಹ ಜನರ ಮನಸ್ಸಿನಲ್ಲಿರುವ, ತೀವ್ರವಾದ ಅಸಂತೋಷ ಮತ್ತು ಕೋಪದ ಸಂಕೇತಗಳಾಗಿವೆ. ಈ ವಾದಗಳು ಸಾಲದೆಂಬಂತೆ ಕೋಮಾಧಾರಿತ ಸಂಘಟನೆಗಳು ಹುಟ್ಟುತ್ತಲೇ ಇವೆ. ರಾಜಕೀಯ ಪಕ್ಷಗಳೂ ಜೊತೆಗೂಡಿವೆ. ಇವೆಲ್ಲ ಏತಕ್ಕಾಗಿ? ತುಂಬ ಕೆಟ್ಟು ಹೋಗಿರುವ ಇಂದಿನ ಸಾಮಾಜಿಕ ವ್ಯವಸ್ಥೆಯನ್ನು ಬದಲಾಯಿಸುವುದಕ್ಕಾಗಿ; ಕುಸಿಯುತ್ತಿರುವ ಮೌಲ್ಯಗಳನ್ನು ಪುನರ್‌ಸ್ಥಾಪಿಸುವುದಕ್ಕಾಗಿ. ಆದರೆ ವಿಕಟ ಸನ್ನಿವೇಶವೇನೆಂದರೆ ಯಾವ–ಯಾವ ಮಾರ್ಗಗಳಿಂದ, ಯಾವ–ಯಾವ ಉಪಾಯಗಳಿಂದ ಬದಲಾವಣೆಗಾಗಿ ಪ್ರಯತ್ನಿಸಲಾಗುತ್ತಿದೆಯೋ ಅವೆಲ್ಲ ಮಾರ್ಗೋಪಾಯಗಳು ಪರಿಸ್ಥಿತಿಯಲ್ಲಿ ಸುಧಾರಣೆ ತರುವುದರ ಬದಲು ಅದನ್ನು ಇನ್ನೂ ವಿಕೋಪಕ್ಕೆ ಒಯ್ಯುತ್ತಿರುವುದು! ಸಾಮಾಜಿಕ ಬದಲಾವಣೆಯ ಒಂದೊಂದು ಪ್ರಯತ್ನವೂ ಬಂಧನಕಾರಿಯಾಗುತ್ತಿದೆ ! ಪರಿಣಾಮವಾಗಿ ಪಳಗಿರುವ ಮನೆ ಬಿದ್ದ ಕುಂಟ ಕುರುಡನ ತೆರದಿ ತಳಮಳಿಸುತ್ತಿದೆ ಈ ಲೋಕ. ಸುಳಿದಿಲ್ಲವಾದ ಹೊಸ ದರುಶನದ ಹೊಳಪು ಎಂಬ ಡಿ.ವಿ.ಜಿ.ಯವರ ಮಾತು ಸದಾ ಅನುಭವಕ್ಕೆ ಬರುತ್ತಿದೆ.

ಇದುವರೆಗೆ ಜಗತ್ತು ಕಂಡ ಸಮಾಜವಾದ, ಸಾಮ್ಯವಾದ ಸೋತಿದೆ. ಈ ವಾದಗಳ ಹೆಸರಿನಲ್ಲಿ ಕಟ್ಟಲಾಗಿದ್ದ ದೇಶಗಳು ನೆಲಕಚ್ಚಿವೆ. ಬಂಡವಾಳಶಾಹಿವಾದ ಮಾತ್ರ ಪ್ರಚಂಡವಾಗಿ ಬೆಳೆಯುತ್ತಿದೆ. ಆದರೆ ದುರಂತವೆಂದರೆ ಈ ಬಂಡವಾಳಶಾಹಿವಾದವೇ ಎಲ್ಲ ಸಾಮಾಜಿಕ ವ್ಯವಸ್ಥೆ ಮತ್ತು ಮೌಲ್ಯಗಳ ಅವನತಿಗೆ ಕಾರಣವಾಗುತ್ತಿದೆ. ಹಿಂಸೆ ಬೆಳೆಯಲು ಕಾರಣವಾಗುತ್ತಿದೆ; ಪರಿಸರ ಹಾಗೂ ಪ್ರಕೃತಿ ವಿನಾಶಕ್ಕೆ ಕಾರಣವಾಗುತ್ತಿದೆ; ಯುದ್ಧಗಳ ಸಿದ್ಧತೆಗೆ ಕಾರಣವಾಗುತ್ತಿದೆ; ವಿನಾಶಕಾರಿ ಶಸ್ತ್ರಾಸ್ತ್ರಗಳ ತಯಾರಿಕೆಗೆ ಪ್ರಚೋದನೆ ನೀಡುತ್ತಿದೆ. ಎಲ್ಲಕ್ಕಿಂತ ಹೆಚ್ಚಾಗಿ ಮಾನವ ಧನಪಿಶಾಚಿಯಾಗಿ ದಾನವನಾಗುತ್ತಿದ್ದಾನೆ. ಈ ಎಲ್ಲ ಸಂಗತಿಗಳು ಸರ್ವನಾಶಕ್ಕೆ ಕಾರಣವಾಗುತ್ತಿವೆ. ಆದ್ದರಿಂದಲೇ ಇಂದು ಜಗತ್ತಿನ ಮುಂದೆ ಇರುವ ಏಕೈಕ ಪ್ರಶ್ನೆ ಏನೆಂದರೆ, ಸರ್ವನಾಶಬೇಕೇ ಅಥವಾ ಸರ್ವೋದಯ ಬೇಕೇ. ಸರ್ವನಾಶದ ಮಾರ್ಗವಂತೂ ಸರ್ವಥಾ ತ್ಯಾಜ್ಯ. ಮನುಷ್ಯನೆಂಬ ಯಾವ ಪ್ರಾಣಿಯೂ ಸರ್ವನಾಶವನ್ನು ಬಯಸಲಾರ. ಆದ್ದರಿಂದ ಇರುವ ಒಂದೇ ಒಂದು ಮಾರ್ಗವೆಂದರೆ ಸರ್ವೋದಯ ಸಮಾಜದ ರಚನೆ. ಅದಕ್ಕಾಗಿ ನಡೆಸಬೇಕಾದ ಸರ್ವೋದಯ ಸಮಾಜ ಕ್ರಾಂತಿ ಇದುವರೆಗೆ ಆಗಿ ಹೋದ ಮತ್ತು ಈಗಲೂ ಅಲ್ಲಲ್ಲಿ ನಡೆಯುತ್ತಿರುವ ಕಾಂತಿಗಳು ಹಿಂಸೆಯಿಂದ ಪ್ರಾರಂಭವಾಗಿ, ಹಿಂಸಾಚಾರದಲ್ಲಿ ನಡೆದು ಕೊನೆಗೆ ಇನ್ನೊಂದು ಹಿಂಸಾಚಾರಕ್ಕೆ ಕಾರಣವಾಗಿ ತಾತ್ಕಾಲಿಕವಾಗಿ ನಿಂತಿವೆ. ಅಂತಹ ಕ್ರಾಂತಿಗಳು ನಡೆದ ಸಮಾಜ ಅಥವಾ ದೇಶದಲ್ಲಿ ಹೊಸ ಸಮಾಜ ಬದಲಾವಣೆಯ ಬಗ್ಗೆ, ರಚನೆಯ ಬಗ್ಗೆ ಅಸ್ಪಷ್ಟತೆಯೇ ಇದೆ. ಗೊಂದಲವೇ ಇದೆ. ಇತ್ತೀಚಿಗೆ ನೇಪಾಳದಲ್ಲಿ, ಈಜಿಪ್ಟ್‌ನಲ್ಲಿ, ಕೊರಿಯಾದಲ್ಲಿ ನಡೆದ ಕ್ರಾಂತಿಗಳು ನಿಶ್ಚಯವಾಗಿ ಮಾದರಿ ಕ್ರಾಂತಿಗಳಾಗಲಾರವು. ಆ ಕ್ರಾಂತಿಗಳ ನಂತರ ಅಲ್ಲಿಯ ಜನರಲ್ಲಿ ಹೊಸ ವ್ಯವಸ್ಥೆಯ ರಚನೆಯ ಬಗ್ಗೆ ಏಕಾಭಿಪ್ರಾಯ ಬರಲಿಲ್ಲ. ಕ್ರಾಂತಿಯಲ್ಲಿ ಎಷ್ಟು ಜನನಾಯಕರು ತೊಡಗಿದ್ದರೋ ಅಷ್ಟು ಪ್ರತ್ಯೇಕ ವಿಚಾರಗಳು ಹುಟ್ಟಿಕೊಂಡವು. ಪ್ರತ್ಯೇಕ ಸಂಘಟನೆಗಳು ರಚಿತವಾದವು. ಪರಿಣಾಮವಾಗಿ ಎಲ್ಲೆಲ್ಲೂ ಹಾಹಾಕಾರ, ಅಶಾಂತಿ!



ಇಂಥ ಸಮಯದಲ್ಲಿ, ಬಂಡವಾಳಶಾಹಿಗೆ ವಿರುದ್ಧವಾಗಿ, ಎಲ್ಲ ಬಗೆಯ ಕ್ರಾಂತಿಗಳಿಗೆ ಪರ್ಯಾಯವಾಗಿ ಇರುವ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಕ್ರಾಂತಿಯೆಂದರೆ ಸರ್ವೋದಯ ಸಮಾಜ ರಚನೆಯ ಕ್ರಾಂತಿ. ಈ ಕ್ರಾಂತಿ ಸತ್ಯ ಅಹಿಂಸೆ-ಕರುಣೆ-ಸಹಕಾರದೊಂದಿಗೆ ಪ್ರಾರಂಭವಾಗಿ, ಅದೇ ನೆಲಗಟ್ಟಿನಲ್ಲಿ ಕ್ರಾಂತಿಯ ಪ್ರಕ್ರಿಯೆ ನಡೆದು ಅಂತಿಮವಾಗಿ ಸರ್ವೋದಯ ಸಮಾಜ ರಚನೆಯಲ್ಲಿ ಪರಿಸಮಾಪ್ತಿಗೊಳ್ಳುತ್ತ ಕ್ರಮೇಣ ಹೆಚ್ಚು-ಹೆಚ್ಚು ಪರಿಶುದ್ಧಗೊಳ್ಳುತ್ತ ಹೋಗುತ್ತದೆ. ಸರ್ವೋದಯ ಸಮಾಜ ರಚನಾ ಕ್ರಾಂತಿಯಲ್ಲಿ ಸಾಧ್ಯ ಮತ್ತು ಸಾಧನ ಗಳ ಮಧ್ಯದ ಪಾವಿತ್ರ್ಯ ಉಳಿದುಕೊಂಡು ಬರುತ್ತದೆ. ಹಾಗೂ ಅದು ಮುಖ್ಯವಾಗಿಯೂ ಉಳಿಯುತ್ತದೆ. ಈ ಗುಣವಿಶೇಷ ಬೇರೆ ಕ್ರಾಂತಿಗಳಲ್ಲಿ ಇಲ್ಲದ್ದರಿಂದಲೇ ಅವು ತಮ್ಮ ಕಾಲುಮುರಿದುಕೊಂಡು ವಿಕಲಾಂಗವಾಗಿ ಕುಳಿತಿವೆ. ಆದರೆ ಅಂಥ ಭೀತಿ ಸರ್ವೋದಯ ಸಮಾಜ ಕ್ರಾಂತಿಗೆ ಇಲ್ಲ. ಅದು ಯಾವಾಗಲೂ ದೃಢ, ನಿಶ್ಚಲ ಮತ್ತು ನವನವೀನ.

ಸರ್ವೋದಯ ಸಮಾಜ ರಚನೆಯ ಕ್ರಾಂತಿಯ ವಿಚಾರವನ್ನು ಹುಟ್ಟು ಹಾಕಿದವ ಜಗತ್ತನ್ನೇ ತನ್ನ ಪದತಲದಲ್ಲಿಟ್ಟುಕೊಳ್ಳಬೇಕೆಂದು ಬಯಸಿದ್ದ ಹಿಟ್ಲರ್, ಮೆಕೆಂಜಿ ಅಥವಾ ನೆಪೋಲಿಯನ್‌ನಂಥವನಲ್ಲ; ಭಯೋತ್ಪಾದಕತೆಯ ಮೂಲಕ ಧರ್ಮಗ್ಲಾನಿಯನ್ನುಂಟು ಮಾಡಲು ಹೊರಟಿರುವ ಇಂದಿನ ಬಿನ್‌ಲಾಡನ್ ನಂಥವನಲ್ಲ; ತನ್ನ ಅಪರಿಮಿತ ಬಂಡವಾಳದ ಬಲದಿಂದ ಜಗತ್ತಿನ ಎಲ್ಲ ದೇಶಗಳನ್ನು ತನ್ನ ವಸಾಹತುಗಳನ್ನಾಗಿ ಮಾಡಹೊರಟಿರುವ ಒಬಾಮಾನಂಥವನಲ್ಲ. ಆತ ಒಬ್ಬ ಸತ್ಯಶೋಧಕ; ಸತ್ಯಾಗ್ರಹಿ, ರಾಜಕಾರಣವನ್ನು ಅಧ್ಯಾತ್ಮಿಕಗೊಳಿಸಲು ಬಯಸಿದ್ದವ. "ರಾಜ್ಯದ ಮೋಹವಿಲ್ಲದ, ಸ್ವರ್ಗದಾಸೆಯಿಲ್ಲದ ಕೇವಲ ದುಃಖಿತಪ್ತರ ಕಣ್ಣೀರನ್ನು ಒರೆಸುವ ಬಯಕೆಯವ. ಆದ್ದರಿಂದಲೇ ಅಧಿಕಾರ ಪಿಪಾಸುವಾಗಿದ್ದ ಇಟಲಿ ದೇಶದ ಸರ್ವಾಧಿಕಾರಿ ಮುಸಲೋನಿಯನ್ನು ಅವನ ಅರಮನೆಯಲ್ಲಿಯೇ ಭೇಟಿಮಾಡಿ ಅವನಿಗೆ ಅಹಿಂಸೆಯ ಶಕ್ತಿಯನ್ನು ವಿವರಿಸಿದವ. ಆತನೇ ಮಹಾತ್ಮ ಗಾಂಧಿ.

ಗಾಂಧೀ ತಮ್ಮ ಆತ್ಮಕಥೆಯನ್ನು ಬರೆದು ಮುಗಿಸಿದ್ದು 1925ರಲ್ಲಿ. ಇಲ್ಲಿಗೆ ಎಂಭತ್ತಾರು ವರ್ಷಗಳಾದವು. ಈ ಎಂಟು ದಶಕಗಳಲ್ಲಿ ಗಾಂಧೀ ವಿಚಾರ ಬೆಳೆಯುತ್ತಲೇ ಬಂದಿದೆ. ವಿಸ್ತಾರಗೊಳ್ಳುತ್ತಲೇ ಬಂದಿದೆ. ಅಚ್ಚ ಹೊಸದಾಗಿಯೇ ಉಳಿದಿದೆ. ಮುಂದಿನ ವರ್ಷಗಳಲ್ಲಿ ಅದು ಈಗಿಗಿಂತ ಹೆಚ್ಚು ತುರ್ತು ಮತ್ತು ಅನಿವಾರ್ಯವೆನಿಸಲಿದೆ. ಗಾಂಧೀ ವಿಚಾರಕ್ಕೆ ಇನ್ನೂ ಗಮ್ಯದೊರಕಿಲ್ಲ. ಅದರ ಹುಡುಕಾಟದಲ್ಲಿಯೇ ಅದು ನಿರಂತರವಾಗಿ ತೊಡಗಿದೆ. ಗಂಗೆಗೆ ಸಾಗರ ಸೇರಿದಾಗಲೇ ನೆಮ್ಮದಿ. ಅದೇ ರೀತಿ ಗಾಂಧೀ ವಿಚಾರಕ್ಕೆ ಸರ್ವೋದಯಕ್ಕಾಗಿ ಕ್ರಾಂತಿಯನ್ನುಂಟುಮಾಡಿದಾಗಲೇ ನೆಮ್ಮದಿ. ಯಾವ ರೀತಿ ಒಂದು ವೈಜ್ಞಾನಿಕ ಶೋಧನೆ ಸಾರ್ಥಕವಾಗಬೇಕಾದರೆ ಅದು ಪ್ರಯೋಜನಕ್ಕೆ ಬರಬೇಕು. ಹಾಗೆಯೇ ಗಾಂಧೀ ಮಾಡಿದ ಸತ್ಯದೊಂದಿಗಿನ ಪ್ರಯೋಗ, ಮತ್ತು ತನ್ಮೂಲಕ 'ಸೃಷ್ಟಿಕರ್ತ'ನನ್ನೇ ತ್ಯಜಿಸಿ ಕೃತಘ್ನನಾದ ವಿಚಾರ ಅರಿತದ್ದನ್ನು ಇಂದಿನ ಸಮಾಜವು ಅರಿತಾಗಲೇ ಗಾಂಧೀ ವಿಚಾರಕ್ಕೆ ಮುಂದಿನ ಚಾಲನೆ ಸಿಗುತ್ತದೆ. ಇಲ್ಲವಾದರೆ ದಾರಿ ಕ್ರಮಿಸಲು ಸಾಧ್ಯವಾಗದ ಹೆಳವನಂತೆ ಪುಸ್ತಕಗಳಲ್ಲಿ, ಲೇಖನಗಳಲ್ಲಿ, ವಿಚಾರಗೋಷ್ಠಿಗಳಲ್ಲಿ, ಕಲ್ಲುಕಟ್ಟಡಗಳಲ್ಲಿ ಸದಾಕಾಲ ಬಂಧಿತವಾಗಿರಬೇಕಾಗುತ್ತದೆ. ಹಾಗೇನಾದರೂ ಆದಲ್ಲಿ ಅದು ಇಪ್ಪತ್ತೊಂದನೇ ಶತಮಾನದ ಅತ್ಯಂತ ದೊಡ್ಡ ದುರಂತವಾಗುವುದರಲ್ಲಿ ಸಂದೇಹವಿಲ್ಲ. ಆ ದುರಂತವನ್ನು ತಪ್ಪಿಸುವ ಹೊಣೆ ಕೇವಲ ಭಾರತೀಯರದ್ದಲ್ಲ, ಕೇವಲ ಗಾಂಧೀ ವಿಚಾರವಾದಿಗಳದ್ದಲ್ಲ. ಅದು ಮಾನವಕೋಟಿಯ ಪ್ರತಿಯೊಬ್ಬ ಸದಸ್ಯನದೂ ಆಗುತ್ತದೆ. ಗಾಂಧೀ ತಮ್ಮ ಆತ್ಮಚರಿತ್ರೆಯನ್ನು 'ಶುಭಂ' ಎಂದು ಬೇರೆಲ್ಲ ಆತ್ಮಚರಿತ್ರ ಕಾರರಂತೆ ಮುಗಿಸಿಲ್ಲ. ಬದಲಿಗೆ ತಾವು "ವಾಚಕರಿಂದ ತಾತ್ಕಾಲಿಕವಾಗಿ ಬೀಳ್ಕೊಳುತ್ತೇನೆ" ಎಂದು ಬರೆದಿದ್ದಾರೆ. ಅಂದರೆ ಅವರು ಮಾಡಿದ ಸತ್ಯದೊಂದಿಗಿನ ಪ್ರಯೋಗ, ತನ್ಮೂಲಕ ಅವರು ಮಾಡಿದ ಸತ್ಯಾಗ್ರಹದ ಪ್ರಯೋಗ ಅಂತ್ಯ ಕಂಡಿಲ್ಲ; ಅದನ್ನು ಮುಂದಿನವರು ಮುನ್ನಡೆಸಿಕೊಂಡು ಹೋಗಿ ಎಂದರ್ಥ. ಆದರೆ ಇಂದಿನವರಿಗೆ ಗಾಂಧೀ ವಿಚಾರ ಬೇಕಿಲ್ಲ; ಸತ್ಯಾಗ್ರಹ ಬೇಕಿಲ್ಲ; ಅಹಿಂಸೆ ಬೇಕಿಲ್ಲ; ಗಾಂಧೀ ವಿಚಾರದ ಸಾರ್ಥಕತೆ ಎಲ್ಲಿದೆ, ಯಾತರಲ್ಲಿದೆ, ಅದನ್ನು ಮುನ್ನಡೆಸಿಕೊಂಡು ಹೋಗಬೇಕಾದ ಇನ್ನೂ ಬಲವಾದ ಕಾರ್ಯಶಕ್ತಿಯಾವುದು ಎಂಬುದನ್ನು ಇಂದಿನವರು ಗಂಭೀರವಾಗಿ ಆಲೋಚಿಸುತ್ತಿಲ್ಲ. ಏಕೆಂದರೆ ಇಂದಿನ ಜನರು ಗಾಂಧೀವಿಚಾರ



ಸ್ವೀಕರಿಸಲು ಮಾನಸಿಕವಾಗಿ ಸಿದ್ಧರಾಗಿಲ್ಲ. ಯಾವ ದಿನ ಆ ರೀತಿ ಸಿದ್ಧರಾಗುತ್ತಾರೋ ಆ ದಿನದಿಂದ ಗಾಂಧೀ ವಿಚಾರಕ್ಕೆ ಪುನಃ ಚಾಲನೆ ಸಿಗುತ್ತದಷ್ಟೇ ಅಲ್ಲ, ಆಗ ಅದೊಂದು ಏಕವ್ಯಕ್ತಿಯ ಸತ್ಯದೊಂದಿಗಿನ ಪ್ರಯೋಗವಾಗದೆ ಇಡೀ ಮಾನವಕುಲವೇ ಒಟ್ಟಿಗೆ ಸೇರಿ ಮಾಡಿದ ಸತ್ಯದೊಂದಿಗಿನ ಪ್ರಯೋಗವಾಗುತ್ತದೆ. ಸೃಷ್ಟಿಕರ್ತನನ್ನೇ ತ್ಯಜಿಸಿದ ಕೃತಘ್ನತೆಯ ಶಾಪದಿಂದ ವಿಮುಕ್ತಗೊಳ್ಳುತ್ತದೆ. ಆಗ ಸರ್ವೋದಯ ಸಮಾಜ ಸ್ಥಾಪಿಸಬೇಕಾದ ಅಗತ್ಯ ಉಂಟಾಗುತ್ತದೆ. ಮತ್ತು ಅದಕ್ಕಾಗಿ ಜನರು ತಮ್ಮನ್ನು ಸರ್ವೋದಯ ಕ್ರಾಂತಿಯ ಹರಿಕಾರರನ್ನಾಗಿ ಮಾಡಿಕೊಳ್ಳುತ್ತಾರೆ; ಆಚಾರ್ಯ ವಿನೋಬಾರಂತೆ, ಲೋಕನಾಯಕ ಜಯಪ್ರಕಾಶ ನಾರಾಯಣರಂತೆ, ಸ್ವತಃ ಗಾಂಧೀಯವರಂತೆಯೇ. ಆಗ ಮಾನವಕುಲ ಗಾಂಧೀಯವರಲ್ಲಿ ಹಿಮಾಲಯದ ಶಾಂತಿ ಮತ್ತು ಬಂಗಾಲದ ಕ್ರಾಂತಿ ದೊರೆತು ಗಾಂಧೀಯವರಲ್ಲಿ ಅವೆರಡರ ಅಪೂರ್ವ ಸಂಗಮವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾರೆ; ಸರ್ವೋದಯ ಸಮಾಜ ರಚನೆಯ ಕ್ರಾಂತಿಯಲ್ಲಿ ತಮ್ಮನ್ನು ಶ್ರದ್ಧಾಪೂರ್ವಕ ಮತ್ತು ಬುದ್ಧಿಪೂರ್ವಕ ತೊಡಗಿಸಿಕೊಳ್ಳುತ್ತಾರೆ. ಸರ್ವೋದಯ ಕ್ರಾಂತಿಯಾಗುವವರೆಗೂ ನಿಲ್ಲುವುದಿಲ್ಲ.

ಗಾಂಧೀ ವಿಚಾರವೆಂಬುದು ಶುಷ್ಕ ವಿಚಾರವಲ್ಲ, ಟೊಳ್ಳು ವಿಚಾರವಲ್ಲ. ಗಾಂಧೀಯವರೇ ಸ್ವತಃ ಹೇಳಿದಂತೆ "ಗಾಂಧೀ ಪಂಥ ಎಂಬುದೊಂದಿಲ್ಲ. ನನ್ನ ತರುವಾಯ ಯಾವ ಪಂಥವನ್ನೂ ಕಟ್ಟಿಹೋಗುವ ವಿಚಾರ ನನಗಿಲ್ಲ", ಅವರಿಗೆ ಬೇಕಾಗಿದ್ದುದು ಅಂತ್ಯೋದಯದ ಮೂಲಕ ಸರ್ವೋದಯ. ಏಕೆಂದರೆ ಸರ್ವೋದಯ ಸಮಾಜ ರಚನೆಯ ಕ್ರಾಂತಿಯ ಪಾಂಚಜನ್ಯವನ್ನು ಊದಿದ ವಿನೋಬಾ ಹೇಳುವಂತೆ, "ಜಗತ್ತು ಇಂದು ಅನ್ಯಾಯ, ಪೀಡನೆ ಮತ್ತು ಶೋಷಣೆಗಳಿಂದ ತ್ರಸ್ತವಾಗಿದೆ. ಸತ್ತೆಯ ಮುಷ್ಟಿಯಲ್ಲಿ ಅದರ ಉಸಿರು ಕಟ್ಟಿ ಹೋಗುತ್ತಿದೆ. ಯುದ್ಧ ಮತ್ತು ಶಸ್ತ್ರಾಸ್ತ್ರಗಳ ತಾಪದಿಂದ ಅದು ಪೀಡಿತವಾಗಿದೆ. ವರದಾನವಾಗಬೇಕಾಗಿದ್ದ ವಿಜ್ಞಾನ ಇಂದು ಶಾಪವಾಗಿ ಬಿಟ್ಟಿದೆ. ಏಕೆಂದರೆ ವಿಜ್ಞಾನವು ಸತ್ತೆ, ಸಂಪತ್ತು ಮತ್ತು ಸ್ವಾರ್ಥಗಳಿಗೆ ಮಾರಿಹೋಗಿದೆ. ಇಂದಿನ ಈ ಭಯಾವಹ ಸ್ಥಿತಿಯಿಂದ ಮುಕ್ತವಾಗಲು ಸರ್ವೋದಯ ವಿಚಾರ ದಾರಿ ತೋರಿಸುತ್ತಿದೆ. ಗಾಂಧೀಜಿ ಈ ಮಾತನ್ನು ಬಹಳ ಹಿಂದೆಯೇ ಹೇಳಿದ್ದರು. ಆದರೆ ಗಾಂಧೀ ವಿಚಾರವಾದಿಗಳೆಂದು ಕರೆದುಕೊಳ್ಳುವ ಜನರು, ಗಾಂಧೀ ವಿಚಾರದಲ್ಲಿ ನಂಬಿಕೆಯಿದೆಯೆಂದು ಹೇಳಿಕೊಳ್ಳುವ ಜನರು, ಗಾಂಧೀ ಹೆಸರನ್ನು ಹೊಂದಿದ ಶೈಕ್ಷಣಿಕ ಮತ್ತು ಸಾಮಾಜಿಕ ಸಂಸ್ಥೆಗಳವರು ಸರ್ವೋದಯ ಕ್ರಾಂತಿಯ ಅಗತ್ಯವನ್ನು ಮರೆತಿದ್ದಾರೆ. ಹಾಗೆ ಮಾಡುವುದರ ಮೂಲಕ ಗಾಂಧೀ ವಿಚಾರಕ್ಕೆ ಅನ್ಯಾಯ ಮಾಡುತ್ತಿದ್ದೇವೆಂಬ ತಪ್ಪಿನ ಅರಿವು ಅವರಿಗಿಲ್ಲವಾಗಿದೆ. ಈ ವಿಚಾರದಲ್ಲಿ ಅತ್ಯಂತ ಜಾಗೃತರಾಗಿದ್ದಂಥ ಮೂರು ವ್ಯಕ್ತಿಗಳು ನಮಗೆ ಸಿಗುತ್ತಾರೆ. ಅವರು ಗಾಂಧೀ ವಿಚಾರದಿಂದ, ಗಾಂಧೀಯವರ ಸಹವಾಸದಿಂದ ಪ್ರಭಾವಿತರಾದವರೇ. ಗಾಂಧೀ ವಿಚಾರ ಕೇವಲ ಒಂದು ಮಾನಸಿಕ ವಿಚಾರವಲ್ಲ, ಅದೊಂದು ಪ್ರಾಪಂಚಿಕ ಶಕ್ತಿ ಎಂದು ಅವರು ಪರಿಭಾವಿಸಿದ್ದರು. ಇಂದು ಜಗತ್ತಿನಲ್ಲಿ ಪ್ರಚಲಿತವಿರುವ (ಸಾಮ್ಯವಾದ, ಸಮಾಜವಾದ, ಬಂಡವಾಳಶಾಹಿವಾದ, ಕೋಮುವಾದ ಮತ್ತು ಹಿಂಸೆಯನ್ನೇ ತಮ್ಮ ಸಾಧನವನ್ನಾಗಿ ಮಾಡಿಕೊಂಡು ಗೊತ್ತುಗುರಿಯಿಲ್ಲದೆ ಅಮಾನುಷ ಕೃತ್ಯಗಳಲ್ಲಿ ತೊಡಗಿರುವ ನಕ್ಸಲವಾದ, ಮಾವೋವಾದ ಹಾಗೂ ತುಂಬ ಇತ್ತೀಚೆಗೆ ಕಾಣಿಸಿಕೊಂಡಿರುವ ಒಬಾಮಾ ವಾದ, ಒಸಾಮಾ ಬಿನ್ ಲಾಡೆನ್ ವಾದ ಹಾಗೂ ಅಭಿವೃದ್ಧಿವಾದ ಮುಂತಾದ) ಎಲ್ಲ ಬಗೆಯ ವರ್ತಮಾನ ಮತ್ತು ಭವಿಷ್ಯದ ಎಲ್ಲ ವಾದಗಳನ್ನು ಹಿಂದಕ್ಕೆ ಸರಿಸಿ ಭೂಮಿಯ ಮೇಲಿರುವ ಮಾನವಜೀವಿಯನ್ನು ಸೇರಿ ಎಲ್ಲ ಬಗೆಯ ಜೀವಕೋಟಿಗಳ ಆತ್ಮೋದ್ಧಾರದ ವಿಚಾರ ಗಾಂಧೀ ವಿಚಾರವೆಂದೂ, ಆ ಗಾಂಧೀ ವಿಚಾರ ಕರ್ಮಕ್ಷೇತ್ರದಲ್ಲಿ ಸಾರ್ಥಕ್ಯ ಪಡೆಯಬೇಕಾದರೆ ಅದು ಸರ್ವೋದಯ ಸಮಾಜ ರಚನೆಯ ಕ್ರಾಂತಿಯಲ್ಲಿ ಪರಿವರ್ತಿತವಾಗಬೇಕೆಂದೂ ನಂಬಿದ್ದರು. ಅದಕ್ಕಾಗಿ ತಮ್ಮ ಜೀವನವನ್ನೇ ತ್ಯಾಗ ಮಾಡಿದರು. ಆ ಮೂರು ವ್ಯಕ್ತಿಗಳು ಈಗಾಗಲೇ ತಿಳಿಸಿರುವಂತೆ ಸಂತ ವಿನೋಬಾ, ಲೋಕನಾಯಕ ಜಯಪ್ರಕಾಶ ನಾರಾಯಣ ಮತ್ತು ಸ್ವತಃ ಗಾಂಧಿ.

ಗಾಂಧೀಯವರ ಹತ್ಯೆಯಾಗುತ್ತಲೇ ದೇಶದ ರಾಜಕಾರಣದಲ್ಲಿ, ರಚನಾತ್ಮಕ ಕಾರ್ಯಕ್ಷೇತ್ರದಲ್ಲಿ ಹಾಗೂ ಜನಮಾನಸದಲ್ಲಿ ಒಂದು ಪ್ರಕಾರದ ಶೂನ್ಯಾವಸ್ಥೆ ಉಂಟಾಯಿತು. ಹಾಗೆ ಆದದ್ದು ಯಾರು ಗಾಂಧೀಜಿಯವರನ್ನು ಕೇವಲ ವ್ಯಕ್ತಿಯೆಂದಾಗಿ ಪರಿಭಾವಿಸಿದ್ದರೋ, ಯಾರು ಗಾಂಧಿಯನ್ನು ದೇಶಕ್ಕೆ



ಸ್ವಾತಂತ್ರ್ಯ ತರುವ ಸಾಧನ ಮಾತ್ರವೆಂದು ಪರಿಭಾವಿಸಿದ್ದರೋ ಅಂಥವರಿಗೆ ಮಾತ್ರ. ಆದರೆ ಗಾಂಧೀಜಿಯವರ ಜೀವನವನ್ನು, ಅವರ ಸತ್ಯದೊಂದಿಗಿನ ಪ್ರಯೋಗವನ್ನು ಯಾರು ನಿಕಟವಾಗಿ ತಿಳಿದಿದ್ದರೋ ಅಂಥವರಿಗೆ ಗಾಂಧೀಯವರ ಹತ್ಯೆ ಹೊಸ ಭಾರತೀಯ ಸಮಾಜ ರಚನೆಗೆ ಆಹ್ವಾನವಾಯಿತು, ವೀಳ್ಯ ಕೊಟ್ಟಿತು. ಅವರಿಗೆ ಗಾಂಧೀಜಿ ಕೊಟ್ಟಿದ್ದ ಸರ್ವೋದಯ ಶಬ್ದ ತಾರಕಮಂತ್ರವಾಯಿತು, ಧ್ರುವತಾರೆಯಾಯಿತು. ದೇಶದ ಪ್ರತಿಯೊಂದು ಹಳ್ಳಿಯನ್ನು ಗಣರಾಜ್ಯವನ್ನಾಗಿ ಮಾಡಬೇಕೆಂಬ ಸಂಕಲ್ಪ ತೊಟ್ಟರು. ಬೇರೆಲ್ಲ ವಿವಿಧ ಪ್ರಕಾರದ ವಾದಿಗಳು ಇಂದಿನ ಜಗತ್ತನ್ನು ಮುದುಕನೆಂದು ಭಾವಿಸಿದರೆ ಅದನ್ನು ಇವರು ಯುವಶಕ್ತಿಯ ಸ್ಫೋಟಕ್ಕೆ ಯೋಗ್ಯವಾದ ತಾಣವೆಂದು ಭಾವಿಸಿದರು. ಆದ್ದರಿಂದ ಇಡೀ ಜಗತ್ತಿಗೇ ಅನ್ವಯವಾಗುವ ಸರ್ವೋದಯ ಸಮಾಜದ ಕ್ರಾಂತಿಗಾಗಿ ಮುನ್ನಡೆದರು, 'ಜೈಜಗತ್' ಎಂಬ ಸ್ಫೂರ್ತಿದಾಯಕ ರಾಜಕಾರಣವನ್ನು ಆಧ್ಯಾತ್ಮಿಕಗೊಳಿಸಬೇಕೆಂದು ಬಯಸಿದ್ದರೆ, ಇವರು ರಾಜನೀತಿಯನ್ನೇ ಮುಗಿಸಿಬಿಡಬೇಕೆಂದು ಬಯಸಿದರು! ಗಾಂಧಿಯವರು ಈ ಕ್ರಾಂತಿಯ ಸಾಕ್ಷಾತ್ಕಾರಕ್ಕಾಗಿ ನಲವತ್ತು ವರ್ಷ ಕೆಲಸ ಮಾಡಿದ್ದಾರೆ. ಆಚಾರ್ಯ ವಿನೋಬಾ ಇಪ್ಪತ್ತು ವರ್ಷ ಕೆಲಸ ಮಾಡಿದರೆ, ಜಯಪ್ರಕಾಶ ನಾರಾಯಣ ಹತ್ತು ವರ್ಷ ಕೆಲಸ ಮಾಡಿದ್ದಾರೆ. ಸರ್ವೋದಯ ಕ್ರಾಂತಿ ಕೆಲಸಕ್ಕಾಗಿ ಎಪ್ಪತ್ತು ವರ್ಷದ ಪರಿಶ್ರಮ, ತ್ಯಾಗ ಮತ್ತು ಚಿಂತನೆಯಿದೆ. ಕೃತಿಯಲ್ಲಿ ಬಾರದಂಥ ಯಾವ ವಿಚಾರವೂ ಗಾಂಧೀಜಿಯವರದು ಇರುತ್ತಿರಲಿಲ್ಲ. ಅದು ಅವರ ವೈಶಿಷ್ಟ್ಯ. ಸರ್ವೋದಯ ಸಮಾಜ ರಚನೆಯ ಕ್ರಾಂತಿಯ ವಿಚಾರ ಸಹ ಕೃತಿಯಲ್ಲಿ ಬಾರದಂತಹ ವಿಚಾರವೇನಲ್ಲ. ಕೆಲಸವೇನಲ್ಲ. ಇದು ಕಾರ್ಯಗತವಾಗುವುದಕ್ಕೆ ಎಲ್ಲರೂ ಮಾಡಬಹುದಾದ ಸರಳ ಉಪಾಯವನ್ನು ಸೂಚಿಸಿದ್ದರು. ಅದು ರಚನಾತ್ಮಕ ಕಾರ್ಯಕ್ರಮ. ರಚನಾತ್ಮಕ ಕಾರ್ಯವೆಂದರೆ ಪೂರ್ಣ ಸ್ವರಾಜ್ಯದ ಸ್ಥಾಪನೆಗಾಗಿ ಸಾಮೂಹಿಕ ಪ್ರಯತ್ನ. ಪ್ರತಿಯೊಂದು ಯೋಗ್ಯ ರಾಜಕೀಯ ಸಿದ್ಧಾಂತಕ್ಕೆ ಅದಕ್ಕೆ ಹಿತೋನ್ನತಿಯಾಗಿರಬೇಕೆಂದು ಗಾಂಧೀಜಿ ಹೇಳಿದ್ದರು. ಇಂಥ ಯಾವ ಯಾವ ರಾಜಕೀಯ ಸಿದ್ಧಾಂತಗಳನ್ನು ಇಟ್ಟುಕೊಂಡು ಕ್ರಾಂತಿಗಳು ನಡೆದಿದೆಯೋ ಅವೆಲ್ಲವುದರ ಸ್ಥಿತಿ ಗುರಿಮುಟ್ಟದ 'ಅಹಂಕಾರಿ ಮೊಲ'ದಂತೆ ಆಗಿದೆ. ಗಾಂಧೀಜಿ ಪ್ರತಿಪಾದಿಸಿದ ಸರ್ವೋದಯ ಸಮಾಜ ರಚನೆಯ ಕ್ರಾಂತಿ ರಚನಾತ್ಮಕ ಕೆಲಸಗಳಿಂದಲೇ ಪ್ರಾರಂಭವಾಯಿತು. ಅದು ನೆರವೇರಬೇಕಾದ್ದೂ ರಚನಾತ್ಮಕ ಕಾರ್ಯಗಳಿಂದಲೇ.

ಪ್ರತಿಯೊಂದು ಕ್ರಾಂತಿಗೂ ತನ್ನ ಗುರಿಗೆ ತಕ್ಕಂಥ ಪ್ರಣಾಳಿಕೆಯಿರಬೇಕಾಗುತ್ತದೆ; ಇಂದು ಕೆಲ ಕ್ರಾಂತಿಗಳಿಗಂತೂ ಗೌಪ್ಯ ಪ್ರಣಾಳಿಕೆಯಿರುತ್ತದೆ ! ಆ ಕ್ರಾಂತಿಕಾರರಿಗೆ ಸ್ವತಃ ತಾವು ಯಾವ ಉದ್ದೇಶಕ್ಕಾಗಿ ಮತ್ತು ಯಾವ ಪ್ರಕಾರದ ಸಮಾಜ ವ್ಯವಸ್ಥೆಯ ಕ್ರಾಂತಿಗಾಗಿ ಹೋರಾಟ ಮಾಡುತ್ತಿದ್ದೇವೆಂಬುದರ ತಿಳುವಳಿಕೆಯೇ ಇರುವುದಿಲ್ಲ. ಗಾಂಧಿ ಪ್ರಣೀತ ಸರ್ವೋದಯ ಕ್ರಾಂತಿಗೆ ಗುರಿಯೂ ನಿಚ್ಚಳವಾಗಿದೆ, ಮಾರ್ಗವೂ ನಿಚ್ಚಳವಾಗಿದೆ, ಸಾಧನಗಳೂ ನಿಚ್ಚಳವಾಗಿವೆ. ಗೌಪ್ಯ ಪ್ರಣಾಳಿಕೆಯೆಂಬುದೇ ಇಲ್ಲ. ಸರ್ವೋದಯ ಸಮಾಜ ರಚನೆಯ ಕ್ರಾಂತಿಗೆ ಗಾಂಧೀಜಿಯವರು 1909ರಲ್ಲಿ ಬರೆದ 'ಹಿಂದ್‌ಸ್ವರಾಜ್' ಪುಸ್ತಕವೇ ಪ್ರಣಾಳಿಕೆಯೆಂದು ಭಾವಿಸಬಹುದಾದಷ್ಟು ಪ್ರಸ್ತುತವಾಗಿದೆ. ಆದ್ದರಿಂದ ಸಮಾಜ ಪರಿವರ್ತನೆಗಾಗಿಯೂ ರಚನಾತ್ಮಕ ಕಾರ್ಯ. ಸಮಾಜ ನಿರ್ಮಾಣಕ್ಕೂ ರಚನಾತ್ಮಕ ಕಾರ್ಯ.

ಇಂದು ದೇಶಕ್ಕೆ ಸ್ವಾತಂತ್ರ್ಯ ಬಂದು ಆರು ದಶಕಗಳು, ಗಾಂಧೀಜಿಯವರು ಸರ್ವೋದಯ ವಿಚಾರ ಹೇಳಿ ನೂರುವರ್ಷಗಳಾದರೂ ಸರ್ವೋದಯ ಕ್ರಾಂತಿ ಮೂಲಕ ಸರ್ವೋದಯ ಸಮಾಜ ರಚನೆಯಾಗದೇ ಇದ್ದರೆ ಭಾರತೀಯರು ತಮ್ಮ ಸ್ವಶಕ್ತಿಯಿಂದ ರಚನಾತ್ಮಕ ಕಾರ್ಯಕ್ರಮಗಳನ್ನು ಶ್ರದ್ಧೆಯಿಂದಲೂ, ಬದ್ಧತೆಯಿಂದಲೂ ನಡೆಸಿಕೊಂಡು ಬರದೇ ಇದ್ದುದು ಕಾರಣವೇ ಹೊರತು ಗಾಂಧೀ ಪ್ರತಿಪಾದಿಸಿದ ಸರ್ವೋದಯ ವಿಚಾರದಲ್ಲಿಯ ದೋಷಗಳಲ್ಲ. ○





# ಅಂದು ಬುದ್ಧ ಬಸವಣ್ಣ ಇಂದು ಗಾಂಧಿ

– ಕಂಬಯ್ಯ

ದುಃಖಕ್ಕೆ ಕಾರಣ ಆಸೆ. ಆದುದರಿಂದ ದುಃಖದಿಂದ ಬಿಡುಗಡೆ ಹೊಂದುವ ಮಾರ್ಗ ಒಂದೇ. ದುಃಖಕ್ಕೆ ಕಾರಣವಾದುದನ್ನು ಮಾಡಬಾರದು. ದುಃಖಕ್ಕೆ ಕಾರಣವೂ ಸರಳವೇ. ನಮಗೆ ಅಗತ್ಯವಿಲ್ಲದ ವಸ್ತುಗಳ ಬಗ್ಗೆ ಗಮನ, ಅನಂತರ ಆ ವಸ್ತುಗಳ ಬಗ್ಗೆ ಬೆಳೆಸಿಕೊಳ್ಳುವ ಮೋಹ, ಆ ವಸ್ತುಗಳನ್ನು ಪಡೆದುಕೊಳ್ಳಲು ಮತ್ತು ಉಳಿಸಿಕೊಳ್ಳಲು ಮಾಡುವ ಕಡೆಯ ಹಾಗೂ ನಿರಂತರ ಪ್ರಯತ್ನ, ಇವೇ ದುಃಖದ ಕಾರಣಗಳು ಎಂಬುದಾಗಿ ಎರಡು ಸಾವಿರದ ಐದು ನೂರು ವರುಷಗಳ ಹಿಂದೆಯೇ ಗೌತಮ ಬುದ್ಧ ಜಗತ್ತಿಗೆ ಸಾರಿದ ಸಂದೇಶ.

ಯೌವ್ವನದ ಉತ್ತುಂಗದಲ್ಲಿರುವಾಗಲೇ ಈ ಭೌತಿಕ ಜಗತ್ತಿನ ನಶ್ವರತೆಯಿಂದ ಭ್ರಮನಿರಸನಗೊಂಡು ಅರಮನೆಯ ವೈಭೋಗ, ಸುಖದ ಸುಪ್ಪತ್ತಿಗೆ, ಸುಂದರ ಪತ್ನಿ ಪುತ್ರನನ್ನು ತೊರೆದು ಅರಣ್ಯವನ್ನು ಸೇರಿ, ಸತ್ಯದ ಹುಡುಕಾಟ ನಡೆಸಿದ ಸಿದ್ಧಾರ್ಥ ಕೊನೆಗೂ ಸತ್ಯದ ದರ್ಶನ ಪಡೆದು ಲಕ್ಷಾಂತರ ಹೃದಯಗಳ ಪರಿವರ್ತನೆ ಮಾಡಿ, ಆಧ್ಯಾತ್ಮ ಜಗತ್ತಿನಲ್ಲಿ ಶಾಶ್ವತ ಸಾಮ್ರಾಜ್ಯವನ್ನು ಸ್ಥಾಪಿಸಿದ ಸಿದ್ಧಾರ್ಥ ಗೌತಮ ಬುದ್ಧನಾದ. 'ಗೌ' ಎಂದರೆ ಕಣ್ಣು, ಬೆಳಕು; 'ತಮ' ಎಂದರೆ ಕತ್ತಲು, ಅಜ್ಞಾನ. ಗೌತಮ ಬುದ್ಧನೆಂದರೆ ತಮವನ್ನು ಓಡಿಸುವ ಬೆಳಕು; ಅಜ್ಞಾನದ ಕತ್ತಲೆಯನ್ನು ತೊಲಗಿಸಿ ಜ್ಞಾನದ ಬೆಳಕನ್ನು ನೀಡುವ 'ಜ್ಯೋತಿ' ಎಂದು ಅರ್ಥ.

ಗೌತಮ ಬುದ್ಧನು ತನ್ನ ಶಿಷ್ಯರ ಮೂಲಕ ತಾನು ಕಂಡು ಕೊಂಡ ಸತ್ಯವನ್ನು ಅಂದರೆ ದುಃಖ ಸಂಕಟ ನೋವುಗಳಿಗೆ ಕಾರಣವಾದ ಆಸೆಯನ್ನು ತೊರೆದು ಜೀವನಕ್ಕೆ ಎಷ್ಟು ಬೇಕೋ ಅಷ್ಟನ್ನು ಸಂಗ್ರಹಿಸಿಟ್ಟು ಕೊಂಡು ಜೀವನದಲ್ಲಿ ಶಾಂತಿ ಸುಖ ನೆಮ್ಮದಿಯನ್ನು ಕಾಣಬೇಕೆಂಬ ಸತ್ಯದ ಸಂದೇಶವನ್ನು ಜಗತ್ತಿಗೆ ಪ್ರಚುರ ಪಡಿಸುತ್ತಾನೆ. ಸಮಾಜದ ಸುಧಾರಣೆಗೆ ಶ್ರಮಿಸಿದ ಬುದ್ಧ ಮಾನವರೆಲ್ಲರೂ ಒಂದೇ ಎಂಬ ತತ್ವವನ್ನು ಸಾರಿ ಹೇಳಿದವರಲ್ಲಿ ಮೊದಲಿಗ.

ಗೌತಮ ಬುದ್ಧನ ತರುವಾಯ ಕ್ರಿ.ಶ. ಹನ್ನೆರಡನೇ ಶತಮಾನದಲ್ಲಿ ವಚನ ವಾಙ್ಮಯದ ಜನಕ ಬಸವಣ್ಣನವರು ಜ್ಞಾನ, ಅರಿವು, ತಿಳುವಳಿಕೆ ಸಮಾಜದ ಕಟ್ಟಕಡೆಯ ವ್ಯಕ್ತಿಗೂ ತಲುಪಬೇಕೆಂಬ ಸದುದ್ದೇಶದಿಂದ ಸರಳವಾದ, ಸುಲಭವಾಗಿ ಅರ್ಥೈಸಿಕೊಳ್ಳಬಹುದಾದ ವಚನಗಳ ಮೂಲಕ ಸಮಾಜದ ಅಂಕು-ಡೊಂಕುಗಳನ್ನು ತಿದ್ದುವ ಕೆಲಸಗಳಲ್ಲದೆ ಮೌಢ್ಯ, ಅಂಧಶ್ರದ್ಧೆ, ಅರ್ಥಹೀನ ಆಚರಣೆಗಳನ್ನು ಕೈಬಿಡುವಂತೆ ಪ್ರಯತ್ನಗಳನ್ನು ಮಾಡಿದರು. ಅಷ್ಟೇ ಅಲ್ಲ, ವಚನಗಳ ಮೂಲಕ ಧಾರ್ಮಿಕ, ಸಾಮಾಜಿಕ ವೈಚಾರಿಕ ಕ್ರಾಂತಿಯನ್ನೇ ಮಾಡಿದರು. ಲೋಕದ ಡೊಂಕ ನೀವೇಕೆ ತಿದ್ದುವಿರಿ; ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿರೆಂದರು.

ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ, ಆಚಾರವೇ ಸ್ವರ್ಗ, ಅನಾಚಾರವೇ ನರಕವೆಂದರು. ಕೊಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯನೆಂದರು. ದಯವಿಲ್ಲದ ಧರ್ಮ ಯಾವುದಯ್ಯಾ ಎಂದರು. ಸಮಾಜದಲ್ಲಿನ ಮೇಲು ಕೀಳು ಜಾತಿಭೇದಗಳನ್ನು ತೊಡೆದು ಹಾಕಲು ಪ್ರಯತ್ನಿಸಿದರು. ಆ ಕಾಲದಲ್ಲೇ ಮಡಿವಂತ ವರ್ಗದವರ ವಿರೋಧದ ನಡುವೆಯೂ ಅಂತರ್ಜಾತಿ ವಿವಾಹಕ್ಕೆ ನಾಂದಿ ಹಾಡಿದರು.

**ಕಳಬೇಡ ಕೊಲಬೇಡ ಹುಸಿಯನುಡಿಯಲು ಬೇಡ**
**ಮುನಿಯಬೇಡ ಅನ್ಯರಿಗೆ ಅಸಹ್ಯ ಪಡಬೇಡ**
**ತನ್ನ ಬಣ್ಣಿಸಬೇಡ ಇದಿರ ಹಳಿಯಲು ಬೇಡ**
**ಇದೇ ಅಂತರಂಗ ಶುದ್ಧಿ ಇದೇ ಬಹಿರಂಗಶುದ್ಧಿ**
**ಕೂಡಲಸಂಗಮ ದೇವಾ**

ಎಂಬ ಸತ್ಯವನ್ನು ಸಾರಿಹೇಳಿದರು.

ಬಸವಣ್ಣನವರ ವಚನಗಳು ಅಂದಿಗೂ ಇಂದಿಗೂ ಎಂದೆಂದಿಗೂ ಪ್ರಸ್ತುತ.

ಬಸವಣ್ಣನವರ ನಂತರ 15-16ನೇ ಶತಮಾನದಲ್ಲಿ ಬಂದ ದಾಸವರೇಣ್ಯರಲ್ಲಿ ಅಂದರೆ ಪುರಂದರದಾಸರು, ಕನಕದಾಸರು ಪ್ರಮುಖರು. ಇವರು ನಾಡಿನಾದ್ಯಂತ



ಸಂಚರಿಸಿ ತಮ್ಮ ಕೀರ್ತನೆಗಳ ಮೂಲಕ ಉಗಾ ಭೋಗಾದಿಗಳ ಮೂಲಕ ಸಮಾಜದಲ್ಲಿನ ಅರ್ಥಹೀನ ಆಚರಣೆ ಮೂಢನಂಬಿಕೆ, ಅಂಧಶ್ರದ್ಧೆ, ಮೇಲು-ಕೀಳು ಭಾವನೆಗಳನ್ನು ಹೋಗಲಾಡಿಸಲು ಶ್ರಮಿಸಿದ ಮಹನೀಯರು. ಇವರ ನಂತರದಲ್ಲಿ ಬಂದ ಸರ್ವಜ್ಞ ಕವಿಯೂ ಕೂಡ ತ್ರಿಪದಿಯ ಛಂದಸ್ಸಿನಲ್ಲಿ ರಚಿಸಿದ ವಚನಗಳ ಮೂಲಕ ಸಮಾಜವನ್ನು ತಿದ್ದುವ ಕೆಲಸವನ್ನು ಮಾಡುತ್ತಾನೆ.

**ನಡೆವುದೊಂದೇ ಭೂಮಿ ಕುಡಿವುದೊಂದೇ ನೀರು**
**ಸುಡುವಗ್ನಿಯೊಂದೇ ಇರುತಿರಲು ಕುಲಗೋತ್ರ**
**ನಡುವೆ ಎತ್ತಣದು ?**
**ಎಲುವಿನಾಕಾಯಕ್ಕೆ ಸಲೆ ಚರ್ಮದಾ ಹೊದಿಕೆ**
**ಮಲಮೂತ್ರ ಕ್ರಿಮಿಯೊಳಗಿದ್ದ ದೇಹಕ್ಕೆ**
**ಕುಲವಾವುದಯ್ಯಾ** ಎನ್ನುತ್ತಾನೆ.

ಭಗವಾನ್ ಬುದ್ಧ, ವಿಶ್ವಗುರು ಬಸವಣ್ಣ, ದಾಸವರೇಣ್ಯರು ಸರ್ವಜ್ಞ ಮುಂತಾದ ಮಹನೀಯರ ತರುವಾಯ ಹತ್ತೊಂಬತ್ತನೇ ಶತಮಾನದ ಉತ್ತರಾರ್ಧದಲ್ಲಿ ಅವತರಿಸಿದ 'ರಾಷ್ಟ್ರಪಿತ' ಮಹಾತ್ಮಗಾಂಧೀಜಿಯವರು ಭಾರತದ ಭಾಗ್ಯ ವಿಧಾತರೆನಿಸಿದರು. 1869ನೇ ಅಕ್ಟೋಬರ್ 2 ರಂದು ಗುಜರಾತಿನ ಪೋರಬಂದರಿನಲ್ಲಿ ಜನಿಸಿದ ಈ ಮಹಾತ್ಮರು ಸುಮಾರು 150-200 ವರುಷಗಳ ಕಾಲ ಭಾರತವನ್ನಾಳಿದ ಬ್ರಿಟಿಷರ ದಬ್ಬಾಳಿಕೆ ದೌರ್ಜನ್ಯದ ವಿರುದ್ಧ ಭಾರತೀಯರ ದಾಸ್ಯವಿಮೋಚನೆಗಾಗಿ ಅನವರತ ನಡೆಸಿದ ಹೋರಾಟ ಅವಿಸ್ಮರಣೀಯ.

ಗಾಂಧೀಜಿಯವರು ನಡೆಸಿದ ಹೋರಾಟಗಳು ಚಳವಳಿಗಳು ಒಂದೇ ಎರಡೇ! ದಕ್ಷಿಣ ಆಫ್ರಿಕಾದಲ್ಲಿ ಬಿಳಿಯರು ಕರಿಯರ ಮೇಲೆ ನಡೆಸುತ್ತಿದ್ದ ದೌರ್ಜನ್ಯ ವರ್ಣಭೇದ ನೀತಿಗಳ ವಿರುದ್ಧ ಹೋರಾಟನಡೆಸಿ ಯಶಸ್ಸು ಗಳಿಸಲು ನಡೆಸಿದ ಪ್ರಯತ್ನ ಸಾಮಾನ್ಯವಾದದ್ದೇನಲ್ಲ!

ಭಾರತದಲ್ಲಿನ ಚಂಪಾರಣ್ಯದ ನೀಲಿತೋಟಗಳಲ್ಲಿ ದುಡಿಯುತ್ತಿದ್ದ ಬಡಕೂಲಿಕಾರರ ಪರವಾಗಿ ನಿಂತು ಹೋರಾಟ ನಡೆಸಿ ತೋಟದ ಮಾಲೀಕರಿಂದ ಬಡಕೂಲಿಕಾರರಿಗೆ ನ್ಯಾಯವಾಗಿ ಸಲ್ಲಬೇಕಾಗಿದ್ದ ಕೂಲಿಯನ್ನು ಕೊಡಿಸುವುದರಲ್ಲಿ ಯಶಸ್ಸನ್ನು ಕಂಡರು. ಉತ್ತರ ಪ್ರದೇಶದ ಚೌರಿಚೌರಾದಲ್ಲಿನ ನಡೆಸಿದ ಚಳವಳಿ, ಬಾರ್ಡೋಲಿ ಸತ್ಯಾಗ್ರಹ ಇವುಗಳಲ್ಲಿ ಗಾಂಧೀಜಿಯವರು ತೋರಿಸಿದ ಧೈರ್ಯ ಸ್ಥೈರ್ಯಗಳು ಅಸಾಧಾರಣವಾದವುಗಳು.

ಅವರಲ್ಲಿನ ಧೈರ್ಯ ಸ್ಥೈರ್ಯ, ಹಿಡಿದ ಕೆಲಸವನ್ನು ಎಷ್ಟೇ ಕಷ್ಟ ಅಡ್ಡಿ ಆತಂಕಗಳು ಬಂದರೂ ಕೊನೆಮುಟ್ಟಿಸಬೇಕೆಂಬ ಛಲ ಇಚ್ಛಾಶಕ್ತಿಗಳಿಗೆ ಕಾರಣ ಅವರು ಚಿಕ್ಕಂದಿನಲ್ಲಿ ತಮ್ಮ ಊರಿಗೆ ಬಂದಿದ್ದ ಸತ್ಯಹರಿಶ್ಚಂದ್ರನಾಟಕ, ಶ್ರವಣಪಿತೃ ಭಕ್ತಿ ನಾಟಕಗಳು. ಹರಿಶ್ಚಂದ್ರ ಮಹಾರಾಜನು ವಿಶ್ವಾಮಿತ್ರಮುನಿಯಿಂದ ಎಷ್ಟೇ ಕಷ್ಟ ಅಗ್ನಿಪರೀಕ್ಷೆಗಳು ಬಂದರೂ ಸತ್ಯವನ್ನು ಬಿಡದೆ ಸುಳ್ಳನ್ನು ಹೇಳದೆ ಜಯಶಾಲಿಯಾಗುತ್ತಾನೆ. ಶ್ರವಣ ಕುಮಾರನು ಅಂಧರೂ ವೃದ್ಧರೂ ಆದ ತನ್ನ ತಂದೆತಾಯಿಗಳನ್ನು ಜೋಲಿಯಲ್ಲಿ ಹೊತ್ತುಕೊಂಡು ತೀರ್ಥಯಾತ್ರೆ ಮಾಡಿಸುತ್ತಾನೆ. ಈ ಎರಡು ನಾಟಕಗಳಿಂದ ಸ್ಫೂರ್ತಿಪಡೆದ ಗಾಂಧಿಜಿಯವರು "ಸತ್ಯವೇ ಸೌಂದರ್ಯ ಸೌಂದರ್ಯವೇ ದೇವರು" ಎಂದು ನಂಬಿದ್ದರು ಹಿರಿಯರ ಬಗ್ಗೆ ಭಕ್ತಿ ಗೌರವಗಳನ್ನು ಬೆಳೆಸಿಕೊಂಡರು ಹಿರಿಯರ ಸೇವೆಯೇ ದೇವರಸೇವೆ ಎಂದು ಭಾವಿಸಿದರು.

ಗಾಂಧೀಜಿ ಭಗವದ್ಗೀತೆಯನ್ನು ತಮ್ಮ ತಾಯಿ ಎಂದು ಕರೆದರು. ಶ್ರೀರಾಮ ಚಂದ್ರನನ್ನು ಆದರ್ಶಪುರುಷನೆಂದು ನಂಬಿ ಭಕ್ತಿಯಿಂದ ರಾಮ ನಾಮವನ್ನು ತಮ್ಮ ಜೀವನದ ತಾರಕ ಮಾತ್ರವೆಂದು ಬಗೆದು ಪ್ರತಿನಿತ್ಯವೂ ಪಠಿಸುತ್ತಿದ್ದರು.

1942ರಲ್ಲಿ "ಬ್ರಿಟೀಷರೇ ಭಾರತ ಬಿಟ್ಟು ತೊಲಗಿ" ಎಂಬುದಾಗಿ ಗಾಂಧೀಜಿಯವರು ಚಳುವಳಿಯನ್ನು ಹಮ್ಮಿಕೊಂಡಾಗ ಅನೇಕ ದೇಶ ಪ್ರೇಮಿಗಳು, ಸ್ವಾತಂತ್ರ್ಯಯೋಧರು ಗಾಂಧಿಜಿಯವರ ಬೆನ್ನಿಗೆ ನಿಂತು ಹೋರಾಟ ನಡೆಸಿದ ರೀತಿ ಅವರ್ಣನೀಯ ದಂಡಿಯ ಉಪ್ಪಿನ ಸತ್ಯಾಗ್ರಹವಂತೂ ದೇಶಕಂಡು ಕೇಳರಿಯದಂಥ ಸತ್ಯಾಗ್ರಹ. ಸತ್ಯಾಗ್ರಹವೆಂದರೆ ಸತ್ಯಕ್ಕಾಗಿ ಆಗ್ರಹಪಡಿಸುವುದು ಎಂದು ಅರ್ಥ. ಒಂದು ಪರಮ ಉದ್ದೇಶವನ್ನು ಈಡೇರಿಸಿಕೊಳ್ಳಲು ಅಹಿಂಸಾತ್ಮಕವಾಗಿ ನಡೆಸುವ ಚಳುವಳಿಯೇ ಸತ್ಯಾಗ್ರಹ.

'ಸತ್ಯಾಗ್ರಹ' ಗಾಂಧೀಜಿಯವರು ಭಾರತೀಯರಿಗೆ ಕೊಟ್ಟ ಅಹಿಂಸಾತ್ಮಕ ಅಸ್ತ್ರ ಅಹಿಂಸಾತ್ಮಕ ಚಳವಳಿಯ



ಮೂಲಕ ದೇಶಭಕ್ತರನ್ನು ಮತ್ತು ಸ್ವಾತಂತ್ರ್ಯ ಪ್ರೇಮಿಗಳನ್ನು ಒಗ್ಗೂಡಿಸಿಕೊಂಡು ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಸಂಚರಿಸಿ ಜನತೆಯಲ್ಲಿ ಸ್ವಾತಂತ್ರ್ಯದ ಕಿಚ್ಚನ್ನು ಹೊತ್ತಿಸಿ ಭಾರತಕ್ಕೆ ಸ್ವಾತಂತ್ರ್ಯವನ್ನು ತಂದುಕೊಡುವಲ್ಲಿ ಯಶಸ್ವಿಯಾದರು. ಇದಕ್ಕಾಗಿ ಅವರು ಪಟ್ಟಶ್ರಮ, ಅನುಭವಿಸಿದ ಕಷ್ಟ, ಸೆರೆಮನೆವಾಸ, ಉಪವಾಸ ಮತ್ತು ಸತ್ಯಾಗ್ರಹಗಳಿಗೆ ಲೆಕ್ಕವಿಲ್ಲ.

ಗಾಂಧೀಜಿಯವರನ್ನು ಪೂರ್ಣವಾಗಿ ಅರ್ಥವಾಡಿಕೊಂಡವರು ವಿರಳ. ಅವರೊಬ್ಬ ಬಹುರೂಪಿ. ಕುರುಡರು ಆನೆಯನ್ನು ನೋಡಿದಂತೆ. ಆನೆಯ ಹೊಟ್ಟೆಯ ಭಾಗವನ್ನು (ಹೊರಮೈ) ಮುಟ್ಟಿನೋಡಿದವನು ಆನೆಗೋಡೆಯಂತಿದೆ, ಅದರ ಕಾಲುಗಳನ್ನು ಮುಟ್ಟಿನೋಡಿದವನು ಆನೆ ಕಂಬದಂತಿದೆ, ಅದರ ಸೊಂಡಿಲನ್ನು ಮುಟ್ಟಿನೋಡಿದವನು ಹಾವಿನಂತಿದೆ, ಅದರ ಬಾಲವನ್ನು ಮುಟ್ಟಿನೋಡಿದವನು ಹಗ್ಗದಂತಿದೆ, ಅದರ ಕಿವಿಗಳನ್ನು ಮುಟ್ಟಿನೋಡಿದವನು ಆನೆ ಮೊರದಂತಿದೆ ಎಂಬುದಾಗಿ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಅರ್ಥೈಸಿಕೊಂಡಂತೆ ಗಾಂಧೀಜಿಯವರನ್ನು ಯಾರೂ ಪೂರ್ಣವಾಗಿ ಅರ್ಥಮಾಡಿಕೊಂಡಿಲ್ಲ.

ಗಾಂಧೀಜಿಯವರು ಯಾವುದಾದರೂ ಸಭೆ ಸಮಾರಂಭಗಳಿಗೆ ಬರುತ್ತಾರೆಂದರೆ ಜನ ಸಾಗರದೋಪಾದಿಯಲ್ಲಿ ಬಂದು ಸೇರುತ್ತಿದ್ದರು. ಜನ ಅವರ ಮಾತುಗಳನ್ನು ಮಂತ್ರ ಮುಗ್ಧರಾಗಿ ಆಲಿಸುತ್ತಿದ್ದರು ಗಾಂಧೀಜಿಯವರ ದೇಶ ಪ್ರೇಮಕ್ಕೆ ಬೆಲೆಕಟ್ಟಲಾಗುವುದಿಲ್ಲ. ಅವರೊಬ್ಬ ತ್ಯಾಗ ಜೀವಿ. ಭಾರತ ಸ್ವತಂತ್ರವಾದ ಮೇಲೆ ಅವರು ಇಚ್ಛಿಸಿದ್ದರೆ ಭಾರತ ಸರ್ಕಾರದ ಅತ್ಯುನ್ನತ ಹುದ್ದೆಯನ್ನು ಅಲಂಕರಿಸ ಬಹುದಾಗಿತ್ತು. ಆದರೆ ಅವರು ಅದನ್ನು ಇಷ್ಟಪಡಲಿಲ್ಲ.

ಹನ್ನೆರಡನೇ ಶತಮಾನದಲ್ಲಿ ಬಸವಣ್ಣನವರು ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ ...... ಎಂದು ಸಾರಿದ ಜೀವನದ ಮೌಲ್ಯಗಳು ಗಾಂಧೀಜಿಗೆ ತುಂಬ ಇಷ್ಟವಾದಂತಿದೆ. ಗಾಂಧೀಜಿಯವರ ದೃಷ್ಟಿಯಲ್ಲಿ ಕದಿಯುವ, ಹುಸಿಯುವ, ಸಮಾಜ ವಿರೋಧಿ ನೀತಿಗಳು ಮಹಾಪಾಪಗಳು.,

## ಗಾಂಧೀಜಿಯವರು ಹೇಳಿದ ಸಪ್ತ ಸಾಮಾಜಿಕ ಪಾಪಗಳು

1. ತತ್ವರಹಿತ ರಾಜಕಾರಣ
2. ದುಡಿಮೆಯಿಲ್ಲದ ಸಂಪತ್ತು
3. ನೀತಿಹೀನ ವ್ಯಾಪಾರ
4. ಶೀಲವಿಲ್ಲದ ಶಿಕ್ಷಣ
5. ಮಾನವತಾಶೂನ್ಯ ವಿಜ್ಞಾನ
6. ಆತ್ಮ ಸಾಕ್ಷಿಯಿಲ್ಲದ ಭೋಗ
7. ತ್ಯಾಗವಿಲ್ಲದ ಪೂಜೆ.

ಗಾಂಧೀಜಿಯವರು 'ಅಸ್ಪೃಶ್ಯತೆ' ಎಂಬುದು ಮಾನವ ಕುಲಕ್ಕಂಟಿದ ಕಳಂಕವೆಂದರು. ಒಂದೇ ಧರ್ಮವನ್ನು ಪಾಲಿಸುವ, ಒಂದೇ ದೇವರನ್ನು ಪೂಜಿಸುವ ಸಮಾಜದ ಕಟ್ಟಕಡೆಯ ಸಮುದಾಯವನ್ನು ಕಡೆಗಣಿಸಿ ನೀನು ಹೊಲೆಯ ನೀನು ಮಾದಿಗ ಎಂದು ಮೂದಲಿಸಿ ತಿರಸ್ಕಾರ ದೃಷ್ಟಿಯಿಂದ ಕಾಣುವ ಮೇಲ್ವರ್ಗದವರೆಂದು ಕರೆಸಿ ಕೊಳ್ಳುವ ಜನರದೃಷ್ಟಿ ಎಲ್ಲಿನವರೆಗೆ ಬದಲಾಗುವುದಿಲ್ಲವೋ ಅಲ್ಲಿನವರೆಗೆ ಭಾರತಕ್ಕೆ ಉತ್ತಮ ಭವಿಷ್ಯವಿಲ್ಲ ಎಂದು ಎಚ್ಚರಿಸಿದರು ಗಾಂಧೀಜಿ.

**ಕನ್ನಡದ ಪ್ರಸಿದ್ಧ ಕವಿ ಡಿ.ವಿ.ಜಿ.ಯವರು;**
**ಒಂದೆ ಗಗನವ ಕಾಣುತೊಂದೆ ನೆಲವನು ತುಳಿಯು**
**ತೊಂದೆ ಧಾನ್ಯವನುಣ್ಣು ತೊಂದೆ ನೀರ್ಗುಡಿದು**
**ಒಂದೆ ಗಾಳಿಯ ನುಸಿರ್ವನರಜಾತಿಯೊಳೆಂತು**
**ಬಂದು ದೀ ವೈಷಮ್ಯ ಮಂಕುತಿಮ್ಮ ॥**

ಎಂಬುದಾಗಿ ತಮ್ಮ ಕೃತಿ ಮಂಕು ತಿಮ್ಮನ ಕಗ್ಗದಲ್ಲಿ ಸಮಾಜವನ್ನು ಎಚ್ಚರಿಸಿದ್ದಾರೆ.

ಸ್ವಾತಂತ್ರ್ಯಾ ನಂತರ ಭಾರತ ಇಬ್ಭಾಗವಾಗಿ ಭಾರತ ಪಾಕಿಸ್ತಾನಗಳೆಂದು ಬೇರ್ಪಟ್ಟಾಗ ಕಲ್ಕತ್ತಾದ ನೌಕಾಲಿಯಲ್ಲಿ ಮತೀಯ ಗಲಭೆಯಿಂದ ಹಿಂಸಾಕೃತ್ಯಗಳು ಭುಗಿಲೆದ್ದುವು. ಕೋಮುದಳ್ಳುರಿಯಿಂದಾಗಿ ಅಸಂಖ್ಯಾತ ಅಮಾಯಕರು ಅಸುನೀಗಿದರು. ಗಾಂಧೀಜಿಯವರು ಕೂಡಲೇ ನೊಂದವರ ನೆರವಿಗಾಗಿ ಅಲ್ಲಿಗೆ ಧಾವಿಸಿದರು. ಅವರಿಗೆ ಸಾಂತ್ವನ ಹೇಳಿದರು. ಗಾಂಧೀಜಿಯವರ ಮನಕಲಕಿತು. ಹಿಂಸೆಯಲ್ಲಿ ನೊಂದು ಬೆಂದ ಹಿಂದೂ ಮುಸ್ಲಿಮರಲ್ಲಿ ಸಾಮರಸ್ಯ ಮೂಡಿಸಲು ಹಾಗೂ ಅವರ ಮನಸ್ಸುಗಳನ್ನು ಬೆಸೆಯಲು ಪರಿಶ್ರಮಿಸಿದರು. ಇಂತಹ



ಅಪಾರ ಮಾನವೀಯ ಪ್ರೇಮ ಅನುಕಂಪವುಳ್ಳ ಮಹಾನ್ ಮನವತಾವಾದಿಯ ಪರಿಶುದ್ಧ ಜೀವನದಲ್ಲಿ ಕಳಂಕ ಹುಡುಕುವ ದುಸ್ಸಾಹಸಕ್ಕೆ ಕೈಹಾಕಿದ ದ್ರೋಹಿ ನಾಥೂರಾವ್‌ಗೂಡ್ಸೆ. ಗಾಂಧಿಜೀಯವರು ಬಿರ್ಲಾಮಂದಿರದಲ್ಲಿ ಪ್ರಾರ್ಥನೆಯಲ್ಲಿ ತೊಡಗಿದ್ದಾಗ ಹತ್ತಿರದಿಂದ ಗುಂಡುಹಾರಿಸಿ ಅವರ ಪ್ರಾಣವನ್ನು ಬಲಿತೆಗೆದುಕೊಂಡ. ಗಾಂಧೀಜಿಯವರು ಹೇರಾಮ್ ! ಎಂದುಚೀರಿ ಅಸುನೀಗಿದರು. ಗಾಂಧೀಜಿಯವರನ್ನು ಕೊಂದದ್ದರಿಂದ ಗೂಡ್ಸೆಗೆ ಆದ ಲಾಭವಾದರೂ ಏನು? ಛೀ! ಥೂ! ಎಂಬ ಬಿರುನುಡಿಗಳು ಗಾಂಧೀಜಿಯವರು ಜೀವನದಲ್ಲಿ ಸುಖ ಸೌಖ್ಯಗಳನ್ನು ಹೊಂದಲಿಲ್ಲ ರಾಜ್ಯ ಭೋಗವನ್ನು ಅನುಭವಿಸಲಿಲ್ಲ. ಸಂತನಂತೆ ಸಾಧುವಿನಂತೆ ತುಂಡು ಪಂಚೆಯುಟ್ಟು, ಸರಳ ಜೀವನವನ್ನು ಬದುಕಿದರು. ಗಾಂಧೀಜಿಯವರ ಬದುಕು ನಡೆನುಡಿ ಅವರ ಆದರ್ಶತತ್ವಗಳು ಮತ್ತು ಚಿಂತನೆಗಳು ಸರ್ವದೇಶ ಸರ್ವಕಾಲಕ್ಕೂ ಪ್ರಸ್ತುತ.

ನಾವು ಇಂದು ನಮ್ಮ ದೈನಂದಿನ ಬದುಕಿನಲ್ಲಿ ಸಮಾಜದಲ್ಲಿ ಕಾಣುತ್ತಿರುವ ಭ್ರಷ್ಟಾಚಾರ, ದುರಾಸೆ, ಈರ್ಷೆ, ಅಸೂಯೆ, ಅಸಹನೆ, ಅಸಂತುಷ್ಟಿ, ಅಸಮಾನತೆ, ದುರಾಚಾರ, ದುಃಖ-ದುಮ್ಮಾನ, ತಲ್ಲಣಗಳ ನಿರ್ಮೂಲನೆಗೆ ಗಾಂಧಿ ಮಂತ್ರವೊಂದೇ - ಅಂದರೆ ಅವರ ತತ್ವಾದರ್ಶಗಳ ಪಾಲನೆಯೊಂದೇ ಮದ್ದು.

ನಾವು ಪ್ರತಿ ವರ್ಷ ಅಕ್ಟೋಬರ್ ಎರಡರಂದು ಆಚರಿಸುವ ಗಾಂಧೀಜಯಂತಿಗೆ ಅರ್ಥ ಬರಬೇಕೆಂದರೆ ಅವರು ಯಾವ ಮಹತ್ತರವಾದ ಉದ್ದೇಶ ಸಾಧನೆಗಾಗಿ ಪ್ರಾಣತೆತ್ತರೋ ಅದನ್ನು ನಮ್ಮ ಮನಸ್ಸಿನಲ್ಲಿಟ್ಟುಕೊಂಡು ಆ ಉದ್ದೇಶದ ಸಾಫಲ್ಯತೆಗಾಗಿ ಹೆಣಗಬೇಕು. ಆಗ ಮಾತ್ರವೇ ಅವರ ಜಯಂತಿಯ ಆಚರಣೆಗೆ ಒಂದು ಅರ್ಥವಿರುತ್ತದೆ. ನಾವು ಬದುಕುತ್ತಿರುವ ಈ ಸಮಾಜದಲ್ಲಿ ನಾವು ಅದರಿಂದ ಪಡೆದ ಋಣವನ್ನು ತೀರಿಸಲು ದುರಾಸೆಯನ್ನು ದೂರವಿರಿಸಿ ಸ್ವಾರ್ಥರಹಿತ ಬದುಕನ್ನು ಬದುಕಬೇಕು. ನಾವೂ ಬದುಕಬೇಕು, ಇತರೆಯವರೂ ಬದುಕಲು ಬಿಡಬೇಕು. ಅಹಿಂಸಾತ್ಮಕ ಬದುಕು, ಇನ್ನೊಬ್ಬರ ಬದುಕನ್ನು ಕಸಿಯದ ಬದುಕು, ಹುಸಿಯ ನುಡಿಯದ ಬದುಕು, ಆಡಂಬರ ರಹಿತ ಬದುಕು, ಆತ್ಮಸ್ತುತಿ ಮಾಡಿಕೊಳದ ಬದುಕು, ಕ್ರೋಧರಹಿತ ಬದುಕು, ಪರರನ್ನು ನಿಂದಿಸಿದ ಬದುಕು ನಮ್ಮದಾಗಿರಬೇಕೆಂದು ಬೋಧಿಸಿದರು ಗಾಂಧೀಜಿ. ಅದಾದಾಗ ಮಾತ್ರವೇ ನಾವು ಪ್ರತಿ ವರ್ಷ ಆಚರಿಸುವ ಗಾಂಧೀಜಯಂತಿಗೆ ನಿಜವಾದ ಅರ್ಥಬರುತ್ತದೆ.

ಗಾಂಧೀಜಿಯವರಂತ ಮತ್ತು ಡಾ ಬಿ.ಆರ್ ಅಂಬೇಡ್ಕರ್ ಅವರಂಥ ಮಹಾನ್ ಮಾನವತಾವಾದಿಗಳು ದಿವ್ಯಚೇತನಗಳು ಮತ್ತೆ ಮತ್ತೆ ಅವತಾರವೆತ್ತಿ ಬರಲಿ, ಭಾರತೀಯರ ಹೃನ್ಮನಗಳಿಗೆ ನವ ಚೈತನ್ಯವನ್ನು, ಪ್ರಚಂಡಧೈರ್ಯ, ಉತ್ಸಾಹವನ್ನು ತುಂಬಿ ಸುಭದ್ರ ಭಾರತವನ್ನು ಕಟ್ಟುವ ಪೀಳಿಗೆ ಹುಟ್ಟಿ ಬರಲಿ ಎಂದು ಹಾರೈಸೋಣ!

“ಮಾನವಕುಲ ತಾನೊಂದೆ ವಲಂ” ಎಂಬ ಮಹಾಕವಿ ಪಂಪನ ಉಕ್ತಿ “ಮನುಜಮತ ವಿಶ್ವಪಥ” ವೆಂಬ ರಾಷ್ಟ್ರಕವಿ ಕುವೆಂಪು ಅವರ ಅಮರವಾಣಿ ಅಮರವಾಗಲಿ!

**- ಕಂಬಯ್ಯ**
(ನಿವೃತ್ತ) ಹಿರಿಯ ಸಹಾಯಕ ನಿರ್ದೇಶಕರು
ಸಾರ್ವಜನಿಕ ಶಿಕ್ಷಣ ಇಲಾಖೆ.
ನಂ 1240, 8ನೇ ಅಡ್ಡರಸ್ತೆ 1ನೇ ಹಂತ
2ನೇ ಘಟ್ಟ, ಚಂದ್ರಲೇಔಟ್, ಬೆಂಗಳೂರು-40
ಮೊ : 8088528819

○





ತನ್ನ ಮತ ಹಿರಿದು ಅವನದು ಕಿರಿದು ಎಂಬುದು ಅವಿವೇಕ.
ನದಿಗಳೆಲ್ಲವುಗಳಗಿರುವಂತೆ ಮತಗಳಗೆಲ್ಲ ಒಂದು ಗುರಿ.



# ಮಹಾತ್ಮ ಗಾಂಧೀ ಮತ್ತು ಪತ್ರಿಕೋದ್ಯಮ

– ಎನ್. ಲಕ್ಷ್ಮೀನಾರಾಯಣ, ಬೆಂಗಳೂರು

ಗಾಂಧೀಜಿ 'ಇಂಡಿಯನ್ ಒಪಿನಿಯನ್', 'ಯಂಗ್ ಇಂಡಿಯನ್', 'ನವಜೀವನ' ಮತ್ತು 'ಹರಿಜನ' ಪತ್ರಿಕೆಗಳ ಸಂಪಾದಕರಾಗಿದ್ದರು. ತಮ್ಮದೇ ಆದ ಮುದ್ರಣಾಲಯ ದಲ್ಲಿ ಅವುಗಳನ್ನು ಮುದ್ರಿಸಿ ಪ್ರಕಟಿಸಿದರು. ಇತರರ ಸ್ವಾಮ್ಯಕ್ಕೊಳಪಟ್ಟ ಮುದ್ರಣಾಲಯದಲ್ಲಿ ತಮ್ಮ ಪತ್ರಿಕೆಗಳನ್ನು ಮುದ್ರಿಸಿದರು. ತಮ್ಮ ಅಭಿಪ್ರಾಯಗಳನ್ನು ಸ್ವತಂತ್ರವಾಗಿ ವ್ಯಕ್ತಪಡಿಸುವುದು ಸಾಧ್ಯವಾಗಲಾರದೆಂದು ಅವರ ಅನಿಸಿಕೆಯಾಗಿತ್ತು.

ಇಂಡಿಯನ್ ಒಪಿನಿಯನ್ ಪತ್ರಿಕೆಯ ಹೊಣೆಯನ್ನು ಗಾಂಧೀಜಿ ಹೊತ್ತುಕೊಂಡಾಗ ಅದು ನಷ್ಟದಲ್ಲಿ ನಡೆಯುತ್ತಿತ್ತು. ಮುದ್ರಣಾಲಯವನ್ನು ನಗರ ಮಧ್ಯದಿಂದ ದೂರವಾದ ಫೀನಿಕ್ಸ್ ಆಶ್ರಮಕ್ಕೆ ಒಯ್ಯಲು ಗಾಂಧೀಜಿ ನಿರ್ಧರಿಸಿದರು. ಅದೊಂದು ವಿಫಲ ಯತ್ನವಾದೀತೆಂದು ಅವರ ಗೆಳೆಯರ ಅನಿಸಿಕೆಯಾಗಿತ್ತು. ಗಾಂಧೀಜಿ ಮುದ್ರಣ ಯಂತ್ರಗಳನ್ನು ಸಲಕರಣೆಗಳನ್ನೂ ಮತ್ತು ಪೀಠೋಪಕರಣಗಳನ್ನು ಚೊಕ್ಕವಾಗಿ ಒಂದು ಶೆಡ್ಡಿನಲ್ಲಿ ಹೊಂದಿಸಿದರು. ಪೆಟ್ರೋಲ್‌ನಿಂದ ನಡೆಯುವ ಹಳೆಯಂತ್ರ ಒಂದನ್ನು ಮುದ್ರಣ ಯಂತ್ರ ನಡೆಸಲು ಉಪಯೋಗಿಸಲಾಯಿತು.

ಪ್ರತ್ಯೇಕ ಕೋಣೆಯೊಂದರಲ್ಲಿ ಗಾಂಧೀಜಿಯ ಕಚೇರಿ ಇತ್ತು. ಸಂಬಳದ ಕೆಲಸಗಾರನಾಗಲೀ, ಚಪರಾಸಿಯಾಗಲಿ ಇದ್ದಿಲ್ಲ. ಮಧ್ಯಾಹ್ನದೊಳಗೆ ಲೇಖನಗಳ ಮೊಳೆ ಜೋಡಿಸುವ ಕೆಲಸ ಮುಗಿಯುತ್ತಿತ್ತು. ಆಶ್ರಮದ ಎಳೆಯ ಹಿರಿಯ ಸದಸ್ಯರೆಲ್ಲ ,ಮೊಳೆ ಜೋಡಿಸುವ, ಮುದ್ರಿಸುವ, ಕಾಗದಗಳನ್ನು ಕತ್ತರಿಸುವ ಮತ್ತು ಹಾಳೆಗಳನ್ನು ಮಡಿಸುವ, ವಿಳಾಸಗಳನ್ನು ಅಂಟಿಸುವ ಮತ್ತು ಪತ್ರಿಕೆಗಳನ್ನು ಕಟ್ಟುಗಳನ್ನಾಗಿ ಮಾಡುವ ವಿವಿಧ ಕೆಲಸಗಳಲ್ಲಿ ನೆರವಾಗುತ್ತಿದ್ದರು. ಸಕಾಲದಲ್ಲಿ ಪತ್ರಿಕೆಗಳ ಕಟ್ಟುಗಳನ್ನು ರೇಲ್ವೆ ನಿಲ್ದಾಣಕ್ಕೂ ಅವರೇ ತಲುಪಿಸಬೇಕಾಗಿತ್ತು. ಅವರೆಲ್ಲ ಮಧ್ಯರಾತ್ರಿಯವರೆಗೂ ಕೆಲಸ ಮಾಡುತ್ತಿದ್ದರು.

ಕೆಲಸದ ವಿಪರೀತ ಒತ್ತಡವಿದ್ದಾಗ ಇತರರೊಂದಿಗೆ ಗಾಂಧೀಜಿಯೂ ಶುಕ್ರವಾರ ರಾತ್ರಿ ಇಡೀ ಎಚ್ಚರವಾಗಿರುತಿದ್ದರು. ಕೆಲವೊಮ್ಮೆ ಕಸ್ತೂರಬಾ ಮತ್ತು ಇತರ ಮಹಿಳೆಯರೂ ನೆರವಾಗುತ್ತಿದ್ದರು. ಫೀನಿಕ್ಸ್ ಆಶ್ರಮದಲ್ಲಿ ಇಂಡಿಯನ್ ಒಪಿನಿಯನ್ ಪತ್ರಿಕೆ ಮುದ್ರಣವಾಗುವ ಮೊದಲ ರಾತ್ರಿಯೆ ಪೆಟ್ರೋಲ್ ಯಂತ್ರ ಕೈಕೊಟ್ಟಿತು. ಕೈಯಲ್ಲಿ ತಿರುಗಿಸುವ ಚಕ್ರದ ನೆರವಿನಿಂದ ಗಾಂಧೀಜಿ ಮತ್ತು ಇತರ ದೃಢಕಾಯರಾದ ಆಶ್ರಮವಾಸಿಗಳು ಮುದ್ರಣ ಯಂತ್ರವನ್ನು ನಡೆಸಿ ಸಕಾಲದಲ್ಲಿ ಪತ್ರಿಕೆ ಹೊರತಂದರು. ಈ ವ್ಯವಸ್ಥೆಗಳು ಗಾಂಧೀಜಿಗೆ ಮುದ್ರಣ ಕೆಲಸದ ವಿವರಗಳನ್ನು ತಿಳಿದುಕೊಳ್ಳಲು ನೆರವಾಯಿತು. ಅವರು ಲೇಖನಗಳನ್ನು ಬರೆದರು. ಮೊಳೆಗಳನ್ನು ಜೋಡಿಸಿದರು. ಮುದ್ರಣ ಕೆಲಸದಲ್ಲೂ ನೆರವಾದರು ಮತ್ತು ಕರಡಚ್ಚು ತಿದ್ದಿದರು.

ಒಮ್ಮೆ ಇಂಡಿಯನ್ ಒಪಿನಿಯನ್ ಪತ್ರಿಕೆಯ ಒಂದು ಆವೃತ್ತಿಯ ಮುದ್ರಣ ಪ್ರಕಾಶನಗಳೆರಡನ್ನೂ ಯುವಕರೇ ನಿರ್ವಹಿಸಿದರು. ಇಂಡಿಯನ್ ಒಪಿನಿಯನ್ ಇಂಗ್ಲೀಷ್, ಹಿಂದಿ, ಗುಜರಾತಿ ಮತ್ತು ತಮಿಳು ಈ ನಾಲ್ಕು ಭಾಷೆಗಳಲ್ಲಿ ಪ್ರಕಟವಾಗುತ್ತಿತ್ತು. ಸಂಪಾದಕರ ಮುದ್ರಣ ಮತ್ತು ಮೊಳೆ ಜೋಡಿಸುವವರ ಅಭಾವದಿಂದಾಗಿ ಆಮೇಲೆ ಇಂಗ್ಲೀಷ್ ಮತ್ತು ಗುಜರಾತಿಗಳಲ್ಲಿ ಮಾತ್ರ ಪ್ರಕಟವಾಯಿತು. ಭಾರತಕ್ಕೆ ಭೇಟಿನೀಡಿದ ವೇಳೆ ಮದರಾಸಿನ ಬಳಿ ಅಡ್ಯಾರ್ ಸಂದರ್ಶಿಸಿದಾಗ ಅಲ್ಲಿನ ಮುದ್ರಣ ಕಾರ್ಯಗಳನ್ನು ಗಾಂಧೀಜಿಗೆ ಒಬ್ಬ ತಜ್ಞನ ದೃಷ್ಟಿಯಿಂದ ಪರಿಶೀಲಿಸಿದರೆನ್ನುವುದನ್ನು ಶ್ರೀಮತಿ ಅನಿಬೆಸೆಂಟರು ಗಮನಿಸಿದರು. ವಾರ ಪತ್ರಿಕೆಗಳಲ್ಲದೆ ಫೀನಿಕ್ಸ್ ಮತ್ತು ನವಜೀವನ ಮುದ್ರಣಾಲಯಗಳಲ್ಲಿ ಇಂಗ್ಲೀಷ್ ಹಿಂದಿ ಮತ್ತು ಇತರ ಅನೇಕ ಭಾಷೆಗಳ ಪುಸ್ತಕಗಳೂ ಮುದ್ರಿತವಾಗುತ್ತಿದ್ದವು. ಗಾಂಧೀಜಿ ಯಾವತ್ತೂ ಸರಕಾರದ ಬಳಿ ಭದ್ರತಾ ಹಣವನ್ನು ಒತ್ತೆ ಇಡುತ್ತಿರಲಿಲ್ಲ. ಅವರ ಸ್ವಂತ ಬರಹಗಳಿಂದ ಬಂದ ಲಾಭಾಂಶವೆಲ್ಲ ಖಾದಿಯ ಕೆಲಸಕ್ಕೆ ವಿನಿಯೋಗ ವಾಗುತ್ತಿತ್ತು. ಒಂದು ಲಕ್ಷ ರೂ. ಬೆಲೆಯ ನವಜೀವನ ಮುದ್ರಣಾಲಯವನ್ನು ಗಾಂಧೀಜಿ ಒಂದು ವಿಶ್ವಸ್ಥ ಮಂಡಳಿಯಾಗಿ ಮಾಡಿದರು. ಕೆಟ್ಟದಾಗಿ ಮುದ್ರಿಸುವುದನ್ನು ಒಂದು ಹಿಂಸೆಯೆಂದೇ ಗಾಂಧೀಜಿ



ಪರಿಗಣಿಸುತ್ತಿದ್ದರು. ಒಳ್ಳೆಯ ಮೊಳೆಗಳು, ಬಳಕೆ ಬರುವ ಕಾಗದ ಮತ್ತು ಸರಳ ಸುಂದರವಾದ ಹೊದಿಕೆಗಳನ್ನು ಗಾಂಧೀಜಿ ಮೆಚ್ಚುತ್ತಿದ್ದರು. ಭಾರತದಂತಹ ಬಡ ದೇಶದ ಜನತೆಗೆ ಆಕರ್ಷಕ ಹೊದಿಕೆಯ ಬೆಲೆಬಾಳುವ ಪುಸ್ತಕಗಳು ಎಟುಕಲಾರದೆಂದು ಅವರಿಗೆ ತಿಳಿದಿತ್ತು. ಗಾಂಧೀಜಿಯ ಜೀವಿತ ಕಾಲದಲ್ಲಿ ನವಜೀವನ ಮುದ್ರಣ ಹೊರತಂದಿತು. ಗುಜರಾತಿ ಭಾಷೆಯ ಅವರ ಆತ್ಮಕತೆಗೆ ಕೇವಲ 12 ಆಣೆಗಳ ಬೆಲೆ ನಿಗದಿಯಾಗಿತ್ತು. ಭಾರತದಾದ್ಯಂತ ಒಂದೇ ಲಿಪಿಯನ್ನು ಬಳಸುವುದರ ಲಾಭ ಮತ್ತು ಅವಶ್ಯಕತೆಗಳನ್ನು ಗಾಂಧೀಜಿ ಪ್ರತಿಪಾದಿಸಿದರು.

ಮಕ್ಕಳ ಪುಸ್ತಕಗಳನ್ನು ಒಳ್ಳೆಯ ಕಾಗದದಲ್ಲಿ ದೊಡ್ಡ ಅಕ್ಷರಗಳಲ್ಲಿ ಮುದ್ರಿಸಬೇಕು ಮತ್ತು ಪ್ರತಿ ಸಂಗತಿಯನ್ನೂ ಚಿತ್ರಗಳಿಂದ ವಿವರಿಸಬೇಕು ಎಂಬುದು ಗಾಂಧೀಜಿಯ ಇಚ್ಛೆಯಾಗಿತ್ತು. ಮಕ್ಕಳ ಪುಸ್ತಕಗಳು ಬಹಳ ದಪ್ಪವಾಗಿರಬಾರದು ಎನ್ನುತ್ತಿದ್ದರು ಗಾಂಧೀಜಿ. ಒಮ್ಮೆ ರಾಷ್ಟ್ರೀಯ ಶಿಕ್ಷಣದ ಉಸ್ತುವಾರಿಯಲ್ಲಿದ್ದ ಆಶ್ರಮವಾಸಿಯೊಬ್ಬರು ಮಕ್ಕಳಿಗೆಂದು ಬಾಲಬೋಧೆಯೊಂದನ್ನು ಹೊರತಂದರು. ಅದರ ಪ್ರತಿಪುಟದಲ್ಲೂ ಚಿತ್ರಗಳಿದ್ದವು ಮತ್ತು ಅದನ್ನು ಬಣ್ಣಬಣ್ಣದ ಆರ್ಟ್ ಕಾಗದದಲ್ಲಿ ಮುದ್ರಿಸಲಾಗಿತ್ತು. ಹೆಮ್ಮೆಯಿಂದ ಅದನ್ನು ರಚಿಸಿದವರು 'ಬಾಪೂಜಿ' ಬಾಲ ಬೋಧೆ ಪುಸ್ತಕವನ್ನು ನೋಡಿದಿರಾ? ಆ ಪುಸ್ತಕದ ಇಡೀ ಕಲ್ಪನೆಯೇ ನನ್ನದು' ಎಂದರು. ಗಾಂಧೀಜಿ ಹೌದು ಅದು ಸುಂದರವಾಗಿದೆ, ಆದರೆ ನೀವು ಅದನ್ನು ಯಾರಿಗೋಸ್ಕರ ಮುದ್ರಿಸಿದ್ದೀರಿ? ಎಂದು ಐದು ಆಣೆ ಬೆಲೆಯ ಈ ಪುಸ್ತಕವನ್ನು ಎಷ್ಟು ಮಂದಿ ಓದುಗರು ಕಂಡುಕೊಳ್ಳಲು ಸಾಧ್ಯ? ಭಾರತದ ಹಸಿದ ಕೋಟಿ ಕೋಟಿ ಜನಗಳ ಮಕ್ಕಳ ಶಿಕ್ಷಣದ ಹೊಣೆಗಾರಿಕೆ ನಿಮ್ಮ ಮೇಲಿದೆ, ಬೇರೆ ಪುಸ್ತಕಗಳಿಗೆ ಒಂದು ಆಣೆ ಬೆಲೆಯಾದರೆ, ನಿಮ್ಮದಕ್ಕೆ ಎರಡೇ ಪೈಗಳಿರಬೇಕು' ಎಂದರು.

ಒಮ್ಮೆ ಗಾಂಧೀಜಿ ಎರಡಾಣೆ ಬೆಲೆಯ ವಾರಪತ್ರಿಕೆಯೊಂದರ ಹೊಣೆ ಹೊತ್ತು ಅದರ ಬೆಲೆಯನ್ನು ಪ್ರತಿಗೆ ಒಂದಾಣೆಗೆ ಇಳಿಸಿದರು. ಮುದ್ರಣದಲ್ಲಿ ಗಾಂಧೀಜಿಗೆ ಹಣ ಉಳಿಸುವುದು ಅಂತಿಮ ಗುರಿಯಾಗಿರಲಿಲ್ಲ.

ಗಾಂಧೀಜಿ ಭಾಷಾಂತರ ತುಂಬ ಕೀಳ್ಮಟ್ಟದ್ದೆಂದೂ, ಅದನ್ನು ನಾಶ ಮಾಡಿ ಬೇರೆಯೇ ಅನುವಾದ ತಯಾರಿಸಬೇಕೆಂದೂ ಸಲಹೆ ನೀಡಿದರು. ಈಗಾಗಲೇ ಅದರ ಮುದ್ರಣ ಕಾರ್ಯಕ್ಕೆ 700ರೂ. ವೆಚ್ಚ ತಗುಲಿದೆ ಎಂದು ತಿಳಿಸಿದಾಗ ಗಾಂಧೀಜಿ ರೇಗಿ 'ಈಗ ಮಾಡಿದ ವೆಚ್ಚ ಸಾಲದೇ ಹೊದಿಕೆಗಳಿಗೆ ಮತ್ತು ಬೈಂಡಿಂಗ್‌ಗೆ ಇನ್ನಷ್ಟು ಸುರಿದು ಈ ಪ್ರಯೋಜನಕ್ಕೆ ಬಾರದ ಕಸವನ್ನು ಸಾರ್ವಜನಿಕರಿಗೆ ಕೊಡುವುದು ಸೂಕ್ತವೆಂದು ನಿಮ್ಮಣಿಕೆಯೇನು? ಕೆಟ್ಟ ಸಾಹಿತ್ಯವನ್ನು ವಿತರಣೆ ಮಾಡಿ ಜನರ ಅಭಿರುಚಿಯನ್ನು ಕೆಡಿಸುವುದು ನನಗೆ ಇಷ್ಟವಿಲ್ಲ' ಎಂದು ನುಡಿದರು. ಇಡಿಯ ಮುದ್ರಿತ ಹಾಳೆಗಳನ್ನು ಸುಟ್ಟು ಬಿಡಲಾಯಿತು, ರದ್ದಿ ಅಂಗಡಿಗೂ ಕಳುಹಿಸಲಿಲ್ಲ.

ಗಾಂಧೀಜಿ ಪತ್ರಿಕಾ ಸ್ವಾತಂತ್ರ್ಯವನ್ನು ಸದಾ ಸಮರ್ಥಿಸುತ್ತಿದ್ದರು. ಪ್ರಮುಖ ವಿಚಾರಗಳ ಬಗ್ಗೆ ತಮ್ಮ ಅಭಿಪ್ರಾಯವನ್ನು ಸರ್ಕಾರ ನಿಯಂತ್ರಿಸಿದಾಗಲೆಲ್ಲಾ ಗಾಂಧೀಜಿ ತಮ್ಮ ಪತ್ರಿಕೆಗಳ ಪ್ರಕಟಣೆಯನ್ನೇ ನಿಲ್ಲಿಸಿ ಬಿಡುತ್ತಿದ್ದರು. ಗಾಂಧೀಜಿಯ ಲೇಖನ ಸ್ವಾತಂತ್ರ್ಯದ ಅರಿವಿದ್ದ ಸರ್ಕಾರ ಅವರ ಮುದ್ರಣಾಲಯವನ್ನು ಮುಟ್ಟುಗೋಲು ಹಾಕಿಕೊಂಡಿತು. ಅವರ ಕಾಗದ ಪತ್ರಗಳನ್ನು ನಾಶ ಮಾಡಲಾಯಿತು. ಗಾಂಧೀಜಿ ಮತ್ತವರ ಕಾರ್ಯಕರ್ತರು ಜೈಲುವಾಸ ಅನುಭವಿಸಿದರು. ಯಂತ್ರ ಮತ್ತು ಸೀಸದ ಮೊಳೆಗಳನ್ನು ನಾಶ ಮಾಡಬಹುದು. ಲೇಖನಿಯೇ ನಮ್ಮ ಕಾರ್ಯಾಗಾರವಾಗಲಿ, ಪ್ರತಿಯೊಬ್ಬನೂ ತಾನೇ ಒಂದು ನಡೆದಾಡುವ ಪತ್ರಿಕೆಯಾಗಲಿ ಮತ್ತು ಬಾಯಿಂದ ಬಾಯಿಗೆ ಸುದ್ದಿಯನ್ನು ಮುಟ್ಟಿಸಲಿ, ಈ ಪತ್ರಿಕೆಯನ್ನು ಯಾವ ಸರ್ಕಾರವೂ ಬಗ್ಗು ಬಡಿಯಲಾರದು ಎಂದರು ಗಾಂಧೀಜಿ. ಆದರೆ ಸರ್ಕಾರದ ಜಾಹೀರಾತು ಎಲ್ಲಿ ನಿಲ್ಲುತ್ತದೆ ಎಂಬ ಸಂಶಯದ ವಾತಾವರಣದಲ್ಲಿ ದಿನಪತ್ರಿಕೆಯು ನಡೆಯುತ್ತಿದೆ, ಇತ್ತೀಚಿನ ಪ್ರಕರಣ ನಿತ್ಯಾನಂದ ಸ್ವಾಮಿ ಹಾಗೂ ಹಾಲಪ್ಪ, ಪ್ರಕರಣದಲ್ಲಿ ಪತ್ರಿಕೆ ಹಾಗೂ ಪತ್ರಕರ್ತರೇ ತೀರ್ಪು ಕೊಡುವ ರೀತಿಯಲ್ಲಿ ಮಾಧ್ಯಮದಲ್ಲಿ ಬಿಂಬಿಸಿದರು. ತೀರ್ಪು ಕೊಡಲು ಇವರ್‍ಯಾರು ? ವಾಸ್ತವಾಂಶ ಹೇಳುವ ಕೆಲಸ ಮತ್ತು ಸತ್ಯದ ಸುದ್ದಿಯನ್ನು ಜನರಿಗೆ ಮುಟ್ಟಿಸುವವರು ಯಾರು?

ಗಾಂಧೀಜಿ ಒಂದು ಮಾತು ಹೇಳಿದ್ದರು ಸ್ವತಂತ್ರ ಭಾರತದಲ್ಲಿ ಪೋಲಿಸ್ ಮತ್ತು ಸಶಸ್ತ್ರ ಅಗತ್ಯ ಇರುವುದಿಲ್ಲ ಈ ಮಾತುಗಳನ್ನು ಕೇಳಿ ಅಂದಿನ ಹಲವಾರು ನಾಯಕರು ಹಾಸ್ಯದ ಹೊನಲನ್ನೇ ಸೃಷ್ಟಿಸಿದರು. ಆದರೆ ಇಂದಿನ ರಾಜಕಾರಣಿಗಳಿಗೆ ಪೋಲಿಸ್ ಇಲ್ಲದೆ ಬದುಕಲು ಸಾಧ್ಯವಾಗುವುದಿಲ್ಲ ಎಂದು ತೋರಿಸಿ ಕೊಟ್ಟಿದ್ದಾರೆ. ○



# ಗಾಂಧೀಜಿ ಮತ್ತು ಮಹಿಳಾ ಸಬಲೀಕರಣ

– ಡಾ. ಬಿ.ಪಿ. ಇಂದಿರಾ

ಮಹಿಳೆಯರ ಸಬಲೀಕರಣವು ಸಮಾಜದ ಅಭಿವೃದ್ಧಿಗೆ ಅತ್ಯವಶ್ಯಕ. ಸಬಲೀಕರಣವೆಂದರೆ ವ್ಯಕ್ತಿಗಳು ಸ್ವತಂತ್ರವಾಗಿ ಆಲೋಚಿಸುವ, ವ್ಯವಹರಿಸುವ, ಆಯ್ಕೆ ಹೊಂದುವ ಅಧಿಕಾರ ಪಡೆಯುವುದು. ತಮ್ಮ ಸಾಮರ್ಥ್ಯದ ಸಂಪೂರ್ಣ ಪ್ರಯೋಜನವನ್ನು ಪಡೆದು ಸಮಾಜದಲ್ಲಿ ಸಮಾನ ಸದಸ್ಯರಾಗಿ ಬಾಳುವ ಅವಕಾಶ ಹೊಂದುವುದು. ಆದ್ದರಿಂದ ಸಬಲೀಕರಣವೆಂದರೆ ಸಾಮಾಜಿಕ ಪ್ರಭಾವ ಬೀರುವ, ರಾಜಕೀಯ ಅಧಿಕಾರ ಹೊಂದುವ ಹಾಗೂ ಕಾನೂನು ಬದ್ಧ ಹಕ್ಕುಗಳನ್ನು ಪಡೆಯುವ ನೈಜ ಕಾಳಜಿಯಾಗಿದೆ. ಮಹಿಳೆಯರ ಸಬಲೀಕರಣದತ್ತ ಆರಂಭದ ಹೆಜ್ಜೆಗಳನ್ನು 19ನೆಯ ಶತಮಾನದ ಕೊನೆಯ ದಶಕಗಳಲ್ಲಿ ಅಸ್ಪಷ್ಟವಾಗಿ ಗುರುತಿಸಬಹುದಾದರೂ, ರಾಷ್ಟ್ರೀಯ ಚಳುವಳಿಯ ಕಾಲದಲ್ಲಿ ಸ್ಪಷ್ಟವಾಗಿ ಗೋಚರಿಸಲಾರಂಭಿಸಿತು. ಮಹಿಳೆಯನ್ನು ತನ್ನ ಮನೆಯೆಂಬ ಚಿಪ್ಪಿನಿಂದ ಆಚೆ ಸಾಮಾಜಿಕ ರಾಜಕೀಯ ಬದುಕಿಗೆ ಹೊರತಂದಿದ್ದು ಗಾಂಧೀಜಿಯವರ ಮಹಾನ್ ಸಾಧನೆಯಾಗಿದೆ.

## ರಾಜಕೀಯ ವಿಮೋಚನೆ

ಗಾಂಧೀಜಿಯವರ ಹೋರಾಟದ ಬಹು ದೊಡ್ಡ ಅಸ್ತ್ರ ಸತ್ಯಾಗ್ರಹ. ಅದರ ಉಗಮ ಸಹನೆ ಸಹಿಷ್ಣುತೆಯಲ್ಲಿದೆ. ಸತ್ಯಾಗ್ರಹವೆಂದರೆ ಆತ್ಮಬಲ, ಆತ್ಮಶಕ್ತಿ. ಈ ಆತ್ಮ ಧೈರ್ಯವೇ ಮಹಿಳಾ ಶಕ್ತಿಯ ಬಲ. ಅಹಿಂಸೆಯು ಕ್ರಾಂತಿಯ ಅಸ್ತ್ರವಾಗಿದ್ದರಿಂದ ಜನಸಾಮಾನ್ಯರು ಅದರಲ್ಲೂ ಮಹಿಳೆಯರು ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸಲು ಅನುಕೂಲಕರ ವಾತಾವರಣ ನಿರ್ಮಾಣ ಮಾಡಿತು. "ಹಿಂಸೆ ಮತ್ತು ಪಾಶವೀ ಶಕ್ತಿ ವಿಜೃಂಭಿಸುವ ಸಾಮಾಜಿಕ ಸನ್ನಿವೇಶದಲ್ಲಿ ಅಥವಾ ಆಯುಧಗಳ ನೆರವಿನಿಂದಲೇ ಸಾಮಾಜಿಕ ಸಂಘರ್ಷವನ್ನು ಬಗೆಹರಿಸುವ ಸಂದರ್ಭದಲ್ಲಿ ಮಹಿಳೆಯರು ಮೂಲೆಗುಂಪಾಗುತ್ತಾರೆ". ಗಾಂಧೀಜಿ ತಾಯಿ-ಪತ್ನಿಯಿಂದ ಅಹಿಂಸಾತ್ಮಕ ಹೋರಾಟದ ಮಹತ್ವವನ್ನು ಅರಿತರು. ಕಸ್ತೂರಬಾರ ಅಹಿಂಸಾತ್ಮಕ ಮೌನ ಪ್ರತಿಭಟನೆ ಗಾಂಧೀಜಿಯ ಬದಲಾವಣೆಗೆ ಮೂಲ ಪ್ರೇರಣೆಯಾಯಿತು. ಅದು ಹೋರಾಟದ ಅಸ್ತ್ರವಾದ ಮೇಲೆ ದಕ್ಷಿಣ ಆಫ್ರಿಕಾದಲ್ಲಿ ಅದರ ಯಶಸ್ವಿ ಪ್ರಯೋಗವು ನಡೆಯಿತು. ದಕ್ಷಿಣ ಆಫ್ರಿಕಾದ ಸರ್ವೋಚ್ಚ ನ್ಯಾಯಾಲಯವು ಹಿಂದೂ, ಮುಸ್ಲಿಂ ಹಾಗೂ ಪಾರ್ಸಿ ಮದುವೆಗಳೆಲ್ಲ ಅಸಿಂಧು ಎಂದು ಘೋಷಿಸಿದಾಗ ಬೃಹತ್ ಜನಾಂದೋಲನ ಗಾಂಧೀಜಿಯ ನೇತೃತ್ವದಲ್ಲಿ ನಡೆಯಿತು. ಅಲ್ಲಿಯೇ 'ಮಹಿಳಾ ಶಕ್ತಿಯೊಂದಿಗೆ ಗಾಂಧೀಜಿಯವರ ಪ್ರಥಮ ಮುಖಾಮುಖಿಯಾಯಿತು'. ಸಹಸ್ರಾರು ಮಹಿಳೆಯರು ಸೆರೆಮನೆ ಸೇರಿದರು. ಒಟ್ಟಿನಲ್ಲಿ ನೈತಿಕ ಒತ್ತಡ ಹಾಗೂ ಭಾವನಾತ್ಮಕ ತೀವ್ರತೆಗೆ ಸರ್ಕಾರ ಮಣಿಯಿತು. ಕಾನೂನು ರದ್ದಾಯಿತು.

ಭಾರತಕ್ಕೆ ಮರಳಿದ ಮೇಲೆ 1920ರಲ್ಲಿ ಅಸಹಕಾರ ಆಂದೋಲನದಲ್ಲಿ ಮಹಿಳೆಯರನ್ನೂ ಪ್ರಜ್ಞಾಪೂರ್ವಕವಾಗಿ ಸೇರಿಸಿಕೊಂಡರು. ಭಾರತದಂತಹ ದೇಶದಲ್ಲಿ ಕೌಟುಂಬಿಕ ವ್ಯವಸ್ಥೆಯೊಂದಿಗೆ ಸಾರ್ವಜನಿಕ ಬದುಕನ್ನು ಮೇಳೈಸುವ ಅಗತ್ಯವಿತ್ತು. ಆದ್ದರಿಂದ ಗಾಂಧಿ ಮಹಿಳೆಯರ ಸಾಂಪ್ರದಾಯಿಕ ಪಾತ್ರವನ್ನು ಪ್ರಶ್ನಿಸದೆಯೇ ತಮ್ಮ ಆಂದೋಲನದೊಳಗೆ ಮಹಿಳೆಯರನ್ನೂ ತರುವ ಪ್ರಯತ್ನ ಮಾಡಿದರು. "ಪುರುಷರಿಗೆ ಸಮಾನರಾಗಿ ಮಹಿಳೆಯರೂ ಕೂಡ ರಾಜಕೀಯ ಕ್ಷೇತ್ರಕ್ಕೆ ಪ್ರವೇಶಿಸುವುದಕ್ಕೆ ವಿಶೇಷ ವಿರೋಧ ಪ್ರತಿಭಟನೆ ಕಂಡು ಬರದ ರೀತಿಯಲ್ಲಿ ಅವರ ಹೋರಾಟಕ್ಕೆ ಗಾಂಧೀಯವರು ನೈತಿಕ ಸಮ್ಮತಿಯನ್ನು ದೊರಕಿಸಿಕೊಟ್ಟರು ಹಾಗೂ ಅದಕ್ಕೆ ಅನುಕೂಲವಾಗುವ ಒಂದು ಸಾಮಾಜಿಕ, ರಾಜಕೀಯ ಸನ್ನಿವೇಶವನ್ನು ನಿರ್ಮಾಣ ಮಾಡಿದರು. ಇದು ಮಹಿಳೆಯರ ಹೋರಾಟಕ್ಕೆ ಗಾಂಧೀಜಿಯವರ ಬಹು ದೊಡ್ಡ ಕೊಡುಗೆ ಎನ್ನಬಹುದು". ಗಾಂಧೀಜಿ ಸ್ವದೇಶಿ, ಪಾನನಿರೋಧ ಹಾಗೂ ಅಸ್ಪೃಶ್ಯತಾ ನಿವಾರಣಾ ಆಂದೋಲನಗಳಲ್ಲಿ ಮಹಿಳೆಯ ಪಾತ್ರ ಅಮೂಲ್ಯವೆಂದು ಭಾವಿಸಿದರು. ಸಂಪ್ರದಾಯ ಶರಣತೆಯ ಸೌಧವೆನಿಸಿದ



ಕುಟುಂಬ ಅಥವಾ ಮನೆಯನ್ನು ಒಂದು ಫಲಕವನ್ನಾಗಿಸಿ ಅಲ್ಲಿಂದ ಸ್ವದೇಶಿ ಕಿಡಿ ಹಚ್ಚಬೇಕೆಂದರು. ನೂಲುವಿಕೆ ಆರ್ಥಿಕ ಸಬಲೀಕರಣದ ಪೂರಕವೂ ಆಯಿತು. ಅಸ್ಪೃಶ್ಯತೆಯ ಕಳಂಕವನ್ನು ತಡೆಯಲು ಮಹಿಳೆಯರು ಶ್ರಮಿಸಬೇಕೆಂದರು. "ಇನ್ನೊಬ್ಬರ ಮಲಮೂತ್ರಗಳನ್ನು ಬಳಿದು ಶುಚಿಗೊಳಿಸುವವರಾದ್ದರಿಂದ ಹರಿಜನರನ್ನು ನೀವು ಅಸ್ಪೃಶ್ಯರೆಂದು ಭಾವಿಸುವುದಾದರೆ ತನ್ನ ಮಕ್ಕಳಿಗಾಗಿ ಈ ಬಗೆಯ ಸೇವೆ ಮಾಡುವ ತಾಯಿಯು ಏನಾಗಬೇಕು?" ಎಂದು ನೇರವಾಗಿ ಪ್ರಶ್ನಿಸಿದರು. ಹಾಗೆಯೇ ಕೋಮುವಾದವನ್ನು ವಿರೋಧಿಸಿ ಪ್ರತಿಯೊಂದು ಮನೆಯನ್ನು ವೈಯಕ್ತಿಕ ಸತ್ಯಾಗ್ರಹದ ವೇದಿಕೆಯನ್ನಾಗಿ ರೂಪಿಸಿ ರಾಷ್ಟ್ರೀಯ ಭಾವೈಕ್ಯತೆಯನ್ನು ಬೆಳೆಸುವಲ್ಲಿಯೂ ಮಹಿಳೆಗೆ ಪ್ರಮುಖ ಪಾತ್ರ ಕಲ್ಪಿಸಲಾಗಿತ್ತು.

ಗಾಂಧೀಯುಗದ ಹೋರಾಟದಲ್ಲಿ ಉಪ್ಪಿನ ಸತ್ಯಾಗ್ರಹ ಮಹತ್ವಪೂರ್ಣವಾದದ್ದು. ದಾರ್ಸಾನ ಸತ್ಯಾಗ್ರಹ ಮಹಿಳಾ ನಾಯಕತ್ವದಲ್ಲಿ ನಡೆದ ಜನಾಂದೋಲನ. ಈ ಹೋರಾಟದ ನಾಯಕಿಯರು ಸರೋಜಿನಿ ನಾಯ್ಡು, ಕಮಲಾದೇವಿ ಚಟ್ಟೋಪಾಧ್ಯಾಯ ಮುಂತಾದವರು ಮುಂಚೂಣಿಗೆ ಬಂದ ಮಹಿಳಾ ನಾಯಕತ್ವದ ಉದಾಹರಣೆಯಾದರು. ಉಪ್ಪಿನ ಸತ್ಯಾಗ್ರಹದಲ್ಲಿ ಮಹಿಳೆಯರ ಪಾತ್ರದ ಬಗ್ಗೆ ಬರೆಯುತ್ತಾ ಕಮಲಾದೇವಿ ಬೊಂಬಾಯಿಯಲ್ಲಿ ಪ್ರತಿಯೊಂದು ಮನೆಯ ಅಡಿಗೆ ಮನೆಯೂ ಕ್ರಾಂತಿಯ ಕೇಂದ್ರವಾಯಿತು. ಕಡಲ ಕಿನಾರೆಯಿಂದ ಸಮುದ್ರದ ನೀರು ತಂದು ಕಾಯಿಸಿ ಗಾಂಧೀ ಉಪ್ಪನ್ನು ಅಗ್ಗದ ಬೆಲೆಗೆ ಮಾರುವಲ್ಲಿ ಮಹಿಳೆಯರು ಮತ್ತು ಮಕ್ಕಳ ಪಾತ್ರ ಅಮೋಘವಾಗಿತ್ತು. ಅಂತಹ ಮಹಿಳಾ ನಾಯಕತ್ವ ಎಲ್ಲೆಡೆ ವಿಜೃಂಭಿಸಲಾರಂಭವಾದಾಗ ಕರ್ನಾಟಕವು ಹೊರತಾಗಲಿಲ್ಲ. ಯಶೋಧರಮ್ಮದಾಸಪ್ಪ, ಟಿ. ಸುನಂದಮ್ಮ, ಸುಬ್ಬಮ್ಮ ಜೋಯಿಸ್, ಎಂ.ಆರ್. ಲಕ್ಷಮ್ಮ ಮುಂತಾದ ಅನೇಕ ನಾಯಕಿಯರು ಸಾರ್ವಜನಿಕ ಹೋರಾಟ ರಂಗಪ್ರವೇಶಿಸಿದರು. ರಾಜಕೀಯ ನಾಯಕತ್ವದ ಆರಂಭ ಸಬಲೀಕರಣದ ಪ್ರಮುಖ ಅಂಶವಲ್ಲವೇ? 1942ರ ನಂತರ ಮಹಿಳಾ ಹೋರಾಟ ರಾಷ್ಟ್ರೀಯ ಹೋರಾಟದ ಅವಿಭಾಜ್ಯ ಅಂಗವಾಗಿ ಮಾರ್ಪಟ್ಟಿತು.

ಒಟ್ಟಿನಲ್ಲಿ ಸತ್ಯಾಗ್ರಹ ಹೋರಾಟದ ಮೂಲ ಅಂಶ ಆತ್ಮಬಲ. ಮಹಿಳೆಯರು ಅಬಲೆಯರಲ್ಲ ಎನ್ನುತ್ತಾ ಗಾಂಧಿ ಸಾಮಾಜಿಕ ಬದುಕಿನ ಸಾಂಸ್ಕೃತಿಕ ಅಂಶಗಳು ಅವರನ್ನು ಅಬಲೆಯರನ್ನಾಗಿಸಿವೆ ಎನ್ನುತ್ತಾರೆ. "ಮಹಿಳೆಯರು ಸ್ವತಂತ್ರರಾಗಬೇಕಾದರೆ ಅವರು ನಿರ್ಭೀತರಾಗಬೇಕು". ಕ್ರೌರ್ಯ, ಹಿಂಸೆ, ಅಧಿಕಾರ ಇವು ಪಶುಬಲ. ಇದರೊಂದಿಗೆ ಹೊಂದಿಕೊಂಡಿರುವುದೇ ಪುರುಷ ಪ್ರಾಧಾನ್ಯ. ತ್ಯಾಗ, ಸಹನೆ, ಪ್ರೀತಿ, ತಾಳ್ಮೆ, ಸಹಿಷ್ಣುತೆ ಇವೇ ಸ್ತ್ರೀತ್ವದ ಗುಣಗಳು. ಈ ಸ್ತ್ರೀತ್ವ ಗುಣಗಳೇ ಸತ್ಯಾಗ್ರಹದ ಅಸ್ತ್ರಗಳು. ಇವುಗಳನ್ನೇ ಬಳಸಿಕೊಂಡು ಶೋಷಣಾತ್ಮಕ ವ್ಯವಸ್ಥೆಯನ್ನು ಬುಡಮೇಲು ಮಾಡಲು ಸಾಧ್ಯ ಎಂಬುದನ್ನು ತೋರಿಸಿ ಕೊಟ್ಟರು ಗಾಂಧೀಜಿ.

## ಸಾಮಾಜಿಕ ಪುನಶ್ಚೇತನ

"ಸಂಪ್ರದಾಯದ ಹೊಳೆಯಲ್ಲಿ ಈಜುವುದು ಒಳ್ಳೆಯದು, ಆದರೆ ಅದರಲ್ಲಿ ಮುಳುಗುವುದು ಆತ್ಮಘಾತಕ" ಎನ್ನುತ್ತಾರೆ ಗಾಂಧೀಜಿ. ಗಾಂಧೀಜಿಯವರ ಈ ಮಾತು ಅವರ ಒಟ್ಟು 'ಸಾಮಾಜಿಕ, ರಾಜಕೀಯ ಸಿದ್ಧಾಂತ ಹಾಗೂ ಸಾಮೂಹಿಕ ಕಾರ್ಯತಂತ್ರಕ್ಕೆ ದ್ಯೋತಕವಾಗಿದೆ'. ಗಾಂಧೀಜಿ ಬಾಲ್ಯ ವಿವಾಹ ಪದ್ಧತಿಯನ್ನು ಕಳಂಕವೆಂದು ಭಾವಿಸಿದ್ದರು. ಶಾರದಾ ವಿವಾಹ ಮಸೂದೆಯ ಬಗ್ಗೆ ಚರ್ಚೆಗಳು ನಡೆಯುತ್ತಿದ್ದಾಗ ಗಾಂಧೀಜಿ ಈ ವಯಸ್ಸನ್ನು 16 ಅಥವಾ 18ಕ್ಕೆ ಏರಿಸಬೇಕೆಂದು ಹೇಳಿದರು. ಹಾಗೆಯೇ ವಿಧವಾ ಪುನರ್ವಿವಾಹಕ್ಕೆ ಬೆಂಬಲಿಸಿದರು. ವಿಧವೆಯರ ಅಂತಃಸತ್ವವನ್ನು ಗುರುತಿಸಿ ರಾಷ್ಟ್ರ ಸೇವೆಗೆ ತೊಡಗಿಸಿಕೊಂಡರೆ ಸಮಾಜದ ಏಳಿಗೆ ಖಂಡಿತ ಸಾಧ್ಯವೆಂದು ನಂಬಿದ್ದರು. ವರದಕ್ಷಿಣೆ ಆಧಾರಿತ ವಿವಾಹಗಳನ್ನು 'ಹೃದಯ ಹೀನ'ವೆಂದು ಕರೆದು ಈ ವ್ಯವಸ್ಥೆ ತೊಲಗಬೇಕೆಂದರು. ಬಂಧು ಮಿತ್ರರ ಚಪ್ಪಾಳೆಯ ನಡುವೆ ವಧೂವರರು ಹೂಹಾರ ವಿನಿಮಯ ಮಾಡಿಕೊಳ್ಳುವ 'ಗಾಂಧಿ ಲಗ್ನ'ಗಳೆಂದೇ ಪ್ರಸಿದ್ಧಿಯಾದ ಸರಳ ವಿವಾಹಗಳನ್ನು ಪ್ರೋತ್ಸಾಹಿಸಿದರು. ಹಾಗೆಯೇ ವೇಶ್ಯಾವೃತ್ತಿಯ ಅನಿಷ್ಟ ಸಂಪ್ರದಾಯವನ್ನು ತೀಕ್ಷ್ಣವಾಗಿ ಖಂಡಿಸಿದರು. ವೇಶ್ಯಾವೃತ್ತಿಗೆ ಸರ್ವರೋಗಾಪಹಾರಿ ಔಷಧವೆನಿಸಿದ ಚರಕ ಹಾಗೂ ಖಾದಿಯೇ ಈ ಮಹಿಳೆಯರ ಪುನರ್ವಸತಿಗೆ ಪರಿಹಾರ ಎಂದರು. ಪತ್ನಿ



ಪುತ್ರಿಯರ ಸ್ಥಾನದಿಂದ ಮೇಲೇರಿ 'ವಿಶ್ವ ಸೋದರಿ'ಯರಾಗಬೇಕೆಂದು ತಿಳಿಸಿದರು. ದರಿದ್ರರ ಹಾಗೂ ನತದೃಷ್ಟರ ಸೇವೆ ಮಾಡುವ ಮೂಲಕ ಮಹಿಳೆಯರು 'ಕರುಣೆಯ ಸೋದರಿ'ಯಾಗಿ ತಮ್ಮ ಬಿಡುಗಡೆಯ ಹೋರಾಟವನ್ನು ಇನ್ನಿತರ ಶೋಷಕರ ಹೋರಾಟದೊಂದಿಗೆ ಸಮನ್ವಯಿಸಿಕೊಂಡು ಸಮಾನ ಉದ್ದೇಶಗಳಿಗಾಗಿ ಹೋರಾಡಬೇಕೆಂದು ಕರೆ ನೀಡಿದರು. ಮಹಿಳಾ ಶಿಕ್ಷಣದ ಬಗ್ಗೆಯೂ ಕಾಳಜಿ ತೋರಿಸಿದ ಗಾಂಧೀಜಿ ಪಾಶ್ಚಾತ್ಯ ಶಿಕ್ಷಣವೊಂದೇ ಶಿಕ್ಷಣವೆಂದು ಭಾವಿಸಬಾರದೆಂದು ಎಚ್ಚರ ನೀಡಿದರು. "ಒಟ್ಟಿನಲ್ಲಿ ಜಡವಸ್ತುಗಳಂತಿದ್ದ ಮಹಿಳೆಯರು ಗಾಂಧೀಜಿಯ ವರಿಂದಾಗಿ ಕ್ರಿಯಾಶೀಲ ಪ್ರಜೆಗಳಾದರು; ವೈಯಕ್ತಿಕ ಹಾಗೂ ಸಾಮಾಜಿಕ ಬದುಕಿನ ಅನಾಹುತಗಳನ್ನು ನಿವಾರಿಸುವ ಸುಧಾರಣೆಯ ಪ್ರವರ್ತಕರಾದರು".

### ಆರ್ಥಿಕ ಸ್ವಾವಲಂಬನೆ

ಚರಕ ಮತ್ತು ನೂಲುವುದು ಸ್ವಾವಲಂಬನೆ ಹಾಗೂ ನವಚೈತನ್ಯದ ಸಂಕೇತವೆಂದು ಭಾವಿಸಿದ್ದರು. ಗಾಂಧೀಜಿಯ ಪ್ರಕಾರ ನೂಲುವುದು ಮತ್ತು ನೇಯುವುದು ಮಹಿಳೆಯರ ಪಾಲಿಗೆ "ಉದ್ದಿಮೆಯ ಶಾಲೆಯಲ್ಲಿ ಮೊದಲ ಪಾಠ". ಮಧ್ಯಮ ವರ್ಗದ ಮಹಿಳೆಯರಿಗೆ 'ಚರಕ'ವು ಕುಟುಂಬದ ಆದಾಯಕ್ಕೆ ಪೂರಕವಾದರೆ, ಬಡ ಮಹಿಳೆಯರಿಗೆ ಅದು ಜೀವನೋಪಾಯ. "ನೂಲುವ ಚಕ್ರವು ವಿಧವೆಯರ ಪ್ರೀತಿಪೂರ್ವಕ ಸಂಗಾತಿ". ಆದರೆ ಸುಶಿಕ್ಷಿತ, ಶ್ರೀಮಂತ ಮಹಿಳೆಯರ ಪಾಲಿಗೆ ಒಂದು 'ಕರ್ತವ್ಯ ಧರ್ಮ'ವಾಯಿತು. ಒಡವೆಗಳನ್ನು ತ್ಯಜಿಸಿ ಖಾದಿ ಸೀರೆ ಧರಿಸುವುದು ಸರಳ ಬದುಕಿನ ಸಂಕೇತವಾಯಿತು. ಅನೇಕ ಖಾದಿ ಕೇಂದ್ರಗಳು ಆರಂಭವಾದವು. ಇಂದಿಗೂ ನಂಜನಗೂಡಿನ ಬಳಿಯಲ್ಲಿರುವ ಬದನವಾಳು ಹಾಗೂ ತಗಡೂರು ಖಾದಿ ಕೇಂದ್ರಗಳಲ್ಲಿ ಮಹಿಳೆಯರು ಕಾರ್ಯ ನಿರ್ವಹಿಸುತ್ತಿದ್ದಾರೆ.

ಗಾಂಧಿ ಸೃಷ್ಟಿಸಿದ ಮಹಿಳಾ ಮಾದರಿ ಪುರುಷ ಪ್ರಧಾನ ಚೌಕಟ್ಟಿನಿಂದ ಹೊರಬಂದ ಕ್ರಾಂತಿಕಾರಳಾಗಲಿಲ್ಲ ಎಂಬುದು ಇಂದಿನ ಮಹಿಳಾವಾದಿಗಳ ಗಂಭೀರ ಆರೋಪವಾಗಿದೆ. ಗಾಂಧಿ ಪೌರಾಣಿಕ ಮಾದರಿಗಳಾದ ಸೀತೆ-ದ್ರೌಪದಿ-ದಮಯಂತಿಯರ ಉಪಮೆಗಳನ್ನು ಬಳಸುತ್ತಾರೆ. ಸೀತೆ ಉನ್ನತ ನೈತಿಕ ಮೌಲ್ಯ 'Passive Resistence'ನ ಸಂಕೇತವಾದರೆ, ದ್ರೌಪದಿ ಆತ್ಮಬಲದ ಮೂಲಕ ತನ್ನ ಸಮಸ್ಯೆಗಳಿಗೆ ತಾನೇ ಪರಿಹಾರ ಕಂಡುಕೊಳ್ಳುವ ಸಾಮರ್ಥ್ಯ ಹೊಂದಿದ್ದಳು. ದಮಯಂತಿ ತ್ಯಾಗ, ಸಹನೆ, ಸಹಿಷ್ಣುತೆಯ ಸತ್ಯಾಗ್ರಹಿ ಎನ್ನುತ್ತಾರೆ.

ಇಂದು ಆಧುನಿಕ ಮಹಿಳಾ ಸಮಾಜಕ್ಕೆ ಗಾಂಧೀಜಿಯ ಪ್ರಸ್ತುತೆಯೆಂದರೆ ಇಂದಿಗೂ ಮಹಿಳೆ ಹಿಂಜರಿಕೆಯಿಂದ ಹೊರಬರಬೇಕಾದರೆ ಅವಳಿಗೆ ಅಗತ್ಯವಾಗಿ ಆತ್ಮಬಲ ಬೇಕು. ತನ್ನ ಹಕ್ಕುಗಳಿಗೆ ಧಕ್ಕೆಯಾದಾಗ ಆತ್ಮಶಕ್ತಿ ವಿಜೃಂಭಿಸಿ ಅದನ್ನು ಪ್ರತಿಭಟಿಸುವ – ಪ್ರತಿರೋಧದ ಅಸ್ತ್ರ ತಾನೇ ಬಳಸಬೇಕು. ಉತ್ತಮ ನೈತಿಕ ಚೌಕಟ್ಟಿಲ್ಲದೆ ಅಸ್ತಿತ್ವದ ಬೆಳವಣಿಗೆ ಅಸಾಧ್ಯ.

ಒಟ್ಟಿನಲ್ಲಿ ಜಾಗತೀಕರಣದ ಈ ಯುಗದ ಸಾಂಸ್ಕೃತಿಕ ಸವಾಲುಗಳಲ್ಲಿ ಹಾಲಾಹಲ ಹಾಗೂ ಅಮೃತ ಜೊತೆಯಲ್ಲೆ ಎದುರಾಗಿವೆ. ಹಾಲಾಹಲ ಬಿಟ್ಟು ಅಮೃತ ಸವಿಯಬೇಕಾದರೆ ಗಾಂಧೀಜಿ ಮೌಲ್ಯಗಳಾದ ಸರಳತೆ, ಕ್ರಿಯಾಶೀಲತೆ, ನೈತಿಕ ಬದುಕು ಅತ್ಯವಶ್ಯಕ. ○



# ಲಂಡನ್ನಿನಲ್ಲಿ ಗಾಂಧೀಜಿ

– ಎಂ.ವಿ. ಶ್ರೀನಿವಾಸ್

**ಗಾಂ**ಧೀಯವರ ಲಂಡನ್ನಿನ ಭೇಟಿ ಮತ್ತು ಅಲ್ಲಿನ ವಾಸ್ತವ್ಯ ಹಾಗೂ ಅನುಭವಗಳು ಮಹಾತ್ಮರ ಜೀವನದಲ್ಲಿ ಮಾತ್ರವಲ್ಲ ಭಾರತದ ಇತಿಹಾಸದಲ್ಲೂ ಅದು ಮಹತ್ವದ ಸಂದರ್ಭ. ಅದು ಭಾರತ ಇಂಗ್ಲೆಂಡ್ ಸಂಬಂಧಗಳಲ್ಲೂ ಒಂದು ನಿರ್ಣಾಯಕವಾದ ಘಟನೆಯಾಗಿದೆ. ಐವತ್ತು ವರ್ಷಗಳ ಅವಧಿಯಲ್ಲಿ (1888 ರಿಂದ 1931) ಐದು ಬಾರಿ ಗಾಂಧೀಜಿಯವರು ಲಂಡನ್ನಿಗೆ ಭೇಟಿ ನೀಡಿದ್ದರು. ಮೊದಲು ವಿದ್ಯಾರ್ಥಿಯಾಗಿ (1888-1891) ಮೂರು ಬಾರಿ ದಕ್ಷಿಣ ಆಫ್ರಿಕಾದಿಂದ (1906, 1914, 1909) ಕಡೆಯದಾಗಿ ದುಂಡುಮೇಜಿನ ಪರಿಷತ್ತಿನ ಸದಸ್ಯನಾಗಿ ಬ್ರಿಟಿಷರ ಜೀವನ ವಿಧಾನದ ಅನುಭವ, ಈ ಅವಧಿಯಲ್ಲಿ ಅವರ ಸಂಪರ್ಕಗಳು ಅವರ ದೃಷ್ಟಿಕೋನದ ಮೇಲೆ ಗಂಭೀರವಾದ ಪರಿಣಾಮವನ್ನುಂಟು ಮಾಡಿದವು. ಲಂಡನ್ನಿನಲ್ಲಿ ಗಾಂಧೀಜಿಯುವರ ಚಟುವಟಿಕೆ, ಸಂಪರ್ಕಗಳು, ಅವರ ಅನುಭವ ಸಾಧನೆಯನ್ನು ಕುರಿತು ಜೇಮ್ಸ್ ಹಂಟ್ ಎಂಬ ಸಂಶೋಧಕರು ಬರೆದಿರುವ 'ಗಾಂಧಿ ಇನ್ ಲಂಡನ್' ಎಂಬ ಪುಸ್ತಕ ಗಾಂಧೀಜಿಯವರ ಜೀವನ ಮತ್ತು ಸಾಧನೆಯನ್ನು ಬಿಂಬಿಸುವ ಒಂದು ಪ್ರಬುದ್ಧ ಕೃತಿಯಾಗಿದೆ.

18 ವರ್ಷದ ಯುವಕ ಗಾಂಧೀ ವಿದ್ಯಾಭ್ಯಾಸಕ್ಕಾಗಿ ಲಂಡನ್ನಿಗೆ ಆಗಮಿಸುವ ಪ್ರಕರಣದಿಂದ ಗ್ರಂಥವು ಆರಂಭವಾಗುತ್ತದೆ. 18 ವರ್ಷದ ಯುವಕ ಲಂಡನ್ನಿಗೆ ಬಂದು ನೆಲಸುವ ಪ್ರಕರಣ ಬಹು ಸ್ವಾರಸ್ಯಕರವಾಗಿದೆ. ಇಂಗ್ಲೆಂಡಿಗೆ ಬರುವುದಕ್ಕಾಗಿ ನಡೆಸಿದ ಸಿದ್ಧತೆ ಬಗ್ಗೆ ಲೇಖಕರು ಸಂಕ್ಷೇಪವಾಗಿ ತಿಳಿಸುತ್ತಾರೆ.

ಲಂಡನ್ನಿನ ಜೀವನ ಅವರ ಭವಿಷ್ಯವನ್ನು ರೂಪಿಸುವಲ್ಲಿ ಪ್ರಮುಖವಾದ ಅಂಶವಾಗಿದ್ದಿತು. ಸುಮಾರು ಮೂರು ವರ್ಷಗಳ ಕಾಲದ ವಾಸ್ತವ್ಯದಲ್ಲಿ ಅವರಿಗೆ ಬ್ರಿಟೀಷರ ಜೀವನ ಕ್ರಮದ ಪರಿಚಯವಾಗಿದ್ದಲ್ಲದೆ, ಇಂಗ್ಲೀಷ್ ಜನತೆಯ ಬಗ್ಗೆ ಗೌರವ ಪ್ರೀತಿಯುಂಟಾಗಿದ್ದಲ್ಲದೆ, ಲಂಡನ್ ನಗರದ ಬಗ್ಗೆ ವೃತ್ತಿ ಜೀವನದ ತರಬೇತಿಯ ಸ್ಥಾನ ಮಾತ್ರವಾಗಿರಲಿಲ್ಲ. ಅಲ್ಲಿ ಗಾಂಧಿ ಅವರ ಬೌದ್ಧಿಕ ಜಾಗೃತಿ ಹಾಗೂ ನೈತಿಕ ಪ್ರೌಢಿಮೆಗೂ ಸಾಕ್ಷಿಯಾಯಿತು ಹಾಗೂ ಆಧ್ಯಾತ್ಮಿಕ ಮಾರ್ಗದತ್ತ ಸಾಗಲು ಇಲ್ಲಿ ಪ್ರೇರಣೆ ದೊರಕಿತು.

ಇವೆಲ್ಲವನ್ನೂ ಗಾಂಧೀಜಿಯವರು ತಮ್ಮ ಮಿತ್ರರು, ಸಹಪಾಠಿಗಳು, ಗುರುಗಳಿಂದ ಕಲಿತುಕೊಂಡರು. ಹಾಗೆಯೇ ಮುಂದೆ ಬ್ರಿಟಿಷರ ಮನೋಭಾವವನ್ನು ಚೆನ್ನಾಗಿ ಅರಿತುಕೊಂಡರು. ಅದು ಮುಂದೆ ಅವರು ಸ್ವಾತಂತ್ರ ಚಳುವಳಿಯ ನೇತಾರರಾಗಿ ಬ್ರಿಟಿಷರಿಗೆ ಭಾರತೀಯ ಮನೋಭಾವವನ್ನು ವ್ಯಾಖ್ಯಾನಿಸುವ ಕಾರ್ಯದಲ್ಲಿ ನೆರವಾಯಿತು.

ಲಂಡನ್ನಿನಲ್ಲಿ ಬಾರ್‌ಅಟ್‌ಲಾ ಪದವಿಗೋಸ್ಕರ ಅವರು ಕಷ್ಟಪಟ್ಟು ಅಭ್ಯಾಸ ಮಾಡಿದರು. ಈ ಮಧ್ಯೆ ಅವರು ಲಂಡನ್ನಿನಲ್ಲಿ ಥಿಯಾಸಾಫಿಕಲ್ ಸೊಸೈಟಿ ಮತ್ತು ಸಸ್ಯಾಹಾರಿಗಳ ಸಂಘದ ಸದಸ್ಯರಾಗಿ ಲಂಡನ್ನಿನ ಸಾಮಾಜಿಕ ಜೀವನದ ಒಂದು ಮುಖದ ಪರಿಚಯವನ್ನೂ ಪಡೆದರು. ಲಂಡನ್ನಿನಲ್ಲಿ ಸಸ್ಯಾಹಾರವನ್ನು ಪಡೆಯುವುದು ಮೊದಲು ಸ್ವಲ್ಪ ಕಷ್ಟವಾಯಿತು. ಗಾಂಧೀಜಿಯವರು ಬ್ಯಾರಿಸ್ಟರ್ ಪರೀಕ್ಷೆ ಪಾಸಾಗಲು 12 ಭೋಜನಗಳಲ್ಲಿ ಭಾಗವಹಿಸುವುದು ಕಡ್ಡಾಯವಾಗಿದ್ದಿತು. ಗಾಂಧೀಜಿಯವರಿಗೆ ಇದೊಂದು ಮುಜುಗರದ ವಿಷಯವಾಗಿದ್ದಿತು. ಅವರು ಸ್ವಲ್ಪ ದಿನ ಹೋಟಲಿನಲ್ಲಿ ವಾಸ್ತವ್ಯವಿದ್ದು ಅನಂತರ ಒಂದು ಕೊಠಡಿಯನ್ನೂ ಬಾಡಿಗೆ ಪಡೆದು ತಾವೇ ಅಡುಗೆ ಮಾಡಿಕೊಳ್ಳಲಾರಂಭಿಸಿದರು. ಸಸ್ಯಾಹಾರ ಸಂಘದ ಸದಸ್ಯರ ಸಂಬಂಧ ಅವರ ಲಂಡನ್ನಿನ ಬಾಳಿನಲ್ಲಿ ನೆಮ್ಮದಿ ನೀಡುವ ಅಂಶವಾಗಿದ್ದಿತು. ಹಾಗೆಯೇ ತಮ್ಮ ಆಧ್ಯಾತ್ಮ ತೃಷೆಯನ್ನು ತೀರಿಸಿಕೊಳ್ಳಲು ಚರ್ಚುಗಳಿಗೆ ತಪ್ಪದೆ ಭೇಟಿ ಕೊಡುತ್ತಿದ್ದರು. ಸ್ವಲ್ಪ ಕಾಲಾನಂತರ ಲಂಡನ್ನಿನಲ್ಲಿ ಕೆಲವರ್ಷಗಳ ಹಿಂದೆ ಅಸ್ತಿತ್ವಕ್ಕೆ ಬಂದಿದ್ದ ಥಿಯಾಸಫಿಕಲ್ ಸೊಸೈಟಿ ಗಾಂಧೀಜಿಯವರನ್ನು ಕೈ ಬೀಸಿ ಕರೆಯಿತು. ಅದರ ಸ್ಥಾಪಕಿ ಬ್ಲಾವಟ್‌ಸ್ಕಾ ಮೊದಲಾದ ಗಣ್ಯರನ್ನು ಭೇಟಿ ಮಾಡಿದರು. ಲಂಡನ್ನಿನಲ್ಲಿ ಪಾಶ್ಚಿಮಾತ್ಯ



ನಾಗರಿಕತೆಯ ಮಧ್ಯದಲ್ಲಿ ಹೊಸ ವಿಚಾರಗಳನ್ನು ತತ್ವಗಳನ್ನು ಪರಿಶೀಲಿಸುವ ಅವಕಾಶ ಒದಗಿ ಬಂದಿತು.

1891 ಜೂನ್ ತಿಂಗಳಲ್ಲಿ ಗಾಂಧೀಜಿಯವರು ಲಂಡನ್ನಿಗೆ ವಿದಾಯ ಹೇಳಿ ಸ್ವದೇಶಕ್ಕೆ ಮರಳಿದರು ಮೂರು ವರ್ಷಗಳ ಅವಧಿಯಲ್ಲಿ ಅವರು ವಕೀಲ ವೃತ್ತಿಗೆ ಅಗತ್ಯವಾದ ಪ್ರತಿಷ್ಠಿತ ಬ್ಯಾರಿಸ್ಟರ್ ಪದವಿಯನ್ನು ಗಳಿಸಿಕೊಂಡಿದ್ದುದಲ್ಲದೆ ಮಾನಸಿಕವಾಗಿ, ಬೌದ್ಧಿಕ ಹಾಗೂ ಆಧ್ಯಾತ್ಮಿಕವಾಗಿ ಸಾಕಷ್ಟು ಪ್ರಗತಿಯನ್ನು ಸಾಧಿಸಿದ್ದರು. ಥಿಯೋಸಫಿ ಅವರ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿದ್ದಿತು. ರಾಜಕೀಯವಾಗಿ ಅವರು ಉದಾರವಾದ ತತ್ವಗಳಿಂದ ಕೂಡಿದ ಸಾಮ್ರಾಜ್ಯಶಾಹಿ ಆಳ್ವಿಕೆಯನ್ನು ಬೆಂಬಲಿಸುವಂತೆ ಕಂಡರು.

1906ರಲ್ಲಿ ಗಾಂಧೀಜಿಯುವರು ದಕ್ಷಿಣ ಆಫ್ರಿಕಾದಿಂದ ಲಂಡನ್ನಿಗೆ ಬಂದರು. ಲಂಡನ್ನಿನಲ್ಲಿ ಅವರ ಮಿತ್ರರು ಕೆಲವು ಸಂಘ ಸಂಸ್ಥೆಗಳ ಸದಸ್ಯರನ್ನು, ಅನೇಕ ಗಣ್ಯವ್ಯಕ್ತಿಗಳನ್ನು ಸಂಧಿಸಿದರು. ಈ ಭೇಟಿಯಲ್ಲಿ ಅವರು ವಯೋವೃದ್ಧರಾಗಿದ್ದ ದಾದಾಬಾಯಿನವರೋಜಿ, ಸರ್‌ಹನ್ರಿ ಕಾಟನ್ ಮತ್ತು ವಿಲಿಯಂವಡ್ಡರ್ ಬರ್ನ ಮೊದಲಾದ ಭಾರತದ ಮಿತ್ರರನ್ನು ಸಂಧಿಸಿದರು. ನವರೋಜಿ ಅವರ ಸಲಹೆಯಂತೆ ಲಂಡನ್ನಿನಲ್ಲಿದ್ದ ಅನೇಕ ಭಾರತದ ಬೆಂಬಲಿಗರನ್ನು, ಉದಾರವಾದಿಗಳನ್ನು ಸಂಧಿಸಿದರು. ಹಲವಾರು ಭಾರತೀಯ ನಾಯಕರನ್ನು, ಕೆಲವು ಇಂಗ್ಲಿಷ್ ಮಿತ್ರರನ್ನೂ ಒಳಗೊಂಡ 14 ಸದಸ್ಯರ ನಿಯೋಗ ಲಾರ್ಡ್ ಎಲ್ಜಿನ್ನರನ್ನು ಭೇಟಿ ಮಾಡಿ ಅವರಿಗೆ ಆಫ್ರಿಕಾದಲ್ಲಿದ್ದ ಭಾರತೀಯರ ಪರಿಸ್ಥಿತಿಯನ್ನು ವಿವರಿಸುವ ಮನವಿಯನ್ನೂ ಸಲ್ಲಿಸಿತು. ಹಾಗೆಯೇ 100 ಜನ ಬ್ರಿಟೀಷ್ ಪಾರ್ಲಿಮೆಂಟ್ ಸದಸ್ಯರನ್ನು ಉದ್ದೇಶಿಸಿ ಗಾಂಧೀಜಿಯವರು ಭಾಷಣ ಮಾಡಿದರು. ಹಾಗೆಯೇ ಲಂಡನ್ನಿನಲ್ಲಿದ್ದ ಪ್ರಸಿದ್ಧ ಪಾರ್ಲಿಮೆಂಟ್ ಸದಸ್ಯರನ್ನು ರಾಜಕಾರಣಿಗಳನ್ನು ಭೇಟಿ ಮಾಡಿದರು. ಅವರ ಸಂಧಾನ ಮತ್ತು ಗಣ್ಯರ ಭೇಟಿ ಯಶಸ್ವಿಯಾಗಿ ಬ್ರಿಟಿಷ್ ಸರ್ಕಾರ ಒಂದು ನಿಯೋಗವನ್ನು ಆಫ್ರಿಕಾಕ್ಕೆ ಕಳುಹಿಸಲು ನಿರ್ಧರಿಸಿತು. ಬ್ರಿಟಿಷ್ ಸರ್ಕಾರದ ಗಮನಕ್ಕೆ ಭಾರತೀಯ ಸಮಸ್ಯೆಗಳನ್ನು ತಂದು ಅವರನ್ನು ಕಾರ್ಯೋನ್ಮುಖರಾಗಿ ಮಾಡಿದ್ದಕ್ಕೆ ಗಾಂಧೀಜಿಯವರಿಗೆ ಸಂತೃಪ್ತಿ ಲಭಿಸಿತು. ಗಾಂಧೀಜಿಯವರು ಪ್ರಬುದ್ಧ ರಾಜಕೀಯ ನಾಯಕರಾಗಿ ಬೆಳೆದಿದ್ದುದು ಸ್ಪಷ್ಟವಾಗಿದ್ದಿತು.

1909ರಲ್ಲಿ ಗಾಂಧೀಜಿಯವರು ಮತ್ತೊಮ್ಮೆ ಲಂಡನ್ನಿಗೆ ಭೇಟಿಯಿತ್ತರು. ದಕ್ಷಿಣ ಆಫ್ರಿಕಾದಲ್ಲಿ ಆಚರಣೆಯಲ್ಲಿದ್ದ ವರ್ಣಬೇಧ ನೀತಿಯನ್ನು ವಿರೋಧಿಸಿ ಅದಕ್ಕೆ ತಿದ್ದುಪಡಿಯನ್ನು ತರುವಂತೆ ಮಾಡಲು ಅವರು ಸಾಕಷ್ಟು ಪ್ರಯತ್ನ ಮಾಡಿದರೂ ಅವರ ಪ್ರಯತ್ನಕ್ಕೆ ಫಲ ದೊರೆಯಲಿಲ್ಲ. ಗಾಂಧೀಜಿಯವರು ಲಂಡನ್ನಿನಲ್ಲಿದ್ದರೂ ಭಾರತದ ರಾಜಕೀಯ ಪರಿಸ್ಥಿತಿಯನ್ನು ಸದಾ ಗಮನಿಸುತ್ತಲೇ ಬಂದಿದ್ದರು. ಭಾರತೀಯರ ಹಿತಚಿಂತಕರಾಗಿದ್ದ ಹೆನ್ರಿ ತಿಲಕ್ ಅವರನ್ನು ಭಾರತಕ್ಕೆ ಕಳುಹಿಸಿ ಅಲ್ಲಿ ಪ್ರಮುಖ ರಾಜಕೀಯ ಮುಖಂಡರನ್ನು ಸಂಧಿಸಿ, ಭಾರತೀಯರ ಹೋರಾಟಕ್ಕೆ ನೆರವು ನೀಡುವಂತೆ ತಿಳಿಸಿದ್ದರು. ಹಾಗೆಯೇ ಇಂಗ್ಲೆಂಡಿನ ಅನೇಕ ನಗರಗಳಿಗೆ ಭೇಟಿ ಕೊಟ್ಟು ಭಾರತೀಯರ ಸಭೆ ಸಮಾರಂಭಗಳಲ್ಲಿ ಭಾಗವಹಿಸಿ ವರ್ಣಬೇಧ, ಸಾಮ್ರಾಜ್ಯಶಾಹಿಯ ದಬ್ಬಾಳಿಕೆ ವಿರುದ್ಧ ಹೋರಾಡಲು ಕರೆಯಿತ್ತರು.

ಲಂಡನ್ನಿನಿಂದ ದಕ್ಷಿಣ ಆಫ್ರಿಕಾಕ್ಕೆ ಹೋಗುವಾಗ ಹಡಗಿನಲ್ಲಿ ಪ್ರಯಾಣ ಮಾಡುತ್ತಿರುವಾಗ ಗಾಂಧೀಜಿಯವರು ಟಾಲ್‌ಸ್ಟಾಯ್ ಅವರ ಗ್ರಂಥಕ್ಕೆ ಮುನ್ನುಡಿಯನ್ನು ಬರೆದರು. ಅದೇ ಸಂದರ್ಭದಲ್ಲಿ ಅವರು ತಮ್ಮ ಪ್ರಸಿದ್ದ ಹಿಂದ್‌ಸ್ವರಾಜ್ ಅಥವಾ ಇಂಡಿಯಾದ ಹೋಮ್‌ರೂಲ್ ಎಂಬ ಗ್ರಂಥವನ್ನು ರಚಿಸಿದರು. ಇಪ್ಪತ್ತು ಅಧ್ಯಾಯಗಳನ್ನೊಳಗೊಂಡು ಸುಮಾರು 80 ಪುಟಗಳಿಂದ ಕೂಡಿದ ಈ ಕೃತಿಯಲ್ಲಿ ಗಾಂಧೀಜಿಯವರು ಪಾಶ್ಚಿಮಾತ್ಯರ ವಿರುದ್ಧ ಉಗ್ರ ಟೀಕೆಯನ್ನು ಮಾಡಿದ್ದರು. ಹಿಂಸಾಚಾರಕ್ಕೆ ಈ ಗ್ರಂಥದಲ್ಲಿ ತಾವು ಸರಿಯಾದ ಉತ್ತರವನ್ನು ನೀಡಿರುವುದಾಗಿ ತಿಳಿಸಿದರು.

1914ರ ಮೊದಲ ಮಹಾಯುದ್ಧದಲ್ಲಿ ಭಾರತೀಯ ಸೈನ್ಯದ ತುಕಡಿಗಳು ಮಿತ್ರರಾಷ್ಟ್ರಗಳ ಪರವಾಗಿ ಹೋರಾಡಲು ಯೂರೋಪಿಗೆ ಬಂದು ಸೇರಿದವು. ಈ ಸಂದರ್ಭದಲ್ಲಿ ಕರ್ನಲ್ ಬೇಕರ್ ನಿಯಮಕ್ಕೆ ವಿರುದ್ಧವಾಗಿ ವಿಭಾಗದ ನಾಯಕರನ್ನು ನೇಮಿಸಿದ್ದರಿಂದ ಸೈನಿಕರು, ಅವರ ಮುಖಂಡರು ಸಿಡಿದೆದ್ದರು. ಗಾಂಧೀಜಿಯವರು ಸತ್ಯಾಗ್ರಹವನ್ನು ಕೈಗೊಂಡು ಕರ್ನಲ್ ಬೇಕರ್ ಅವರ ಮನಸ್ಸನ್ನು ಪರಿವರ್ತಿಸುವಲ್ಲಿ ಯಶಸ್ವಿಯಾದರು. ಈ ರೀತಿಯಲ್ಲಿ ಗಾಂಧೀಜಿಯವರು



ಹಂತ ಹಂತವಾಗಿ ದಕ್ಷ ಪ್ರಭಾವೀ ನಾಯಕರಾಗಿ ರೂಪುಗೊಳ್ಳುತ್ತಿದ್ದರು.

ಮಹಾತ್ಮಗಾಂಧಿಯವರ ಅಂತಿಮ ಲಂಡನ್ ಭೇಟಿ (1931) ಅತ್ಯಂತ ಮಹತ್ವಪೂರ್ಣವಾಗಿದ್ದಿತು. ಈ ಬಾರಿ ಅವರು ದೈನ್ಯದಿಂದ ಬ್ರಿಟಿಷ್ ಅಧಿಕಾರಿಗಳ ಮುಂದೆ ತಮ್ಮ ಮನವಿಯನ್ನು ಸಲ್ಲಿಸಲು ಬಂದಿದ್ದ ದುರ್ಬಲ ವ್ಯಕ್ತಿಯಾಗಿರಲಿಲ್ಲ. ಅವರು ಭಾರತೀಯ ರಾಜಕೀಯ ಜೀವನದಲ್ಲಿ ಎಷ್ಟು ಪ್ರಬಲ ವ್ಯಕ್ತಿಯಾಗಿದ್ದರೆಂದರೆ ಭಾರತದ ವೈಸ್‌ರಾಯ್ ಸ್ವತಃ ಗಾಂಧೀಯವರನ್ನು ಲಂಡನ್ನಿಗೆ ಬರಲು ಆಹ್ವಾನ ನೀಡಿದ್ದರು. ಭಾರತೀಯ ರಾಜಕೀಯದಲ್ಲಿ ಉದ್ಭವಿಸಿದ್ದ ಬಿಕ್ಕಟ್ಟನ್ನು ಪರಿಹರಿಸಲು ಇಂಗ್ಲೀಷ್ ಸರ್ಕಾರ ಗಾಂಧೀಯವರನ್ನು ಲಂಡನ್ನಿಗೆ ಬರುವಂತೆ ಒತ್ತಾಯಿಸಿತು. ಗಾಂಧೀಜಿಯವರೊಂದಿಗೆ ಅವರ ಕಾರ್ಯದರ್ಶಿಗಳಾದ ಮಹದೇವದೇಸಾಯಿ, ಪ್ಯಾರೇಲಾಲ್ ಮತ್ತು ಮಗ ದೇವದಾಸ್ ಕೂಡ ಲಂಡನ್ನಿಗೆ ಆಗಮಿಸಿದರು. ಮದನಮೋಹನ ಮಾಳವೀಯ ಅವರೂ ಗೋಷ್ಠಿಯಲ್ಲಿ ಭಾಗವಹಿಸಲು ಗಾಂಧೀಜಿಯವರು ಪ್ರಯಾಣ ಮಾಡಿದ ಹಡಗಿನಲ್ಲಿ ಬಂದಿದ್ದರು. ಲಂಡನ್ನಿನಲ್ಲಿ ಗಾಂಧೀಜಿಯವರು ಬರುತ್ತಿದ್ದಂತೆ ಅವರಿಗೆ ಅದ್ಧೂರಿಯ ಸ್ವಾಗತ ಕೋರಲು ಸಿದ್ದತೆಗಳು ನಡೆದವು ಯೂರೋಪಿನ ಅನೇಕ ದೇಶದ ಸಂಘಸಂಸ್ಥೆಗಳು, ಪ್ರಸಿದ್ಧ ವ್ಯಕ್ತಿಗಳು ಗಾಂಧೀಜಿಯವರನ್ನು ಆಹ್ವಾನಿಸಿ ಕರೆ ನೀಡಿದವು. ಅವರ ಅಭಿಪ್ರಾಯವನ್ನು, ಪ್ರತಿಕ್ರಿಯೆಯನ್ನು ತಿಳಿಸುವಂತೆ ನೂರಾರು ಪತ್ರಗಳು ಬಂದವು.

ಗಾಂಧೀಜಿಯವರು ದುಂಡುಮೇಜಿನ ಗೋಷ್ಠಿಯ ಎಲ್ಲಾ ಕಾರ್ಯ ಸಮಿತಿಗಳ ಕಾರ್ಯಕಲಾಪಗಳಲ್ಲೂ ಭಾಗವಹಿಸಿದರು. ಗೋಷ್ಠಿಯಲ್ಲಿ ಅವರು ಕಾಂಗ್ರೆಸ್ಸಿನ ಪ್ರತಿನಿಧಿಯಾಗಿ ಭಾರತಕ್ಕೆ ಪೂರ್ಣ ಸ್ವರಾಜ್ಯವನ್ನು ನೀಡಬೇಕೆಂಬ ತಮ್ಮ ಬೇಡಿಕೆಯನ್ನೂ ಮುಂದಿಟ್ಟರು. ಆದರೆ ಬ್ರಿಟಿಷ್ ಸರ್ಕಾರವು ಗಾಂಧೀಜಿಯವರ ಮನವಿಯನ್ನು ಪುರಸ್ಕರಿಸದೆ ವಿವಿಧ ಜಾತಿಗಳು, ಮತವರ್ಗಗಳ ಅಭಿಪ್ರಾಯಗಳಿಗೆ ಒತ್ತು ನೀಡಿ ಒಡೆದು ಆಳುವ ನೀತಿಯನ್ನು ಪ್ರದರ್ಶಿಸಿದರು.

ಲಂಡನ್ನಿನಲ್ಲಿ ಇದ್ದ ಸಮಯದಲ್ಲಿ ಗಾಂಧೀಜಿಯವರು ಅಲ್ಲಿನ ಜನಸಾಮಾನ್ಯರೊಡನೆ ಬೆರೆತು ಅವರ ಜೀವನ ವಿಧಾನ, ಅವರ ಕಷ್ಟ ನಷ್ಟಗಳನ್ನು ವಿಚಾರಿಸುತ್ತಿದ್ದರು. ಲಂಡನ್ನಿನ ಅನೇಕ ಕಾರ್ಯಕ್ರಮಗಳಲ್ಲಿ ಲಂಕಾಶೈರ್‌ಗೆ ಭೇಟಿ ನೀಡಿದ್ದು ಅತ್ಯಂತ ಗಮನಾರ್ಹವಾದ ಘಟನೆಯೆನ್ನಬಹುದು. ಜಗತ್ತಿನಾದ್ಯಂತ ಸಂಭವಿಸಿದ್ದ ಆರ್ಥಿಕ ಕುಸಿತದಿಂದ ಲಂಕಾಷೈರ್ ಕಾರ್ಖಾನೆಗಳು ಮುಚ್ಚಿದ್ದವು. ವಿದೇಶೀ ಬಟ್ಟೆಗಳ ಬಹಿಷ್ಕಾರದಿಂದ ಇಂಗ್ಲೆಂಡಿನಲ್ಲಿ ಪರಿಸ್ಥಿತಿ ಉಲ್ಬಣಿಸಿ, ನಿರುದ್ಯೋಗ ತಲೆದೋರಿದ್ದಿತು. ಲಂಕಾಶೈರಿಗೆ ಆಗಮಿಸಿದ ಗಾಂಧೀಜಿಯವರನ್ನು ಅಲ್ಲಿನ ಕಾರ್ಮಿಕರು ಜಯಘೋಷಗಳಿಂದ ಸ್ವಾಗತಿಸಿದರು. ಅವರನ್ನು ಆತ್ಮೀಯವಾಗಿ ಸನ್ಮಾನಿಸಿದರು. ಈ ಘಟನೆ ಅನೇಕರಿಗೆ ಅಚ್ಚರಿಯನ್ನುಂಟು ಮಾಡಿತು. ಆದರೆ ಮಹಾತ್ಮರ ಸತ್ಯ ಸಂಧತೆಯನ್ನರಿತಿದ್ದವರಿಗೆ ಇದೇನೂ ಆಶ್ಚರ್ಯಕರವಾದ ವಿಷಯವಾಗಿರಲಿಲ್ಲ. ಅದೇ ರೀತಿ ಒಂದು ಕಾರ್ಖಾನೆಗೆ ಗಾಂಧೀಜಿಯವರು ಭೇಟಿ ನೀಡಿದಾಗ ಮ್ಯಾನೇಜರ್ ಅವರ ಅನುಮತಿ ಪಡೆದು ಗಂಟೆಯನ್ನು ಹೊಡೆದಾಗ ಸಹಸ್ರಾರು ಮಹಿಳಾ ಕಾರ್ಮಿಕರು ಧಾವಿಸಿ ಬಂದು ಗಾಂಧೀಜಿಯವರನ್ನು ಮುತ್ತಿಕೊಂಡು ಗಾಂಧೀಜಿಯವರಿಗೆ ಜಯವಾಗಲಿ ಎಂದು ಪ್ರಚಂಡ ಜಯಘೋಷವನ್ನು ಮಾಡಿದರು.

ಗಾಂಧೀಜಿಯುವರ ಲಂಡನ್ ಭೇಟಿಯು ಮತ್ತೊಂದು ಮಹತ್ವದ ಕಾರ್ಯಕ್ರಮ ಇಂಗ್ಲೆಂಡ್‌ನ ದೊರೆಯೊಂದಿಗೆ ಚಹಾಕೂಟದಲ್ಲಿ ಭಾಗವಹಿಸಿದ್ದ ಗೋಷ್ಠಿಯಲ್ಲಿ ಭಾಗವಹಿಸಲು ಬಂದಿದ್ದು. ಎಲ್ಲ ಪ್ರತಿನಿಧಿಗಳಿಗೆ ಇಂಗ್ಲೆಂಡಿನ ದೊರೆ ಭಾರತದ ಚಕ್ರವರ್ತಿ ನವೆಂಬರ್ 5ರಂದು ಬ್ರಿಟಿಷರ ಸರ್ಕಾರದ ವಿರುದ್ಧ ಬಂಡಾಯಕ್ಕೆ ಕರೆನೀಡಿದ್ದ ಗಾಂಧೀಜಿಯವರನ್ನು ಸತ್ಕರಿಸಲು ದೊರೆ ನಿರಾಕರಿಸಿದ. ಮೈತುಂಬಾ ಉಡುಪು ಧರಿಸದ ಮೊಳಕಾಲು ಮುಚ್ಚದ ಬಟ್ಟೆ ಧರಿಸಿದ ಈ ವ್ಯಕ್ತಿಯನ್ನು ಅರಮನೆಗೆ ಬರಮಾಡಿಕೊಳ್ಳುವುದು ಇಂಗ್ಲೆಂಡಿನ ದೊರೆಗೆ ಮುಜುಗರವೆನ್ನಿಸಿತು. ಆದರೆ ಸರ್ಕಾರದ ಉನ್ನತ ಅಧಿಕಾರಿಗಳು ರಾಜಕಾರಣದ ಶಿಷ್ಟಾಚಾರದ ಅಂಶವನ್ನು ವಿವರಿಸಿ ಅವರ ಒಪ್ಪಿಗೆ ಪಡೆಯಬೇಕಾಯಿತು. ಗಾಂಧೀಜಿಯವರೂ ಸಹ ಭಾರತೀಯರ ದುಸ್ಥಿತಿಯನ್ನು ಗಮನಿಸಿದರೆ ನನಗೂ ಈ ಕೂಟಕ್ಕೆ ಹೋಗಲು ಮನಸ್ಸು ಬರುತ್ತಿಲ್ಲ. ಆದರೆ ಶಿಷ್ಟಾಚಾರವನ್ನು ಉಲ್ಲಂಘಿಸಬಾರದೆಂಬ ಕಾರಣಕ್ಕಾಗಿ ತಾವು ಅಲ್ಲಿಗೆ ಹೋಗುವುದಾಗಿ ತಿಳಿಸಿದರು.



ಇದೇ ಸಮಯದಲ್ಲಿ ಇಂಗ್ಲೆಂಡಿನ ಪ್ರತಿಷ್ಠಿತ ವಿಶ್ವವಿದ್ಯಾನಿಲಯಗಳು ಬೌದ್ಧಿಕ ಹಾಗೂ ಸೇವಾ ಸಂಸ್ಥೆಗಳ ಮಹಾತ್ಮರನ್ನು ಆಹ್ವಾನಿಸಿ ಅವರೊಂದಿಗೆ ಸಂವಾದ ಭಾಷಣಗಳ ಕಾರ್ಯಕ್ರಮಗಳನ್ನು ಇಟ್ಟುಕೊಂಡಿದ್ದವು. ಅಲ್ಲಿನ ಪ್ರಸಿದ್ಧ ವಿದ್ವಾಂಸರು, ಪ್ರಾಧ್ಯಾಪಕರೂ ಗಾಂಧೀಜಿಯವರ ವಿವರಣೆ ಭಾರತ ಸ್ವಾತಂತ್ರ್ಯದ ಪ್ರತಿಪಾದನೆಯನ್ನು ಮೆಚ್ಚಿಕೊಂಡರು.

ಜೇಮ್ಸ್‌ಹಂಟ್ ಅವರು ಹೇಳುವಂತೆ ಬ್ರಿಟನ್ನಿನ ಬಹುತೇಕ ಜನರು ಗಾಂಧೀಜಿಯವರನ್ನು ತೀವ್ರವಾದ ಕ್ರಾಂತಿಕಾರಿ ಎಂದು ಪರಿಗಣಿಸಿದರು. ಆದರೆ ಗಾಂಧೀಜಿಯವರು ತೀವ್ರಸ್ವರೂಪದ ವಿರೋಧಿ ಭಾವನೆಗೆ ಎಡೆಗೊಡದೆ ಮಧ್ಯಮ ಮಾರ್ಗವನ್ನು ಅನುಸರಿಸಿದರು. ಇದರಿಂದ ಬೇಸರಗೊಂಡ ಭಾರತದ ಕ್ರಾಂತಿಕಾರಿಗಳು ಗಾಂಧೀಜಿಯರವನ್ನು ಬಂಡವಾಳಶಾಹಿಗಳ ಏಜೆಂಟ್ ಎಂದು ಕರೆದರು. ಗಾಂಧೀಜಿಯವರು ಭಾರತಕ್ಕೆ ಹಿಂದಿರುಗುವ ಮುನ್ನ ಲಂಡನ್ನಿನಲ್ಲಿ ಅನೇಕ ಸಂಘಸಂಸ್ಥೆಗಳು ಅವರಿಗೆ ಅದ್ದೂರಿಯ ಬೀಳ್ಕೊಡುಗೆ ಸಮಾರಂಭಗಳನ್ನು ಏರ್ಪಡಿಸಿದ್ದವು. ಒಂದೆರಡು ಸಭೆಗಳಲ್ಲಿ ಸಭಾಂಗಣದಲ್ಲಿ ಸ್ಥಳವಿಲ್ಲದೆ ಹೋಗಿ ಮೈದಾನದಲ್ಲಿ, ಪಾರ್ಕಿನಲ್ಲಿ ಕಾರ್ಯಕ್ರಮವನ್ನು ಏರ್ಪಡಿಸಬೇಕಾಯಿತು.

ಗಾಂಧೀಜಿಯವರನ್ನು ಪ್ರಮುಖ ಬ್ರಿಟಿಷ್ ನಾಯಕರಿಗೆ ಪರಿಚಯ ಮಾಡಿಕೊಟ್ಟು, ಅವರು ಬ್ರಿಟಿಷರ ಮೇಲೆ ಗಾಢ ಪ್ರಭಾವವನ್ನುಂಟು ಮಾಡಿದ ಚಾರ್ಲಸ್ ಆಂಡ್ರೂಸ್ ಬಾಪೂಜಿಯವರ ಲಂಡನ್ ಭೇಟಿಯ ಪರಿಣಾಮವನ್ನು ಈ ರೀತಿ ವರ್ಣಿಸುತ್ತಾರೆ.

ಅವರ ವಿಶಿಷ್ಟವಾದ ವ್ಯಕ್ತಿತ್ವ ಬ್ರಿಟನ್ನಿನ ಮೇಧಾವಿಗಳ ಮನಸ್ಸು ಹೃದಯಗಳನ್ನು ತಟ್ಟಿತು. ಅವರು ತಮ್ಮದೇ ಆದ ಗಹನವಾದ ವಿಚಾರಗಳಿಂದ ತನ್ನನ್ನು ಸಂಧಿಸಿದವರ ಮೇಲೆ ಹಿಂದೆಂದೂ ಆಗಿರದಂತಹ ಪ್ರಭಾವನ್ನುಂಟು ಮಾಡಿದರು. ಅವರು ಗಾಂಧೀಜಿಯವರು ಹೇಳಿದ್ದನ್ನೆಲ್ಲ ಒಪ್ಪದಿದ್ದರೂ ಅವರ ವ್ಯಕ್ತಿತ್ವದ ಪಾವಿತ್ರ್ಯವನ್ನೂ ಕೂಡಲೇ ಕಂಡು ಗೌರವಿಸಿದರು. ಮಹಾತ್ಮ ಗಾಂಧೀಯವರು ಸರಿಪಡಿಸಲಾಗದಂತಹ ಒಬ್ಬ ಮೂಲಭೂತವಾದಿ ಎನ್ನುವ ಅಭಿಪ್ರಾಯ ಜನಮನದಿಂದ ದೂರವಾಯಿತು.

ಗಾಂಧೀಜಿಯವರಿಗಂತೂ ಅವರ ಲಂಡನ್ ಪ್ರವಚನಗಳು ಅವರ ಜೀವನದ ಅಪೂರ್ವ ಅನುಭವದ ಸೆಲೆಗಳಾಗಿದ್ದವು. ಅವರು ಶ್ರೀಮಂತ, ಮಧ್ಯಮವರ್ಗ, ಬಡಜನರು ಎಲ್ಲ ವಿಧವಾದ ಜನರನ್ನು ಸಂಧಿಸಿದ್ದರು. ಸುಧಾರಕರ ಹಾಗೂ ಬುದ್ಧಿಜೀವಿಗಳ ಗೌರವಕ್ಕೆ ಪಾತ್ರರಾದರೆ ಶ್ರೀಮಂತರೂ ಕನ್ಸರ್ವೇಟೀವ್ ವರ್ಗದವರೊಂದಿಗೆ ಸಂಪರ್ಕ ಸ್ಥಾಪಿಸಿಕೊಳ್ಳುವಲ್ಲಿ ಯಶಸ್ವಿಯಾದರು. ಇಂಗ್ಲೆಂಡಿನ ಸಾಮಾಜಿಕ ಜೀವನದ ಪರಿಚಯ ಪಡೆದುಕೊಳ್ಳುವಲ್ಲಿ ಈ ಭೇಟಿ ಬಹು ಉಪಯುಕ್ತವಾಗಿದ್ದಿತು. ○





# ಸ್ವಾತಂತ್ರ ಸಂಗ್ರಾಮದಲ್ಲಿ ತುಮಕೂರು ಜಿಲ್ಲೆಯ ಪಾತ್ರ

**– ಎಂ.ಎಸ್. ಹನುಮಂತರಾವ್**

1881ರಲ್ಲಿ ರಾಜ್ಯದ ಅಧಿಕಾರ ಬದಲಾವಣೆಯಾದಾಗ ಮೈಸೂರು ರಾಜ್ಯದಲ್ಲಿ ಪ್ರಥಮವಾಗಿ ಪ್ರಜೆಗಳಿಂದ ಚುನಾಯಿತರಾದ ನಿಷ್ಠಾವಂತ ಸದಸ್ಯರುಗಳು ತಮ್ಮ ಅಭಿಪ್ರಾಯವನ್ನು ತಿಳಿಸುವುದಕ್ಕಾಗಿ ಒಂದು ಸಮಿತಿಯನ್ನು ರಚಿಸಿದರು. 1885 ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆ ಸ್ಥಾಪಿತವಾದ ಮೇಲೆ ಅದು ರಾಷ್ಟ್ರೀಯವಾಗಿ ಏನೇನು ಪ್ರಭಾವವನ್ನು ಬೀರಿತ್ತೋ ಆ ಎಲ್ಲ ಪರಿಣಾಮಗಳೂ ಮೈಸೂರು ರಾಜ್ಯದಲ್ಲಿ ಉಂಟಾಗಿದ್ದವು. ರಾಜ್ಯದಲ್ಲಿನ ನುರಿತ ಅನುಭವಿ ವ್ಯಕ್ತಿಗಳನ್ನೊಳಗೊಂಡ ಲೆಜಿಸ್ಲೆಟಿವ್ ಅಸೆಂಬ್ಲಿಯು 1907ರಲ್ಲಿ ರಚಿತವಾಯಿತು. ಸರ್ಕಾರದ ಕಾನೂನು ರಚನೆಯಲ್ಲಿ ಪಾಲ್ಗೊಳ್ಳುವ ಉದ್ದೇಶದಿಂದ ಈ ಸಭೆ ರಚನೆಯಾಯಿತು. ಆಡಳಿತ ಸೂತ್ರಗಳನ್ನು ತಮ್ಮ ಕೈಮುಷ್ಠಿಯಿಂದ ಹಿಡಿದಿದ್ದ ದಿವಾನರುಗಳು ಮಾತ್ರ ಮೇಲಿನವರ ಒತ್ತಾಯಕ್ಕೆ ಕಟ್ಟುಬಿದ್ದು ಎಚ್ಚರಿಕೆ ಕ್ರಮಗಳನ್ನು ಅನುಸರಿಸುತ್ತಿದ್ದರು. ಜನರ ಆಶೋತ್ತರಗಳನ್ನು ನೇರವಾಗಿ ತಿರಸ್ಕರಿಸದೆ ಹೋದರೂ ಅವುಗಳನ್ನು ಈಡೇರಿಸುವುದು ಕಷ್ಟಕರವಾಗಿತ್ತು. ಈ ದಿಸೆಯಲ್ಲಿ ಅನೇಕ ಸಾರ್ವಜನಿಕ ಮುಖಂಡರು ಮುಖ್ಯವಾಗಿ ಶ್ರೀ ಎಂ. ವೆಂಕಟಕೃಷ್ಣಯ್ಯನವರು ಪತ್ರಿಕೆ, ಸಭೆ, ಸಮುದಾಯಗಳ ಮೂಲಕವಾಗಿ ಜನರ ಹಕ್ಕುಗಳ ಬಗ್ಗೆ ಮತ್ತು ಪ್ರಜಾಪ್ರಭುತ್ವ ಸ್ಥಾಪನೆಯ ಬಗ್ಗೆ ತೀವ್ರ ಪ್ರಚಾರ ಕೈಗೊಂಡರು. ದಿವಾನರ ಆಳ್ವಿಕೆಯು ಜನರ ಹಿತಕ್ಕೆ ಧಕ್ಕೆ ತಾರದಂತೆ ಹಾಗೂ ಜನಾಭಿಪ್ರಾಯಕ್ಕೆ ಮನ್ನಣೆ ಬರುವಂತೆ ಅವರು ಕಾರ್ಯಕ್ರಮಗಳನ್ನು ನಡೆಸಿ ಜನರಲ್ಲಿ ರಾಜಕೀಯ ಜಾಗೃತಿಯನ್ನುಂಟು ಮಾಡಿದರು.

1918ರಲ್ಲಿ ಶ್ರೀ ಹೆಚ್. ಚೆನ್ನಯ್ಯ ಮತ್ತು ಇತರರು ಸೇರಿದ್ದ ಪ್ರಜಾಮಿತ್ರ ಮಂಡಳಿಯು ಹಿಂದುಳಿದ ವರ್ಗಗಳ ಹಿತಾಸಕ್ತಿಯ ಕಾರ್ಯಕ್ರಮಗಳನ್ನು ಕೈಗೊಂಡು ಅಸೆಂಬ್ಲಿ ಕೌನ್ಸಿಲ್ ಮತ್ತು ಸ್ಥಳೀಯ ಪ್ರಜಾಪ್ರಭುತ್ವವಾದಿಗಳಾಗುವಂತೆ ಮಾಡಲಾಯಿತು. ಈ ಪ್ರಜಾಮಿತ್ರ ಮಂಡಳಿಯು ತನ್ನ ಉದ್ದೇಶ ಸಾಧನೆಗಾಗಿ ಸ್ವಂತ ಪತ್ರಿಕೆಗಳನ್ನು ನಡೆಸುತ್ತಿತ್ತು.

ತಿಪಟೂರಿನ ಗಣ್ಯವ್ಯಕ್ತಿಗಳಾಗಿದ್ದ ಶ್ರೀಮಾನ್ ಡಿ.ಎಸ್. ಮಲ್ಲಪ್ಪನವರಿಂದ ಸ್ಥಾಪಿತವಾದ ಸ್ಥಳೀಯ "ಪ್ರಜಾಪಕ್ಷ"ವು ಕಾರ್ಯ ತತ್ಪರವಾಯಿತು. 1921ರ ನಂತರ ಜಿಲ್ಲೆಯಲ್ಲಿ ಅನೇಕ ಕಡೆ ಸಮಿತಿಗಳು ಆರಂಭವಾದವು. ಅವುಗಳಲ್ಲಿ ಪ್ರಪ್ರಥಮವಾಗಿ ತುಮಕೂರು ನಗರದಲ್ಲಿ ಕಾಂಗ್ರೆಸ್ ಸಮಿತಿ ರಚನೆಗೊಂಡು ಕಾರ್ಯ ತತ್ಪರವಾಯಿತು.

ಭಾರತದ ರಾಷ್ಟ್ರೀಯ ಕಾಂಗ್ರೆಸ್ ಕರ್ನಾಟಕದಲ್ಲಿ ಒಂದು ಪ್ರದೇಶ ಕಾಂಗ್ರೆಸ್ ಸಮಿತಿಯನ್ನು ಪ್ರಾರಂಭಿಸಿತು. ಕರ್ನಾಟಕ ಜನತೆಯು ರಾಷ್ಟ್ರೀಯ ಆಂದೋಲನಕ್ಕೆ ನಾಂದಿ ಹಾಡುವ ಸುವರ್ಣ ಸಂಧಿಯು 1924ರಲ್ಲಿ ಒದಗಿತು. ಆ ವರ್ಷ ಭಾರತ ಭಾಗ್ಯವಿಧಾತ ಪೂಜ್ಯ ಮಹಾತ್ಮಗಾಂಧೀಜಿ ಅವರ ಅಧ್ಯಕ್ಷತೆಯಲ್ಲಿ ರಾಷ್ಟ್ರೀಯ ಮಹಾ ಸಭೆಯ ಅಧಿವೇಶನವು ಬೆಳಗಾಂನಲ್ಲಿ ನಡೆಯಿತು. ಜನರು ರಾಷ್ಟ್ರೀಯ ಆಂದೋಲನಕ್ಕೆ ಹತ್ತಿರವಾದರು. ಪ್ರಜಾಮಿತ್ರ ಮಂಡಲಿ ಮತ್ತು ಪ್ರಜಾ ಪಕ್ಷಗಳು ಒಂದಾದವು ಮತ್ತು ಅವೆರಡೂ ಸಹ ಕಾಂಗ್ರೆಸ್ ಸಂಸ್ಥೆಯಲ್ಲಿ ವಿಲೀನಗೊಂಡವು. 1919 ಮತ್ತು 1921ರ ಸುಮಾರಿನಲ್ಲಿ ರಾಜ್ಯದಲ್ಲಿ ಜವಾಬ್ದಾರಿ ಸರ್ಕಾರವನ್ನು ರಚಿಸಲು ಒತ್ತಾಯ ತರಲಾಯಿತು 1927ರಲ್ಲಿ ಪ್ರಜೆಗಳಿಂದ ಚುನಾಯಿತರಾದ ಹೊಸ ನಾಯಕರು ತಮ್ಮ ಅಸೆಂಬ್ಲಿ ಮತ್ತು ಕೌನ್ಸಿಲ್‌ಗಳು ಪೂರ್ಣ ಪ್ರಜಾಪ್ರಭುತ್ವ ಮಾದರಿಯಲ್ಲಿ ಇರಬೇಕೆಂದು ಒತ್ತಾಯ ತಂದರು. ವ್ಯವಸಾಯಗಾರರು ಪ್ರಗತಿಗಾಗಿ ರೈತ ಸಂಘಗಳನ್ನು ಸ್ಥಾಪಿಸಿದರು. ಸರ್.ಎಂ.. ವಿಶ್ವೇಶ್ವರಯ್ಯ ಅವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದು ರಚನೆಯಾಯಿತು. ಈ ಸಮಿತಿಯು ಕೆಲವು ವರ್ಷಗಳ ಕಾಲ ದಿವಾನರನ್ನೇ ಮುಖ್ಯ ಮಂತ್ರಿಯಾಗಿ ಪಡೆದಿರಬೇಕೆಂದು ಸಲಹೆ ಮಾಡಿತು. ಆದರೆ ಈ ಬಗೆಯ ಬ್ರಿಟೀಷ್ ಮಾದರಿ ಸರ್ಕಾರ ಸ್ಥಾಪನೆಗೆ ಅಂಗೀಕಾರದ



ಮುದ್ರೆ ಬೀಳಲಿಲ್ಲ. ಆದರೆ ಮುಂದೆ ಇವರ ಚಟುವಟಿಕೆಗಳ ಬಗ್ಗೆ ಸರ್ಕಾರವು ಎಚ್ಚರ ವಹಿಸಿತು.

ಸ್ವದೇಶಿ ವಸ್ತುಗಳು ಹಾಗೂ ಖಾದಿ ಬಳಕೆಯ ಚಳವಳಿ, ಸ್ಥಳೀಯ ಗೃಹ ಕೈಗಾರಿಕೆಗಳಿಗೆ ಉತ್ತೇಜನ, ಹರಿಜನರ ಉದ್ಧಾರ ಮುಂತಾದ ಅನೇಕ ರಾಷ್ಟ್ರೀಯ ಕಾರ್ಯಕ್ರಮಗಳನ್ನು ವ್ಯಾಪಕವಾಗಿ ಕೈಗೊಳ್ಳಲಾಯಿತು. ಮಹತ್ತರವಾದ ಈ ರಾಷ್ಟ್ರೀಯ ಚಳವಳಿಯು ತಾಳಕೆರೆ ಶ್ರೀ ಸುಬ್ರಹ್ಮಣ್ಯಂರವರ ನೇತೃತ್ವದಲ್ಲಿ ಆರ್. ಚನ್ನಿಗ ರಾಮಯ್ಯ, ಕೆ. ರಂಗಯ್ಯಂಗಾರ್, ಡಿ. ರಾಮರಾವ್, ಬಿ. ಸಿ. ನಂಜಯ್ಯ, ಎಸ್. ಕೆ. ಸೆಟ್ಲೂರ್, ಎ. ಎಸ್. ರೇವಣ್ಣ, ಕೊಡ್ಲಾಪುರದ ತನ್ನಿ ಬಸಪ್ಪ ಮಾಲಿ, ಮರಿಯಪ್ಪ, ಕೆ. ಹೆಂಜೇರಪ್ಪ, ಬಿ. ಎಲ್. ಸಂಗಣ್ಣ ಇವರುಗಳ ಬೆಂಬಲದೊಂದಿಗೆ ತುಮಕೂರು ಜಿಲ್ಲೆಯಲ್ಲಿ ತೀವ್ರವಾಗಿ ನಡೆಯಿತು.

ಈ ಜಿಲ್ಲೆಯಿಂದ ಅನೇಕ ಮಂದಿ ಸ್ವಯಂ ಸೇವಕರು ಮತ್ತು ಮುಖಂಡರು ಬೇರೆ ಬೇರೆ ನಗರಗಳಿಗೆ ಹೋಗಿ ರಾಜಕೀಯ ಹೋರಾಟದಲ್ಲಿ ಭಾಗವಹಿಸಿದರು. ಇದೇ ಸುವರ್ಣ ಅವಕಾಶದಲ್ಲಿ ತುಮಕೂರು ನಗರದಲ್ಲಿ ಪ್ರಥಮವಾಗಿ ಹಿಂದೂಸ್ತಾನಿ ಸೇವಾದಲದ ಶಾಖೆಯು ಆರಂಭವಾಯಿತು. ಅದು ಯುವಕರಿಗೆ ರಾಷ್ಟ್ರೀಯತೆಯ ತರಬೇತಿಯನ್ನು ನೀಡಿತಲ್ಲದೆ ರಾಜಕೀಯ ಪ್ರಜ್ಞೆಯನ್ನು ತೀವ್ರವಾಗಿ ಮೂಡಿಸಿತು. 1934ರ ಜನವರಿಯ 4ರಂದು ಮಹಾತ್ಮ ಗಾಂಧೀ ಅವರು ಸಾರ್ವಜನಿಕ ಸಭೆಯೊಂದನ್ನು ಕರೆದು ಜನರು ರಚನಾತ್ಮಕ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸಬೇಕೆಂದು ಕೋರಿದರು. ಬಾಪುವಿನ ಈ ಕರೆಗೆ ಜನತೆಯು ಓಗೊಟ್ಟುದಲ್ಲದೆ ತನ್ನ ಪಾಲಿನ ಕಾಣಿಕೆಯನ್ನೂ ನೀಡಿತು. ತುಮಕೂರು ಜನತೆಯು ಪೂಜ್ಯ ಗಾಂಧೀಜಿಗೆ ಸನ್ಮಾನ ಪತ್ರವನ್ನು ಅರ್ಪಿಸಿ ಗೌರವಿಸಿದ್ದಲ್ಲದೇ 1000 ರೂ. ಗಳ ಕಾಣಿಕೆಯನ್ನು ನೀಡಿತು. ಬಾಪೂವಿನ ಈ ಭೇಟಿಯು ತುಮಕೂರು ನಾಗರಿಕರ ಮೇಲೆ ಪೂರ್ಣ ಪರಿಣಾಮವನ್ನುಂಟು ಮಾಡಿತು ಮತ್ತು ರಾಷ್ಟ್ರೀಯ ಚಟುವಟಿಕೆಗೆ ವ್ಯಾಪಕ ರೂಪವುಂಟಾಯಿತು.

ಗಾಂಧೀಜಿ ನೀಡಿದ ಭೇಟಿ, ಆಡಿದ ಮಾತು ಮತ್ತು ಸ್ಫೂರ್ತಿಯಿಂದ ಇಡೀ ಜಿಲ್ಲೆ ಪ್ರಭಾವಿತವಾಯಿತು. ಎಲ್ಲೆಲ್ಲೂ ಸಭೆಗಳಾದವು. ಸ್ವಾತಂತ್ರ್ಯ ಚಳವಳಿಯ ಈ ಬಿರುಸಿನ ಹೊಡೆತಕ್ಕೆ ಮೈಸೂರು ಸರ್ಕಾರವು ಬೆಚ್ಚಿ ಬಿದ್ದಿತಾದರೂ ತನ್ನ ಬಂದೂಕದ ಅಧಿಕಾರ ಬಲದಿಂದ 1931ರಲ್ಲಿ ರಾಷ್ಟ್ರೀಯ ಚಳವಳಿಯನ್ನು ಬಹಿಷ್ಕರಿಸಿ ಪೊಲೀಸು ಕಾನೂನನ್ನು ಬಲಗೊಳಿಸಿದ್ದರಿಂದ ಜನತೆಯು ಮತ್ತಷ್ಟು ರೊಚ್ಚಿಗೆದ್ದಿತು. ಅನೇಕ ಮಂದಿ ಪ್ರಮುಖ ವಕೀಲರು, ಶಾಲಾ ಕಾಲೇಜು ವಿದ್ಯಾರ್ಥಿಗಳೂ ಚಳವಳಿಯಲ್ಲಿ ಭಾಗವಹಿಸಿ ಸ್ವಾತಂತ್ರ್ಯ ಸಂಗ್ರಾಮದ ಅಗ್ನಿಕುಂಡದಲ್ಲಿ ನೇರವಾಗಿ ಧುಮುಕಿದರು. ಟಿ. ಸುಬ್ರಹ್ಮಣ್ಯಂ ಮುಂತಾದ ಪ್ರಮುಖ ಜನನಾಯಕರನೇಕರು ಚಳವಳಿಯನ್ನು ಮುನ್ನಡೆಸಿದರು. ಅಹಿಂಸಾತ್ಮಕವಾಗಿಯೇ ಹೋರಾಟ ನಡೆಯಿತು. 1930–31 ರಲ್ಲಿ ತುಮಕೂರು ಜಿಲ್ಲೆಯಾದ್ಯಂತ ಮದ್ಯಪಾನ ನಿರೋಧ ಚಳವಳಿಯು ಕ್ರಿಯಾತ್ಮಕವಾಗಿ ನಡೆಯಿತು. ಸ್ವಯಂ ಸೇವಕರು ಹೆಗಲುಗಳ ಮೇಲೆ ಕೊಡಲಿಗಳನ್ನಿಟ್ಟು ಈಚಲ ವನಗಳಿಗೆ ನುಗ್ಗಿ ಸೇಂದಿ ಮರಗಳನ್ನು ಕಡಿದುರುಳಿಸಿದರು. ಹೆಂಡದಂಗಡಿಗಳ ಮುಂದೆ ಚಳವಳಿಯನ್ನು ನಡೆಸಿದರು. ಪೊಲೀಸರ ಲಾಠಿಗಳಿಗೆ ಹೆದರದೆ ಜನರು ಮುನ್ನುಗ್ಗಿ ಸೇಂದಿ ಮಾರಾಟವನ್ನು ತಡೆಗಟ್ಟಿದ ದೃಶ್ಯ ರೋಮಾಂಚನಕಾರಿಯಾಗಿತ್ತು. 1930ರಿಂದ 1932 ರವರೆಗೂ ಬ್ರಿಟಿಷ್ ಭಾರತದ ಇತರ ಪ್ರಾಂತಗಳಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಗಳಲ್ಲೆಲ್ಲಾ ತುಮಕೂರಿನವರು ಪ್ರಮುಖ ಪಾತ್ರ ವಹಿಸಿದರು. ಇದೇ ಸಂದರ್ಭದಲ್ಲಿ ಶ್ರೀ ಮರಿಯಪ್ಪನವರ ಮುಖಂಡತ್ವದಲ್ಲಿ ನಡೆದ ಅರಣ್ಯ ಸತ್ಯಾಗ್ರಹದಲ್ಲಿ ಶಿರಾಮ ಎಲಿಯೂರು, ವಡ್ಡನಹಳ್ಳಿ ಮತ್ತು ತಾವರೆಕೆರೆ ಗ್ರಾಮಗಳ ಪಾತ್ರವು ಸ್ಮರಣೀಯವಾದುದು. 1937ರ ನಂತರ ಬ್ರಿಟೀಷ್ ಭಾರತದ ಇತರ ರಾಜ್ಯಗಳಲ್ಲಿ ಪ್ರಜಾಪ್ರತಿನಿಧಿ ಪ್ರಭುತ್ವವು ಪ್ರಗತಿದಾಯಕವಾದ ಪ್ರಯುಕ್ತ ಮೈಸೂರು ರಾಜ್ಯದಲ್ಲೂ ಅದು ಮಾದರಿಯ ಸರ್ಕಾರ ರಚನೆಗೆ ಅವಕಾಶ ಉಂಟಾಯಿತು. 1938ರಲ್ಲಿ ಪ್ರತ್ಯೇಕ ಮೈಸೂರು ರಾಜ್ಯ ಸ್ಥಾಪನೆಗೆ ಒತ್ತಾಯ ತರಲಾಯಿತು. ಇದೇ ವರ್ಷ ತುಮಕೂರಿನಲ್ಲಿ ನಡೆದ ಮೈಸೂರು ಕಾಂಗ್ರೆಸ್ ಸಭೆಯ ಅಧ್ಯಕ್ಷತೆಯನ್ನು ಶ್ರೀ ಸಿದ್ದಲಿಂಗಯ್ಯನವರು ವಹಿಸಿದ್ದರು. ಈ ಸಭೆಯಲ್ಲಿ ವಿದುರಾಶ್ವತ್ಥದ ಗೋಲೀಬಾರ್ ದುರಂತ ಹಾಗೂ ಆಳರಸರ ದಬ್ಬಾಳಿಕೆಯನ್ನು ಖಂಡಿಸುವ ನಿರ್ಣಯಗಳಾದವು ಇದೇ ಸಭೆಯಲ್ಲಿ ಜವಾಬ್ದಾರಿ



ಸರಕಾರ ಸ್ಥಾಪನೆಗಾಗಿ ತೀವ್ರ ಹೋರಾಟ ನಡೆಸಬೇಕೆಂದು ತೀರ್ಮಾನಿಸಲಾಯಿತು. 1942ರ ಆಗಸ್ಟ್‌ನಲ್ಲಿ ರಾಷ್ಟ್ರನಾಯಕರುಗಳನ್ನು ಬಂಧಿಸಿದಾಗ ಇತರ ಸ್ಥಳಗಳಲ್ಲಿನಂತೆ ತುಮಕೂರಿನಲ್ಲೂ ತೀವ್ರತರನಾದ ಪ್ರತಿಭಟನೆ ಮಾಡಲಾಯಿತು. ಈ ಚಳವಳಿಯು ಪ್ರಭಾವಿತವಾಗಿದ್ದು ಸ್ವಾತಂತ್ರ್ಯ ಹೋರಾಟ ಹೊಸ ತಿರುವನ್ನು ಪಡೆಯಿತು. ಈ ಬೇಡಿಕೆಯನ್ನು ಜಿಲ್ಲೆಯ ನಾಯಕರಾದ ಸರ್ವಶ್ರೀ ಕೆ. ರಂಗಯ್ಯಂಗಾರ್, ಟಿ. ಸುಬ್ರಹ್ಮಣ್ಯಂ, ಟಿ. ಸಿ. ನಂಜುಂಡಯ್ಯ ಎಂ. ವಿ. ರಾಮರಾವ್. ಕೆ. ಹೆಂಜಾರಪ್ಪ, ಆರ್. ಚೆನ್ನಗರಾಮಯ್ಯ, ಟಿ.ಎಸ್. ನೀಲಕಂಠರಾಯರು, ಸಿ.ಆರ್. ಬಸಪ್ಪ ಮತ್ತು ಇತರರ ಮುಂದಾಳುತನದಲ್ಲಿ ಬಿಗಿಮುಷ್ಠಿಯ ಹೋರಾಟ ನಡೆಯಿತು. "ಬ್ರಿಟೀಷರೆ ಭಾರತ ಬಿಟ್ಟು ತೊಲಗಿರಿ" (ಕ್ವಿಟ್ ಇಂಡಿಯಾ) ಚಳವಳಿಯು ಕಾಳ್ಗಿಚ್ಚಿನಂತೆ ಹಬ್ಬಿ ತಿಪಟೂರಿನಲ್ಲಿ ಗುಂಡಿನೇಟಿನ ಪ್ರಸಂಗವೂ ನಡೆಯಿತು. ಮೈಸೂರಿನ ಸ್ವಾತಂತ್ರ್ಯಕ್ಕಾಗಿ ಮೈಸೂರು ಕಾಂಗ್ರೆಸ್ ಅಧಿವೇಶನವು 1946ರಲ್ಲಿ ತುಮಕೂರಿನಲ್ಲಿ ನಡೆದು ಹೊಸ ಮನ್ವಂತರವನ್ನೇ ಸ್ಥಾಪಿಸಿತು. ಹೀಗೆ ಮೈಸೂರು ರಾಜ್ಯವು ಭಾರತ ರಿಪಬ್ಲಿಕ್ ನೊಡನೆ ವಿಲೀನವಾಗಲು ನಡೆದ ಆಂದೋಲನದಲ್ಲಿ ತುಮಕೂರು ಕಾಂಗ್ರೆಸ್‌ನವರು ಪ್ರಜಾಸರ್ಕಾರದ ಸ್ಥಾಪನೆಗಾಗಿ 1947ನೇ ಸೆಪ್ಟೆಂಬರ್ 1ರಲ್ಲಿ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಒಂದೂವರೆ ತಿಂಗಳ ಕಾಲ ಸತ್ಯಾಗ್ರಹ ಸಮರವು ಬಿರುಸಿನಿಂದ ರೈಲ್ವೇ ಕಂಬಿ ಕಳಚಿ ಗೂಡ್ಸನ್ನು ಉರುಳಿಸಿ ಸರ್ಕಾರಕ್ಕೆ ನಷ್ಟವನ್ನುಂಟು ಮಾಡಿತು. ಲಾಠಿ ಚಾರ್ಜುಗಳು ಗೋಲಿಬಾರ್‌ಗಳಾದವು. ನೂರಾರು ಮಂದಿ ಸತ್ಯಾಗ್ರಹಿಗಳು ಮಡಿದರು. ಸಾವಿರಾರು ಮಂದಿ ಗಾಯಗೊಂಡರು. ಅನೇಕರು ಸೆರೆಮನೆ ಸೇರಿದರು. ಕೊನೆಗೆ ಸರಕಾರವೂ ಸೋಲಬೇಕಾಯಿತು. 1947ರ ಅಕ್ಟೋಬರ್ 24ರಂದು ಆಗಿನ ಮೈಸೂರು ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಶ್ರೀ ಕೆ.ಸಿ. ರೆಡ್ಡಿ ಅವರು ಮತ್ತು ಕಾಂಗ್ರೆಸ್ ಮುಖಂಡರುಗಳು ಶ್ರೀಮನ್ ಮಹಾರಾಜರೊಡನೆ ಮಾತನಾಡಿ ಪ್ರಜಾ ಸರ್ಕಾರವನ್ನು ಸ್ಥಾಪಿಸಿದರು. ಶ್ರೀ ಸರ್ವಜಿತ್ ಸಂವತ್ಸರದ ವಿಜಯದಶಮಿ ದಿವಸ ನಮ್ಮ ಪ್ರಜಾ ಸರ್ಕಾರವು ಅಧಿಕಾರವನ್ನು ವಹಿಸಿಕೊಂಡಿತು. ಭಾರತ ಸಂವಿಧಾನವಿಲ್ಲದಿದ್ದ ಆ ಕಾಲದಲ್ಲಿ ಮೈಸೂರು Constitute Assemblyಯು Legislative ಅಸೆಂಬ್ಲಿಯಾಗಿ ಪರಿವರ್ತನೆ ಹೊಂದಿ ಪ್ರಜಾಧಿಕಾರಕ್ಕೆ ಮನ್ನಣೆ ದೊರೆಯಿತು.

## ಸ್ವಾತಂತ್ರ್ಯ ಹೋರಾಟದ ಒಂದು ಪ್ರಮುಖ ಘಟನೆ

ಶ್ರೀ ಸರ್ವಜಿತ ಸಂವತ್ಸರದ ಶ್ರಾವಣ ಬಹುಳ ಅಮಾವಾಸ್ಯೆಯು (14–9–1947) ಮೈಸೂರಿನ ಚರಿತ್ರೆಯಲ್ಲಿ ಅತ್ಯಂತ ವಿಷಾದಪೂರ್ವಕವಾದ ಘಟನೆಯು ನಡೆದ ಭಯಂಕರ ದಿನ. ಆ ದಿನ ಮೈಸೂರು ರಾಜ್ಯದ ಅನೇಕ ಸ್ಥಳಗಳಲ್ಲಿ ಗೋಲೀಬಾರ್ ನಡೆದು ಅನೇಕ ಮಂದಿ ನಿರಪರಾಧಿಗಳು ಮಡಿದರು. ಆ ಸಮಯದಲ್ಲಿ ದಿವಾನರು ಪ್ರಜೆಗಳಿಗೂ ಮಹಾರಾಜರಿಗೂ ಮಧ್ಯದಲ್ಲಿ ನಿಂತು ಪ್ರಜೆಗಳನ್ನು ಮಹಾರಾಜರ ಬಳಿಗೆ ಬಿಡದೆ ತಡೆದು ಮಹಾರಾಜರಿಗೆ ಪ್ರಜೆಗಳ ವಿಷಯದಲ್ಲಿ ಅವಿಶ್ವಾಸ ಹುಟ್ಟುವಂತೆ ಮಾಡಿ ಸರ್ವಾಧಿಕಾರವನ್ನು ತಾವೇ ವಹಿಸಿಕೊಂಡು ಪ್ರಜೆಗಳ ಮೇಲೆ ಕಠೋರವಾದ ದಬ್ಬಾಳಿಕೆಯನ್ನು ನಡೆಸಿ ನೂರಾರು ಮಂದಿ ನಿರಪರಾಧಿಗಳ ಪ್ರಾಣಗಳೊಂದಿಗೆ ಚೆಲ್ಲಾಟವಾಡಿ ಅಪಕೀರ್ತಿಗೂ ಗುರಿಯಾದರು.

ಆ ದಿನ ಅಂದರೆ 1947ನೇ ಸೆಪ್ಟೆಂಬರ್ 14ರ ಕರಾಳ ಅಮಾವಾಸ್ಯೆಯ ದಿನ ತುಮಕೂರು ಸಹ ರಕ್ತದ ಮಡುವಿನಲ್ಲಿ ತೊಯ್ದು ಹೋಯಿತು. ಅಂದು ನಡೆದ ಮಹಾ ಸತ್ಯಾಗ್ರಹ ಸಮರದಲ್ಲಿ ಮುಖ್ಯರಾದವರು ಹೈಸ್ಕೂಲ್ ಮತ್ತು ಕಾಲೇಜು ವಿದ್ಯಾರ್ಥಿಗಳು ಎಂದರೆ ತಪ್ಪಾಗಲಾರದು. ತುಮಕೂರಿನ ಸ್ವತಂತ್ರ ಚೌಕದಲ್ಲಿ ಕಿಕ್ಕಿರಿದ ಜನತೆ ತುಂಬಿದ ಸಭೆ, ಪ್ರಚಂಡ, ಸತ್ಯಾಗ್ರಹ, ಸ್ವಾತಂತ್ರ್ಯ ವೀರರ ಈ ಬೃಹತ್ ಪ್ರಮಾಣದ ಚಳವಳಿಗೆ ಆಳರಸರ ಅಳ್ಳೆದೆ ತಲ್ಲಣಿಸಿತು. ಸರ್ಕಾರದ ವಿರುದ್ಧ ಘೋಷಣೆಗಳು, ಭಾಷಣಗಳೂ ಅಧಿಕಾರಿಗಳನ್ನು ನಡುಗಿಸಿತು. ಭೀತಿಗೊಂಡು ದಿಕ್ಕು ತೋರದೆ ಸರ್ಕಾರ ಹುಚ್ಚಾ ಪಟ್ಟೆ ಕೆರಳಿತು. ನಿರಂಕುಶತ್ವದ ಭೀಕರತ್ವ ಗರ್ಜಿಸಿತು. ಸರ್ಕಾರದವರ ಅತ್ಯುಗ್ರ ಕೋಪ ಪೋಲೀಸಿನವರ ಹುಚ್ಚು ಆಕ್ರೋಶ ಅಧಿಕಾರಿಗಳ ಅವಿವೇಕ ಪೂರ್ಣ ಆತುರದ ಆಜ್ಞೆಗಳು ಇವುಗಳ ಪರಿಣಾಮವಾಗಿ ಲಾಠಿ ಚಾರ್ಜ್



ಮತ್ತು ಗೋಲೀಬಾರುಗಳ ಸುರಿಮಳೆ ಈ ಸ್ವಾತಂತ್ರ್ಯರಣಾಗ್ನಿಗೆ ತುತ್ತಾಗಿ ಮೂರು ಮಂದಿ ಮರಣಿಸಿದರು. ತುಮಕೂರಿನ ಇಂಟರ್‌ಮಿಡಿಯೆಟ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದ ಗೊರೂರು ರಾಮಸ್ವಾಮಿ ಐಯ್ಯಂಗಾರ್ ಅವರ ಪುತ್ರ ವಿದ್ಯಾರ್ಥಿ ರಾಮಚಂದ್ರ, ಮಂಡಿಪೇಟೆಯಲ್ಲಿ ಇಡ್ಲಿ ಮತ್ತು ದೋಸೆಗಳ ಮಾರಾಟದಲ್ಲಿ ತೊಡಗಿದ್ದ ಗಂಗಪ್ಪನೆಂಬ ವೀರಶೈವ ತರುಣ ಹಾಗೂ ಸಂತೆಪೇಟೆಯಲ್ಲಿ ವಾಸವಾಗಿದ್ದ ನಂಜುಂಡಪ್ಪ ಎಂಬ ಗಾಣಿಗರ ತರುಣ, ಈ ಮೂವರು ಅಂದು ನಡೆದ ಗೋಲೀಬಾರಿನ ಗುಂಡುಗಳಿಗೆ ಬಲಿಯಾಗಿ ಪ್ರಾಣವನ್ನು ತೆತ್ತರು. ವಿದ್ಯಾರ್ಥಿ ರಾಮಚಂದ್ರನು ಉತ್ಸಾಹೀ ತರುಣ. ಭಾವವೇಶ ಪೂರ್ಣನಾದ ವೀರ ಸತ್ಯಾಗ್ರಹಿ. ಅವನದು ಭಾವವೇಶಪೂರಿತವಾದ ಮರಣ. ಗಂಗಪ್ಪನದು ಆಕಸ್ಮಿಕ ಮರಣ. ಸತ್ಯಾಗ್ರಹಕ್ಕೂ ಅವನಿಗೂ ಯಾವುದೇ ಸಂಬಂಧವೂ ಇರದಿದ್ದರೂ ಭಾಷಣಗಳಿಂದ ಉತ್ತೇಜಿತವಾಗಿ ತುಂಬಿ ಬಂದ ಯಾವುದೋ ಆವೇಶದಿಂದ ಮುನ್ನುಗ್ಗಿ ಬಂದು ಗುಂಡಿನೇಟಿಗೆ ಬಲಿಯಾದನು. ನಂಜುಂಡಪ್ಪನು ತಾತ್ಕಾಲಿಕ ಸತ್ಯಾಗ್ರಹಿ ಲಾಠಿ ಛಾರ್ಜಿನಿಂದ ಉದ್ರೇಕಗೊಂಡು ಜನತೆಯ ಗುಂಪಿನಲ್ಲಿ ಸೇರಿದ್ದವನು.

ತಾಯ್ನಾಡಿನ ಕರೆಗೆ ಓಗೊಟ್ಟು ಹುತಾತ್ಮರು, ಅಮರ ಜೀವಿಗಳೂ ಆದ ಈ ಮೂವರನ್ನು ತುಮಕೂರು ನಗರವು ಮರೆತಿಲ್ಲ. ಸ್ವತಂತ್ರ ಭಾರತಕ್ಕಾಗಿ ಸ್ವತಂತ್ರ ಮೈಸೂರಿಗಾಗಿ ನಡೆದ ಸತ್ಯಾಗ್ರಹ ಸಮರದಲ್ಲಿ ಹೋರಾಡಿ ಬಲಿದಾನ ಮಾಡಿದ ಹುತಾತ್ಮರ ನೆನಪಿಗಾಗಿ ಸ್ಮಾರಕ ಶಿಲಾಸ್ಥಂಭವೊಂದನ್ನು ತುಮಕೂರಿನ ಸ್ವತಂತ್ರ ಚೌಕದಲ್ಲಿ ನಿರ್ಮಿಸಲು ನಾಗರಿಕರು ನಿರ್ಣಯಿಸಿ ಸಮಿತಿಯೊಂದನ್ನು ರಚಿಸಿರುತ್ತಾರೆ. ಸ್ಮಾರಕ ಶಿಲಾಸ್ಥಂಭದ ಸ್ಥಾಪನೆಯ ಸಮಾರಂಭಕ್ಕೆ ರಾಜ್ಯದ ಮುಖ್ಯ ಮಂತ್ರಿ ಶ್ರೀ. ಡಿ. ದೇವರಾಜ ಅರಸು, ಕಂದಾಯ ಮಂತ್ರಿ ಶ್ರೀ ಎಸ್. ಹುಚ್ಚ ಮಾಸ್ತಿ ಗೌಡ ಹಾಗೂ ಶ್ರೀ ಎಂ. ವಿ ರಾಮರಾಯರು ಆಗಮಿಸಿ ಅವರ ಜೀವಿಗಳ ನೆನಪನ್ನು ಚಿರಸ್ಥಾಯಿಗೊಳಿಸಿದ್ದಾರೆ. ○





# ಗಾಂಧೀಜಿಯವರ ಜೀವನ ಶೈಲಿ ಮತ್ತು ವಿಚಾರಗಳು ಹಾಗೂ 21ನೆಯ ಶತಮಾನ

- ಪ್ರೊ. ಎಂ. ಧ್ರುವನಾರಾಯಣ
10/2 13 ಕ್ರಾಸ್ ಬ್ಲಾಕ್, ಜಯನಗರ- ಬೆಂಗಳೂರು.

ಯದ್ಭಾವಂ ತಬ್ಬವತಿ. ಇದೊಂದು ಸೂಕ್ತಿ. ಪರಿವರ್ತನೆ ಪ್ರಕೃತಿ ಸಹಜವಾದದ್ದು ಆದುದರಿಂದ ಸಮಾಜದಲ್ಲಿ ಹಾಗೂ ಮಾನವರಲ್ಲಿ ಮತ್ತು ಅವರ ಮನೋಧರ್ಮಗಳಲ್ಲಿ ಬದಲಾವಣೆ ಸಹಜ.

**ಹಿಂದೀ ಸಿನಿಮಾದ ಒಂದು ಗೀತೆ:**

**ನನ್ಹೆಮುನ್ಹೆ ತೇರೇ ಮುಟ್ಟೀಮೇಕ್ಯಾಹೈ?**
**ಮುಟ್ಟೀ ಮೆಹೈತಕ್ ದೀರ್ ಹಮಾರಾ**
**ಆದರೆ ಇಂದು**
**ಮುಟ್ಟೀಮೆ ಹೈ ಮೊಬೈಲ್ ಹಮಾರಾ**
**ಧೀರೂ ಅಂಬಾನಿಯವರು ತಮ್ಮಮೊಬೈಲ್ ದೂರವಾಣಿ ಪ್ರಚಾರಕ್ಕೆ**
**ಕರ್‌ಲೋ ದುನಿಯಾ ಮುಟ್ಟಿಮೆ**

ಎಂದೇ ಹೇಳಿದರು.

ಜ್ಞಾನ, ವಿಜ್ಞಾನ, ತಂತ್ರಜ್ಞಾನ ಅಗಾಧವಾಗಿ ಬೆಳೆದು ಬಂದಿದ್ದು ಜಗತ್ತನ್ನೇ ಒಂದು ಹಳ್ಳಿಯನ್ನಾಗಿ ಮಾಡಿವೆ. ಈ ಅಗಾಧ ಬೆಳವಣಿಗೆಯಿಂದಾಗಿ ಪುರಾತನ ಮತ್ತು ಸಾಂಪ್ರದಾಯಿಕ ಕಲ್ಪನೆಗಳು ಮೂಲೆಗುಂಪಾಗಿವೆ. ಹೀಗಾಗಿ ಮೌಲ್ಯಗಳು ಬದಲಾಗತೊಡಗಿವೆ. ಸಂಪ್ರದಾಯವಾದಿಗಳು ಈ ಪ್ರಕ್ರಿಯೆಯನ್ನು ಒಪ್ಪದೇ ಮೌಲ್ಯಗಳು ಹಾಳಾಗ ತೊಡಗಿವೆ ಎಂದೇ ಆಲಾಪನೆ ಮಾಡುತ್ತಾರೆ. ಇದು ಸರಿಯೇ?

ಈ ಒಂದುಹಿನ್ನೆಲೆಯಲ್ಲಿ ನಾವು ಗಾಂಧೀಜಿ ಹಾಗೂ ಅವರು ಪ್ರತಿಪಾದಿಸಿದ ಮೌಲ್ಯಗಳನ್ನು ಪರಾಂಬರಿಸಬೇಕು. ಅಪ್ಪನೆಟ್ಟ ಆಲದಮರ ಎಂದು ಅದಕ್ಕೆ ನೇಣು ಹಾಕಿಕೊಳ್ಳಬಾರದು. ಈ ದಿಶೆಯಲ್ಲಿ ನಾವು ಗಮನಿಸಿಬೇಕಾದ ಪ್ರಮುಖ ಸಂಗತಿ ಒಂದಿದೆ. ಅದೇನೆಂದರೆ ಗಾಂಧೀಜಿಯುವರು ಜನಿಸಿದ್ದು ಹತ್ತೊಂಭತ್ತನೆಯ ಶತಮಾನದಲ್ಲಿ. ಹೀಗಾಗಿ ಅವರ ಮನೋಭಾವನೆಗಳು ಅಂದಿನ ಯುಗ ಧರ್ಮಕ್ಕೆ ತಕ್ಕಂತೆ ಮೂಡಿಬಂದಿವೆ. ಹೀಗೆಂದಾಗ ಗಾಂಧೀಜಿಯವರು ಮೌಢ್ಯರೆಂದು ಯಾರೂ ಭಾವಿಸಬಾರದು ಏಕೆಂದರೆ ಗಾಂಧೀಜಿಯವರು ಕಾಲಕಾಲಕ್ಕೆತಮ್ಮ ವಿಚಾರಲಹರಿ ಬದಲಾವಣೆ ಅಥವಾ ಪರಿವರ್ತನೆಗಳನ್ನು ಅಳವಡಿಸಿಕೊಂಡು ಬಂದ ಕ್ರಾಂತಿಪುರುಷ.

**ಗಾಂಧೀವಾದ ಎಂದರೇನು ? ಅದು ಇದೆಯೇ?**

ಈ ಬಗ್ಗೆ ಗಾಂಧೀವಾದಿಗಳಿಗೂ ಹಾಗೂ ಬುದ್ಧಿಜೀವಿಗಳ ಮಧ್ಯೆ ಭಿನ್ನಾಭಿಪ್ರಾಯವಿದೆ. ಆದುದರಿಂದ ಕವಿ ವಿಷಯ ಕುರಿತು ಗಾಂಧೀಜಿಯವರ ಹೇಳಿಕೆಯನ್ನು ಮೊರೆ ಹೋಗುವುದು ಸೂಕ್ತ.

"ಗಾಂಧೀವಾದ ಎಂಬುದೊಂದಿಲ್ಲ; ನನ್ನ ಮರಣದ ನಂತರ ಈ ಬಗೆಯ ಒಂದು ಪಂಥ ಅಥವಾ ಪರಂಪರೆಯನ್ನು ಬಿಟ್ಟು ಹೋಗಬೇಕೆಂಬ ಆಸೆ ನನಗಿಲ್ಲ. ನಾನು ಯಾವುದೇ ಒಂದು ನೂತನ ತತ್ವವಾಗಲೀ, ಸಿದ್ಧಾಂತವನ್ನಾಗಲೀ ಹೇಳುತ್ತಿಲ್ಲ. ನಾನು ಹೇಳುತ್ತಿರುವ ವಿಷಯಗಳು ಹಿಮಾಲಯ ಪರ್ವತ ಹಾಗೂ ಗಂಗಾ ನದಿಯಂತಹ ಪುರಾತನವಾದವು. ಒಂದು ವಿಷಯ ಸ್ಪಷ್ಟವಾಗಿ ಹೇಳಬಯಸುವೆ. ನಾನು ನನ್ನ ದಿನ ನಿತ್ಯದ ಬದುಕಿನಲ್ಲಿ ಎದುರಾಗಬಹುದಾದ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಹಲವಾರು ಶಾಶ್ವತ ಸತ್ಯಗಳನ್ನು ಅರಿಯಲು ಪ್ರಯತ್ನ ಮಾಡಿದ್ದೇನೆ. ಹೀಗಾಗಿ ನನ್ನಂತೆ ಇತರರೂ ತಮ್ಮ ಸಮಸ್ಯೆಗಳಿಗೆ ತಮ್ಮದೇ ಆದ ಪರಿಹಾರ ಕಂಡುಕೊಳ್ಳಬೇಕೇ ಹೊರತು ನನ್ನನ್ನು ಅನುಕರಣೆ ಮಾಡುವುದು ಸಮಂಜಸವಾಗಲಾರದು.

ನಾನು ಜಗತ್ತಿಗೆ ಯಾವ ಹೊಸ ವಿಚಾರವನ್ನೂ ತಿಳಿಸಬೇಕಾಗಿಲ್ಲ. ಏಕೆಂದರೆ ನಾನು ನಂಬಿರುವ ಸತ್ಯ, ಅಹಿಂಸೆ, ಪ್ರೇಮ, ಸರಳ ಜೀವನ ತತ್ವಗಳು ಅನಾದಿ ಕಾಲದಿಂದಲೂ ಜಾರಿಯುಲ್ಲಿವೆ. ಆದುದರಿಂದ



ಅವುಗಳನ್ನು ದಯವಿಟ್ಟು ಗಾಂಧೀವಾದ ಎಂದು ಕರೆಯದಿರಿ. ಅದರಲ್ಲಿ "ವಾದ"ದ ಪ್ರಶ್ನೆಯೇ ಇಲ್ಲ"

ಕೌತುಕ ಸಂಗತಿ ಎಂದರೆ 2-10-1869 ರಂದು ಜಗತ್ತಿನ ಎರಡು ಮಹಾನ್ ನಾಯಕರು ಜನಿಸಿದ್ದು, ಒಂದು ಗಾಂಧಿ, ಎರಡನೆಯವರು ಲೆನಿನ್. ಗಾಂಧಿಯವರು ಶಾಂತಿಗೆ ಮನಸೋತರೆ, ಲೆನಿನ್ ಕ್ರಾಂತಿಗೆ ಮನಸೋತ, ಒಂದು ಅಹಿಂಸೆಯ ಮಾರ್ಗವಾದರೆ, ಮತ್ತೊಂದು ಹಿಂಸೆಯ ಮಾರ್ಗ. ಲೆನಿನ್ ಕ್ರಾಂತಿಯಿಂದ ರಾಷ್ಟ್ರಕ್ಕೆ ಸ್ವಾತಂತ್ರ್ಯ ತಂದುಕೊಟ್ಟರೆ ಗಾಂಧಿ ತನ್ನ ಶಾಂತಿಯುತ ಅಹಿಂಸಾ ಮಾರ್ಗದಿಂದ ಭಾರತಕ್ಕೆ ಸ್ವಾತಂತ್ರ್ಯವನ್ನು ತಂದು ಕೊಟ್ಟರು.

ಈ ಹಿನ್ನೆಲೆಯಲ್ಲಿ ನಾವು ಮನವರಿಕೆ ಮಾಡಿಕೊಳ್ಳ ಬೇಕಾದ ಸಂಗತಿ ಎಂದರೆ ಮೌಲ್ಯಗಳು ಜ್ಞಾನ, ವಿಜ್ಞಾನ, ತಂತ್ರಜ್ಞಾನಗಳಿಂದ ಬದಲಾವಣೆಗೆ ಗುರಿಯಾದ ಇಂದಿನ ಸಮಯದಲ್ಲಿ ಮೌಲ್ಯಗಳ ಕಲ್ಪನೆಯಲ್ಲಿಯೂ ಹಲವಾರು ಬದಲಾವಣೆಗಳು ಉಂಟಾಗಿರಬಹುದು. ಆದರೆ ಮೂಲಭೂತ ಮೌಲ್ಯಗಳಾದ. ಸತ್ಯ, ಅಹಿಂಸೆ, ಪ್ರೇಮ, ದಯೆ, ಮುಂತಾದವು ಸ್ಥಿರವಾಗಿವೆ. ಹೀಗಾಗಿ ಗಾಂಧೀಯವರನ್ನು ಕುರಿತಂತೆ ನಮ್ಮ ಭೇದ ಭಾವನೆಗಳೇನೇ ಇರಲಿ ಅವರು ಪ್ರತಿಪಾದಿಸಿದ ಹಲವಾರು ಮೌಲ್ಯಗಳು ಮತ್ತು ಅವುಗಳ ಸಾಧನೆಗೆ ಅವರು ಅನುಸರಿಸಿದ ಮಾರ್ಗವನ್ನು ನಾವು ಒಪ್ಪಲೇ ಬೇಕು. ಏಕೆಂದರೆ ಭಯೋತ್ಪಾದನೆ, ಉಗ್ರರ ಹಿಂಸಾಚಾರ, ಪರಿಸರನಾಶ ಹಾಗೂ ಅಣ್ವಸ್ತ್ರಗಳ ಸಮರ ಮುಂತಾದ ವಿಷಯಗಳಿಂದ ಸರ್ವನಾಶದೆಡೆಗೆ ಸರಿಯುತ್ತಿರುವ ಈ ಸಂದರ್ಭದಲ್ಲಿ ಗಾಂಧೀಜಿಯವರು ಪ್ರತಿಪಾದಿಸಿದ ಸತ್ಯ, ಅಹಿಂಸೆ, ಪ್ರೇಮ ಮಾರ್ಗಗಳೇ ಸೂಕ್ತ ಎಂದು ಹೇಳಿದರೆ ತಪ್ಪಾಗದು.

ಈ ನಿಟ್ಟಿನಲ್ಲಿ ನಾವು ಭಾವಿಸಿದಂತೆ ಗಾಂಧೀಜೀಯವರ ಆಚಾರ ವಿಚಾರಗಳನ್ನು ಅರ್ಥ ಮಾಡಿಕೊಳ್ಳುವುದು ಸುಲಭದ ಕಾರ್ಯವಲ್ಲ. ಏಕೆಂದರೆ ಗಾಂಧೀಜಿಯವರ ವ್ಯಕ್ತಿತ್ವ ಸಂಕೀರ್ಣತೆಯಿಂದ ಒಡಗೂಡಿದೆ. ಜಾನ್‌ಗಂಥರ್ ಹೇಳಿಕೆಯಂತೆ; ಮಾನವರ ಮಿಡಿತವನ್ನು ಸೂಕ್ತವಾಗಿ ಗ್ರಹಿಸಿದ ಸೂಕ್ಷ್ಮಮತಿ ಗಾಂಧಿ. ಅದರಂತೆಯೇ ರಾಜಕೀಯ ಲೆಕ್ಕಚಾರಗಳನ್ನು ಸರಿಯಾಗಿ ಅಳೆಯಬಲ್ಲ ಬನಿಯಾಗಾಂಧೀ. ವಿರೋಧಾಭಾಸಗಳಿಂದ ಕೂಡಿದ ಅವರನ್ನು ಅರಿಯುವುದಾಗಲೀ, ಅಳೆಯುವುದಾಗಲೀ ಶ್ರೀ ಸಾಮಾನ್ಯನಿಗೆ ಮೀರಿದ ಕಾರ್ಯ. ಅವರು ಒಂದೆಡೆ ಕಾನೂನನ್ನು ಪಾಲಿಸಬೇಕೆಂದು ಹೇಳಿದರೆ ಮತ್ತೊಂದೆಡೆ ಕಾನೂನು ಭಂಗ ಚಳವಳಿಯನ್ನು ಪ್ರತಿಪಾದಿಸಿದರು. ದೀನ ದಲಿತರ ಹಾಗೂ ದರಿದ್ರರ ವಿಕಾಸಕ್ಕೆ ಹೋರಾಡಿದ ಈ ಮಹಾ ಪುರುಷ ಶ್ರೀಮಂತರ ಸ್ನೇಹಿತನಾಗಿದ್ದ. ಹರಿಜನರ ವಿಕಾಸಕ್ಕೆ ಹೆಣಗಿದ ಈ ಮಹಾತ್ಮ ಸನಾತನ ಧರ್ಮವನ್ನು ಕೈಬಿಡದೆ ರಾಜಕೀಯದಲ್ಲಿ ಧರ್ಮಕ್ಕೆ ಆಸ್ಪದ ಕಲ್ಪಿಸಿದ. ಕ್ರಾಂತಿಕಾರಿಯಾದರೂ ಶಾಂತಿದೂತನಾಗಿದ್ದ, ಓರ್ವ ಪವಾಡ ಪುರುಷನಾಗಿದ್ದ.

ಈ ಹಂತದಲ್ಲಿ ನಾವು ಗಮನಿಸಲೇಬೇಕಾದ ಒಂದು ವಿಷಯ ಎಂದರೆ ಗಾಂಧೀಜಿಯವರು ಬದುಕಿ ಬಾಳಿದ ಕಾಲ. ಈ ಅವಧಿಯಲ್ಲಿ ನಮಗೆ ಪ್ರಮುಖವಾಗಿ ಕಾಣ ಸಿಗುವ ಘಟನೆಗಳು ಹಾಗೂ ವ್ಯಕ್ತಿಗಳೆಂದರೆ ಹಿಟ್ಲರ್, ಮುಸ್ಸೋಲಿನಿ, ಲೆನಿನ್, ಚರ್ಚಿಲ್, ರೂಸ್‌ವೆಲ್ಟ್ ಮತ್ತು ಜನರಲ್ ಸ್ಮಟ್ಸ್ ಮುಂತಾದವರು. ಘಟನೆಗಳನ್ನು ಕುರಿತು ಹೇಳಬೇಕೆಂದರೆ ಎರಡು ಮಹಾಯುದ್ಧಗಳು, 1930ರ ಆರ್ಥಿಕ ಕುಸಿತ, 1945ರ ಅಣು ಬಾಂಬ್ ಸ್ಫೋಟ ಹಾಗೂ ಆಫ್ರಿಕಾ ದೇಶದಲ್ಲಿ ನಡೆದ ವರ್ಣಭೇಧ ನೀತಿ ಮುಂತಾದವು. ಈ ಎಲ್ಲಾ ಘಟನೆಗಳಿಂದಾಗಿ ವಿಶ್ವ ಒಂದು ಯಜ್ಞಕುಂಡವಾಗಿ ಧಗಿಧಗಿಸಿ ಅದಕ್ಕೆ ಮಾನವ ಕುಲವೇ ಬಲಿಪಶುವಾಗಿದ್ದು ವಿಶ್ವದ ಎರಡು ಮಹಾನ್ ಶಕ್ತಿಗಳಲ್ಲಿ ಬಣ ಏರ್ಪಟ್ಟು ಶಾಂತಿಗೇ ಸಂಚಕಾರ ತಂದಿದ್ದು. ಹೀಗೆ ಸಮರಾರಾಧಕರೂ ಹಾಗೂ ಸಮಯ ಸಾಧಕರ ಅವಧಿಯಲ್ಲಿ ಶಾಂತಿ ಹಾಗೂ ಮಾನವರ ಕಲ್ಯಾಣಕ್ಕೆ ಪ್ರತಿಪಾದಿಸಿದ ಏಕೈಕ ವ್ಯಕ್ತಿ ಗಾಂಧೀಜಿ. ಇದನ್ನು ಕಂಡು ಮರುಗಬೇಕೆ? ಅಥವಾ ಮರೆಯಬೇಕೆ? ಈ ಒಂದು ಹಿನ್ನಲೆಯಲ್ಲಿ ಗಾಂಧೀಜೀಯವರ ಜೀವನ ಶೈಲಿ ಹಾಗೂ ಪ್ರತಿಪಾದಿಸಿದ ಹಲವಾರು ತತ್ವಗಳನ್ನು ಪರಿಶೀಲಿಸಿ ಸಾಧ್ಯವಾದಲ್ಲಿ ಅವನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಂಡಲ್ಲಿ ಸಮಾಜ ಸುಧಾರಿಸುವುದರಲ್ಲಿ ಸಂದೇಹವಿರಲಾರದು. ಗಾಂಧೀಜೀಯವರು ಪ್ರತಿಪಾದಿಸಿದ ತತ್ವಗಳೆಂದರೆ ಸತ್ಯ ಅಹಿಂಸೆ, ಸತ್ಯಾಗ್ರಹ, ಸರ್ವೋದಯ ರಾಜ್ಯಕ್ಕೆ ಸಂಬಂಧಿಸಿದಂತೆ ಹಲವಾರು ಆರ್ಥಿಕ ಹಾಗೂ ಸಾಮಾಜಿಕ ಸಮಸ್ಯೆಗಳು. ಗಾಂಧೀಜೀಯವರಂತೆ ಸತ್ಯವೇ ದೇವರು. ದೇವರೇ ಸತ್ಯ.



ಹೀಗಾಗಿ ಅವರಲ್ಲಿ ಸರ್ವಧರ್ಮ ಸಮನ್ವಯತೆ ಬೆಳೆದು ಬಂದು ಅಗೋಚರ ಶಕ್ತಿಯೊಂದು ಮಾನವ ಕ್ರಿಯೆಗಳನ್ನು ನಿಯಂತ್ರಿಸುತ್ತದೆ. ಇದು ಅನುಭವದಿಂದ ಅರಿಯಬೇಕೇ ಹೊರತು ಧಾಂಬಿಕ ಆಚಾರಗಳಿಂದ ಅಲ್ಲ ಎಂದೇ ಹೇಳುತ್ತಿದ್ದರು. ಸತ್ಯ ಹಾಗೂ ಪ್ರೇಮಗಳೇ ದೇವರು. ಮನಸ್ಸಾಕ್ಷಿಗೆ ಮೀರಿದ ದೇವರಿಲ್ಲವೆಂದೇ ಅವರು ಅನೇಕ ಸಲ Innervoice ನ ಬಗ್ಗೆ ಹೇಳುತ್ತಿದ್ದರು.

ಸತ್ಯದೊಂದಿಗೆ ಯಾವ ಬಗೆಯ ರಾಜಿಗೂ ಅವರು ಸಿದ್ಧರಿರಲಿಲ್ಲ. ಇದಕ್ಕೆ ಅವರು ಭಕ್ತ ಪ್ರಹ್ಲಾದ, ಸಾಕ್ರಟೀಸ್, ಯೇಸು ಮುಂತಾದವರನ್ನು ಉದಾಹರಿಸುತ್ತಿದ್ದರು ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಕನ್ನಡದ ಜನಪದದ ಪದ್ಯ 'ಪುಣ್ಯಕೋಟಿ'ಯಲ್ಲಿ ಹೇಳಿದಂತೆ ಸತ್ಯವೇ ನಮ್ಮ ತಾಯಿ ತಂದೆ, ಸತ್ಯವೇ ನಮ್ಮ ಬಂಧು ಬಳಗ, ಸತ್ಯ ಬಿಟ್ಟು ನಡೆದರೆ ಮೆಚ್ಚನಾ ಜಗದೀಶನು"

**ಅಹಿಂಸೆ :** ಈ ವಿಷಯದಲ್ಲಿ ಗಾಂಧೀಜಿಯವರು ಜೈನಮತ ಹಾಗೂ ಕ್ರೈಸ್ತನ ಸೆರಮನ್ ಆನ್ ದಿ ಮೌಂಟನಿಂದ ತುಂಬಾ ಪ್ರಭಾವಿತರಾಗಿದ್ದರು. ಅವರ ಹೇಳಿಕೆಯಂತೆ ಅಹಿಂಸೆ ಕೇವಲ ಸಾಧು ಸಂತರ ಧರ್ಮವಾಗಿರದೆ ಶ್ರೀಸಾಮಾನ್ಯರ ಧರ್ಮವಾಗಿದೆ. ಅಹಿಂಸೆ ಒಂದು ಪ್ರಬಲ ಅಸ್ತ್ರ ಬಲಹೀನರಿಗೆ ಎಂದು ಭಾವಿಸಬಾರದು. ಏಕೆಂದರೆ ಅದು ಹಿಂಸೆಗಿಂತ ಅಧಿಕವಾದ ಅಸ್ತ್ರ. ಆದರೆ ಇದು ಕೇವಲ ಪ್ರೇಮ ಹಾಗೂ ದೇವರಲ್ಲಿ ನಂಬಿಕೆ ಹೊಂದಿದವರಿಗೆ ಮಾತ್ರ ಲಭ್ಯ. ಅಹಿಂಸೆ ಕೇವಲ ಮುಕ್ತಿಗಳಿಗಾಗಿ ಅನ್ವಯಿಸುತ್ತದೆ ರಾಷ್ಟ್ರಗಳಿಗಲ್ಲ ಎಂಬುದು ಸತ್ಯಕ್ಕೆ ದೂರವಾದ ವಿಷಯ. ಹೀಗಾಗಿ ನಾನು ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅದನ್ನು ಅಳವಡಿಸಿಕೊಂಡೆ. ಹಿಂಸೆಯಿಂದ ಏನನ್ನು ಸಾಧಿಸಲಾಗದು ಎಂಬುದನ್ನು ಕೆಳಗೆ ನೀಡಿರುವ ಪರಿಣಿತರ ಅಂಕಿ ಸಂಖ್ಯೆಗಳಿಂದ ಅರಿಯಬಹುದು. ವಿಶ್ವದಲ್ಲಿನ ಮಿಲಿಟರಿ ವೆಚ್ಚ: ಪ್ರತಿ ಒಂದು ನಿಮಿಷಕ್ಕೆ 27 ಹಸುಳೆಗಳು ಹಸಿವಿನಿಂದ ಮರಣಹೊಂದುತ್ತವೆ. ಆದರೆ ಇದೇ ಒಂದು ನಿಮಿಷಕ್ಕೆ ಹದಿನೈದು ಲಕ್ಷ ಡಾಲರ್ ಹಣವನ್ನು ನಾವು ಮಿಲಿಟರಿ ಉಪಕರಣಕ್ಕೆ ಖರ್ಚು ಮಾಡುತ್ತೇವೆ.

ಹಿಂಸೆಗೆ ನಾಂದಿಯಾದ ಸಮರಕ್ಕೆಂದೇ ಪ್ರತಿವರ್ಷ ಸರಾಸರಿ ಒಂದು ಸಾವಿರ ಬಿಲಿಯನ್ ಡಾಲರ್ ಮೊತ್ತವನ್ನು ಕಳೆದ ಹಲವಾರು ದಶಕಗಳಿಂದ ಖರ್ಚು ಮಾಡುತ್ತಿದ್ದೇವೆ. (ನೂರುಕೋಟಿ ಅಂದರೆ ಒಂದು ಬಿಲಿಂಯನ್). ಈ ಒಂದು ಹಿನ್ನೆಲೆಂಯಲ್ಲಿ ಗಾಂಧೀಜೀಯವರು ಪ್ರತಿಪಾದಿಸಿದ ಅಹಿಂಸಾ ಮಾರ್ಗವು ಎಷ್ಟು ಸೂಕ್ತ ಎಂಬುದನ್ನು ಹೇಳಬೇಕಾಗಿಲ್ಲ.

**ಸತ್ಯಾಗ್ರಹ :** ಬಹುಶಃ ಈಚಿನ ದಿನಗಳ ರಾಜಕೀಯ ವಿದ್ಯಮಾನಗಳಲ್ಲಿ ಗಾಂಧೀಜಿಯವರ ದಿವ್ಯ ಅಸ್ತ್ರವಾದ ಸತ್ಯಾಗ್ರಹ ಬಹಳ ದುರುಪಯೋಗವಾಗುತ್ತಿರುವುದು ಶೋಚನೀಯ. ಗಾಂಧೀಜಿಯವರು ತಮ್ಮ ಜೀವನದಲ್ಲಿ ನಡೆಸಿದ ಹೋರಾಟಗಳೆಲ್ಲವೂ ಸತ್ಯಾಗ್ರಹದ ಮೂಲಕವೇ ನಡೆದಿರುವುದು ಗಮನಿಸಬೇಕಾದ ಸಂಗತಿ. ಈ ಮಾದರಿಯ ಹೋರಾಟ ವಿಶ್ವದಲ್ಲಿಯೇ ವಿನೂತನ ದಾಖಲೆಯಾಗಿದೆ.

ಗಾಂಧೀಜಿಯವರು ಇಂಗ್ಲೆಂಡಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗಲೇ ಶಾಂತಿಯುತ ತಡೆ ಅಂದರೆ ಪ್ಯಾಸಿವ್‌ರೆಸಿಸ್ಟೆನ್ಸ್ ಎಂಬ ವಿಧಾನ ಜಾರಿಯಲ್ಲಿತ್ತು. ಆದರೆ ಗಾಂಧೀಜಿಯವರ ಸತ್ಯಾಗ್ರಹ ಇದಕ್ಕಿಂತ ಭಿನ್ನ ಹಾಗೂ ಸತ್ವಶಾಲಿಯಾದದ್ದು. ಏಕೆಂದರೆ ಸತ್ಯಾಗ್ರಹದ ಸೊಗಸು ರಕ್ತದ ಹನಿಗೆ ಆಸ್ಪದ ನೀಡದೇ ಗುರಿಯನ್ನು ತಲುಪಬಹುದಾದ ಮಾರ್ಗ. ಇದೊಂದು ಕದಿಯಲಾಗದ ಅಸ್ತ್ರ. ವೈರಿಗಳ ಮನಸ್ಸನ್ನು ಪರಿವರ್ತಿಸಬಲ್ಲ ಸಾಮರ್ಥ್ಯ ಹೊಂದಿದ ಅಸ್ತ್ರ. ಹೀಗಾಗಿ ಜಗತ್ತಿನಲ್ಲಿ ಇದಕ್ಕೆ ಸಮಾನವಾದ ಬೇರೊಂದು ಮಾರ್ಗವಿಲ್ಲ. ಸತ್ಯಾಗ್ರಹ, ಕೋಪ, ಮತ್ಸರ, ಮಾನಸಿಕ ಹಿಂಸೆ ಮತ್ತು ದುರಾಗ್ರಹದಿಂದ ಮುಕ್ತವಾದ ಕ್ರಮ. ಗಾಂಧೀಜಿಯವರು ಹೇಳುವಂತೆ ಸತ್ಯಾಗ್ರಹದಲ್ಲಿ ಕಾಯಾ, ವಾಚಾ ಹಾಗೂ ಮಾನಸಿಕವಾಗಿ ಹಿಂಸೆಗೆ ಆಸ್ಪದವಿಲ್ಲ. ಅವರಿಗೆ ಕೇಡು ಬಯಸುವ, ಕ್ರೂರವಾಗಿ ವರ್ತಿಸುವ ಹಾಗೂ ನಿಷ್ಠುರವಾಗಿ ಮಾತನಾಡುವ ಕ್ರಮಗಳು ಸತ್ಯಾಗ್ರಹಕ್ಕೆ ವಿರೋಧವಾಗಿದೆ.

ಈ ಒಂದು ಹಿನ್ನೆಲೆಯಲ್ಲಿ ಅವರು ಸತ್ಯಾಗ್ರಹಿಯ ಲಕ್ಷಣಗಳನ್ನೇ ನಿರೂಪಿಸಿದ್ದು ಶ್ಲಾಘನೀಯ. ಸತ್ಯಾಗ್ರಹಿಗೆ ಭಗವಂತನಲ್ಲಿ ನಂಬಿಕೆ ಇರಬೇಕು. ಅವನು ತ್ಯಾಗ ಹಾಗೂ ಶುದ್ಧ ಸರಳ ಜೀವನ ನಡೆಸಬೇಕು. ಟೀ, ಕಾಫಿ, ಮಾದಕ ದ್ರವ್ಯಗಳನ್ನು ಸೇವಿಸಬಾರದು; ಖಾದಿಧಾರಿಯಾಗಿರಬೇಕು. ಕಾನೂನುಗಳಿಗೆ ಗೌರವ ನೀಡಬೇಕು. ಜೈಲಿನ ಕಾನೂನುಗಳನ್ನು ಪರಿಪಾಲಿಸಬೇಕು ಮುಂತಾದವು. ಇಂದಿನ ಸತ್ಯಾಗ್ರಹಿಗಳು ಇದಕ್ಕೆ ಅರ್ಹರೇ ?!



ಗಾಂಧೀಜಿಯುವರು ಕೇವಲ ಸ್ವಾತಂತ್ರ್ಯ ಹೋರಾಟಗಾರರಾಗಿರದೆ ತಮ್ಮ ಸುತ್ತಮುತ್ತಲಿನವರ ಜೀವನ ಮಟ್ಟವನ್ನು ಸುಧಾರಿಸಬೇಕೆಂಬ ಹಿರಿಯಾಸೆಯನ್ನು ಹೊಂದಿದ್ದರು. ಹೀಗಾಗಿ ಅವರು ರಾಮರಾಜ್ಯದ ಕನಸ್ಸನ್ನು ಕಂಡಿದ್ದರು ಓರ್ವವಾಸ್ತವಿಕವಾದಿಯಾಗಿದ್ದರು. ಏಕೆಂದರೆ ಅವರು ಮಾನವರಲ್ಲಿ ಅಡಕವಾಗಿರುವ ಗುಪ್ತ ಮನೋಭಾವನೆಗಳನ್ನು ಅರಿತಿದ್ದರು. ಆದುದರಿಂದ ಮಾನವನು ತನ್ನ ಮುಂದಾಲೋಚನೆ ಅಥವಾ ದೂರ ದೃಷ್ಟಿಯಿಂದ ತನ್ನ ಜೀವನವನ್ನು ಸುಧಾರಿಸಿಕೊಳ್ಳ ಬಲ್ಲನೆಂಬ ವಾಸ್ತವಿಕತೆಯನ್ನು ದೃಢವಾಗಿ ಪ್ರತಿಪಾದಿಸಿದರು. ಈ ಒಂದು ಸುಳುಹು ನಾವು ಅವರ ಸರ್ವೋದಯ ಕಲ್ಪನೆಯಲ್ಲಿ ಕಾಣಬಹುದು. ಈ ನಿಟ್ಟಿನಲ್ಲಿ ಗಾಂಧೀಜಿಯುವರು ಜಾನ್‌ರಸ್ಕಿನ್ ಅವರಿಂದ ಪ್ರಭಾವಿತರಾಗಿದ್ದರು. ಅವರು ಸರ್ವೋದಯ ಸಿದ್ದಾಂತವನ್ನು 'ಸರ್ವೇಜನೋಸುಖಿನೋ ಭವಂತು' ಹಾಗೂ ವಿಶ್ವ ಕುಟುಂಬ ಎಂಬ ಸನಾತನ ಧರ್ಮದ ತಿರುಳನ್ನು ತಮ್ಮದೇ ಆದ ರೀತಿಯಲ್ಲಿ ಅಳವಡಿಸಿಕೊಂಡಿದ್ದುದರಿಂದ ಅದು ಅಪ್ಪಟ ಭಾರತೀಯ ಸಿದ್ಧಾಂತವಾಗಿ ಜಾರಿಯಲ್ಲಿ ಬಂದಿದ್ದು ಶ್ಲಾಘನೀಯ. ನಾವು ಗಮನಿಸಬೇಕಾದ ಅಂಶವೆಂದರೆ ಅವರು ಪ್ರತಿಪಾದಿಸಿದ ಸರ್ವೋದಯ ಸಿದ್ದಾಂತವು ಮಾನವರ ಸಮಗ್ರ ಜೀವನ ಎಂದರೆ ಆರ್ಥಿಕ ಸಾಮಾಜಿಕ ರಾಜಕೀಯ ಮತ್ತು ನೈತಿಕ ನೆಲಗಟ್ಟನ್ನು ಹೊಂದಿತ್ತು. ಸರ್ವೋದಯದ ಮುಕ್ತ ಸಮಾಜವನ್ನು ನಿರ್ಮಿಸಬೇಕೆಂದೇ ಅವರ ಗುರಿಯಾಗಿತ್ತು. ಹೀಗಾಗಿ ನಾವು ಕರ್ಮಯೋಗಿ ಗಾಂಧಿಯನ್ನು ಕಾಣುತ್ತೇವೆ.

ಕರ್ಮಯೋಗಿಗಳಾದ ಗಾಂಧೀಜಿಯವರು ಸರಳ ಜೀವನವೇ ಸುಖ-ಶಾಂತಿಯ ಸೋಪಾನ. ಪ್ರತಿಯೊಬ್ಬನೂ ದುಡಿಯಬೇಕು. ಶ್ರಮ ಜೀವನ ಸ್ವರ್ಗ ಸಮಾನ ಎಂದೇ ಹೇಳಿ ಅದರಂತೆಯೇ ನಡೆದರು. ಈ ಬಗೆಯ ಜೀವನಕ್ಕೆಂದೇ ಅವರು ಏಕಾದಶ ವ್ರತಗಳನ್ನು ಮತ್ತು ಸಪ್ತಮಹಾಪಾತಕಗಳನ್ನು ವಿವರಿಸಿದರು.

ಅವುಗಳನ್ನು ಕೆಳಗೆ ನೀಡಲಾಗಿದೆ.

1. ಅಹಿಂಸೆ 2. ಸತ್ಯ 3. ಆಸ್ತೇಯ (ಕದಿಯದಿರುವುದು) 4. ಬ್ರಹ್ಮಚರ್ಯ 5. ಅಪರಿಗ್ರಹ 6. ಶರೀರಶ್ರಮ 7. ಅಸ್ವಾದ 8. ಸರ್ವತ್ರಭಯವರ್ಜನ 9. ಸರ್ವಧರ್ಮ ಸಮಾನತ್ವ 10. ಸ್ವದೇಶಿ 11. ಸ್ಪರ್ಶಭಾವನಾ ಅಂದರೆ ಅಸ್ಪೃಶ್ಯತೆಯ ವಿರೋಧ. ನಿಜ ಜೀವನದಲ್ಲಿ ಈ ವ್ರತಗಳನ್ನು ಪರಿಪಾಲಿಸಿದಲ್ಲಿ ಸುಖ ಸಂತೋಷ ಪಡೆಯುವಲ್ಲಿ ಸಂದೇಹವೇ ಇರಲಾರದು.

ಆಸೆಯೇ ಸಕಲ ದುಃಖಗಳಿಗೆ ಮೂಲ ಎಂದೇ ಭಗವಾನ್ ಬುದ್ಧನ ಹೇಳಿಕೆ. ಆದರೆ ಮಾನವರಿಗೆ ಜೀವನ ನಡೆಸಲು ಒಂದು ಕೆಲಸ ಹಾಗೂ ಕೆಲಸಕ್ಕೆ ಪ್ರತಿ ಫಲವಾಗಿ ಹಣ ಅನಿವಾರ್ಯ. ಇವುಗಳನ್ನು ಶುದ್ಧ ಸಾಧನೆಯ ಮಾರ್ಗದಿಂದಲೇ ಅಂದರೆ ಋಜು ಮಾರ್ಗದಿಂದಲೇ ಗಳಿಸಬೇಕು. ಇದಕ್ಕೆಂದೇ ಅವರು ಸಪ್ತ ಸಾಮಾಜಿಕ ಪಾತಕಗಳನ್ನು ವಿವರಿಸಿದರು:

1. ತತ್ವರಹಿತ ರಾಜಕೀಯ 2. ದುಡಿಮೆ ಇಲ್ಲದ ಸಂಪತ್ತು 3. ನೀತಿಹೀನ ವಾಣಿಜ್ಯ 4. ಶೀಲವಿಲ್ಲದ ಶಿಕ್ಷಣ 5. ಆತ್ಮ ಸಾಕ್ಷಿರಹಿತ ಭೋಗ 6. ಮಾನವತಾ ಶೂನ್ಯವಿಜ್ಞಾನ 7. ತ್ಯಾಗ ವಿಲ್ಲದ ಪೂಜೆ.

ಈ ಸೂತ್ರಗಳನ್ನು ಆಧರಿಸಿ ಗಾಂಧೀಜಿಯವರು ವಿನೂತನ ಸಮಾಜ ಒಂದನ್ನು ಸೃಷ್ಟಿಸಬೇಕೆಂದೇ ಹೋರಾಟ ನಡೆಸಿದರು. ತೋರಿಕೆಗೆ ಪಾಶ್ಚಿಮಾತ್ಯ ದೇಶಗಳಲ್ಲಿ ಪ್ರಜಾ ಪ್ರಭುತ್ವ ಯಶಸ್ವಿ ಎಂದು ತೋರಿದರೂ ಅಲ್ಲಿನ ಪ್ರಜೆಗಳು ಸುಖ ಶಾಂತಿಯ ಅಭಾವದಿಂದ ತೊಳಲಾಡುತ್ತಿದ್ದಾರೆ. ಅವರ ವಿಜ್ಞಾನ ಹಾಗೂ ತಂತ್ರಜ್ಞಾನ ಅಗಾಧವಾಗಿ ಬೆಳೆದು ಅವರ ಜೀವನಮಟ್ಟವನ್ನು ಸುಧಾರಿಸಿದೆ. ಅವರ ಆರ್ಥಿಕ ನೀತಿಯ ಪ್ರಭಾವದಿಂದಾಗಿ ವಿಶ್ವ ಮಾರುಕಟ್ಟೆ, ಜಾಗತೀಕರಣ ಮತ್ತು ಮುಕ್ತ ವ್ಯಾಪಾರಗಳಿಂದಾಗಿ ಕೊಳ್ಳುಬಾಕ ಸಂಸ್ಕೃತಿಬೆಳೆದು ಬಂದಿದೆಯೇ ಹೊರತು ಮಾನವರಿಗೆ ಬೇಕಾದ ಮನಶ್ಶಾಂತಿ ದೊರೆಯುತ್ತಿಲ್ಲ. All is not well ಎಂಬ ಹತಾಶಾ ಮನೋಭಾವನೆಯಿಂದ ಈ ಮುಂದುವರಿದ ಮಹಾನ್ ರಾಷ್ಟ್ರಗಳು ಆತ್ಮಹತ್ಯೆಯ ಪಿಡುಗಿನಿಂದ ನರಳತೊಡಗಿವೆ. ಅನೇಕ ವಿದ್ವಾಂಸರು ಅಲ್ಲಿನ ಸಮಾಜದ ಚಿಂತಾಜನಕ ವಿಷಯಕುರಿತು ಬರೆದಿದ್ದಾರೆ. ಅವರ ಹೇಳಿಕೆಯಂತೆ ಅಲ್ಲಿನ ಸಮಾಜವು ಅಸಂತೃಪ್ತಿಯ ಗೂಡಾಗಿದೆ. ಇದರಿಂದಾಗಿ ಜನತೆ ಮಾದಕ ದ್ರವ್ಯಗಳ ಹಾಗೂ ಔಷಧಿಗಳ ಮೊರೆಹೋಗಿದೆ. ಅಪರಾಧಗಳು ಹೆಚ್ಚತೊಡಗಿವೆ.





ಇಂದು ನಾವು ಎದುರಿಸಬೇಕಾದ ಭೂತಾಕಾರದ ಸಮಸ್ಯೆಗಳೆಂದರೆ ಜನಸಂಖ್ಯಾ ಸ್ಫೋಟ ಹಾಗೂ ನಿರುದ್ಯೋಗ ಮತ್ತು ಬಡತನ. ಈ ದುರಂತಗಳನ್ನು ಗಾಂಧೀಜಿಯವರು ಸೂಚಿಸಿದ ಮಾರ್ಗಗಳಿಂದ ಬಗೆಹರಿಸಬಹುದೆಂದೇ ಹೇಳಿದರೆ ತಪ್ಪಾಗಲಾರದು. ಬದುಕನ್ನು ಉಪನಿಷತ್ತಿನಲ್ಲಿ ಹೇಳಿದಂತೆ ಸಹನಾವವತು ಸಹನೌಭುನಕ್ತು ಸಹವೀರ್ಯಂಕರವಾವಹೈ ತೇಜಸ್ವಿನಾವಧೀತಮಸ್ತು ಮಾವಿದ್ವಿಷಾವಹೈ ॥ ಓಂ ಶಾಂತಿಃ ಶಾಂತಿಃ ಶಾಂತಿಃ ಎಂಬ ಸಹಬಾಳ್ವೆಯ ತತ್ವಕ್ಕೆ ಮೊರೆಹೋಗಬೇಕು.

***O God give us men !***
***A time like this demand***
***True minds strong hearts and***
***loving hands***
***Men whom the lust of power will not kill***
***Men whom the lust of office will not buy***
***Men who have opinion and a well***
***Men who do not lie.***

(ಆಂಗ್ಲ ಕವಿಯ ಹೇಳಿಕೆ)





# ಮಹಾತ್ಮಗಾಂಧಿ ಮತ್ತು ಆಡಿನಹಾಲು

– ವೇಮಗಲ್ ಸೋಮಶೇಖರ್

ಮಹಾತ್ಮಗಾಂಧಿ ಹಾಗೂ ಆಡಿನ (ಮೇಕೆ) ಹಾಲಿಗೆ ಅವಿಭಾಜ್ಯ ನಂಟು. ಆಡಿನ ಹಾಲಿಗೆ ಆಯುರ್ವೇದ ಮಹತ್ವವಿದ್ದು ಗಾಂಧಿ ಅವರಿಂದಾಗಿ ದೇಶವಿದೇಶಗಳಲ್ಲಿ ಪ್ರಸಿದ್ಧಿ ಪಡೆದಿತ್ತು. ಗಾಂಧೀಜಿ ಆಡಿನ ಹಾಲನ್ನು ಸೇವಿಸಲಾರಂಭಿಸಿದ್ದು ಅಷ್ಟೇ ಆಕಸ್ಮಿಕವಾಗಿದ್ದು ಕುತೂಹಲಕಾರಿಯಾಗಿದೆ.

ಗಾಂಧಿಯವರು ದಕ್ಷಿಣ ಆಫ್ರಿಕಾದಲ್ಲಿದ್ದಾಗಲೇ ಹಸುವಿನ ಹಾಲು ಹಾಗೂ ಅದರ ಉತ್ಪನ್ನಗಳನ್ನು ತೆಗೆದುಕೊಳ್ಳಬಾರದು ಎಂದು ನಿರ್ಧರಿಸಿದ್ದರು. ಆಗ ಅವರ ಗುರುಗಳಾದ ಗೋಪಾಲಕೃಷ್ಣ ಗೋಖಲೆಯವರು ಮತ್ತು ಆಪ್ತರಾದಂತ ಡಾ. ಜೀವರಾಜ ಮೆಹತಾ ಅವರು ಹಾಲು ಕುಡಿಯಬೇಕೆಂದು ಎಷ್ಟು ಒತ್ತಾಯಿಸಿದರೂ ಗಾಂಧಿ ಕೇಳಲಿಲ್ಲ.

ಆಫ್ರಿಕಾದಿಂದ 1914ರಲ್ಲಿ ಗಾಂಧಿಯವರು ಸಂಸಾರ ಸಮೇತ ಭಾರತಕ್ಕೆ ಹಿಂತಿರುಗುವಾಗ ಇಂಗ್ಲೆಂಡಿಗೆ ಹೋಗಿ ಬರಬೇಕಾಗಿ ಬಂತು. ಪ್ರಥಮ ಮಹಾಯುದ್ಧ ಅದಾಗಲೇ ಪ್ರಾರಂಭವಾಗಿತ್ತು. ಈ ಯುದ್ಧದ ಬಗ್ಗೆ ಗಾಂಧೀಜಿ ಲಂಡನ್ನಿನಲ್ಲಿದ್ದ ಗೋಖಲೆಯವರೊಡನೆ ಚರ್ಚಿಸಲು ಹೋದಾಗ ಪ್ಲೂರಸಿ ಕಾಯಿಲೆ (ಪಕ್ಕೆನೋವು) ಉಂಟಾಗಿ ಹಾಸಿಗೆ ಹಿಡಿದರು. ಈ ಕಾರಣದಿಂದ ಹಾಲಿನ ಜೊತೆಗೆ ಧಾನ್ಯ ಬೇಳೆ ಮುಂತಾದವುಗಳನ್ನು ಸೇವಿಸುವುದನ್ನು ಬಿಟ್ಟರು.

ಪಕ್ಕೆ ಶೂಲೆ ಗುಣವಾದ ನಂತರ 1915ರ ಜನವರಿಯಲ್ಲಿ ಇಂಗ್ಲೆಂಡಿನಿಂದ ಭಾರತಕ್ಕೆ ಹಿಂತಿರುಗಿದರು. ಕ್ರಮೇಣ ಭಾರತದಲ್ಲಿ ಅನೇಕ ಸಮಾಜ ಸೇವಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಇವುಗಳಲ್ಲಿ ಮುಖ್ಯವಾಗಿ ಗೋ ಸಂರಕ್ಷಣೆ, ಗೋಶಾಲೆ, ಹಾಲಿನ ಕೇಂದ್ರಗಳು, ತಳಿಗಳ ಅಭಿವೃದ್ಧಿ ನೇಗಿಲಯೋಗಿಯ ಜೀವಾಳವಾದ ಎತ್ತುಗಳ ಬಗ್ಗೆ ಅನುಕಂಪ ಮುಂತಾದವುಗಳು ಸೇರಿತ್ತು. ಈ ಕಾರ್ಯದಲ್ಲಿ ಗಾಂಧಿಯವರಿಗೆ ಆಸಕ್ತಿ ಹುಟ್ಟಿಸಿದವರು ಮಾರವಾಡಿ ಜನಾಂಗದ ಮಿತ್ರರು.



ಮಹಾಯುದ್ಧ ಕೊನೆಗೊಂಡ ಸಮಯದಲ್ಲಿ (1918) ಪುನಃ ಗಾಂಧಿಯವರು ಸಾಬರಮತಿ ಆಶ್ರಮದಲ್ಲಿ ವಿಪರೀತ ಆಮಶಂಕೆ ಬೇಧಿಯಿಂದ ಪೂರ್ಣ ನಿಶ್ಯಕ್ತಿಗೊಂಡರು. ಅವರ ಅನುಯಾಯಿಗಳೆಲ್ಲರೂ ಚಿಂತೆಗೊಳಗಾಗಿ ಅನೇಕ ವೈದ್ಯರನ್ನು ಕರೆತಂದರು. ಗಾಂಧಿಯವರನ್ನು ಕಾಣಲು ಆಗಮಿಸಿದ ವಲ್ಲಭಬಾಯಿ ಪಟೇಲರು 'ಜರ್ಮನಿ ಪೂರ್ತಿಯಾಗಿ ಸೋತು ಹೋಯಿತು. ಇನ್ನು ಸೈನ್ಯ ಶೇಖರಣೆ ಅವಶ್ಯಕವಿಲ್ಲವೆಂದು ಕಮೀಷನರು ಹೇಳಿ ಕಳುಹಿಸಿದ್ದಾರೆ' ಎಂದು ತಿಳಿಸಿದರು. ಆಗ ಗಾಂಧಿಯವರ ಮನಸ್ಸಿಗೆ ಸ್ವಲ್ಪ ನೆಮ್ಮದಿಯುಂಟಾಯಿತು. ಡಾ. ದಲಾಲರು ಆಗಮಿಸಿ 'ನೀವು ಹಾಲನ್ನು ತೆಗೆದುಕೊಳ್ಳದ ಹೊರತು ನಿಮ್ಮ ದೇಹವನ್ನು ಪುಷ್ಟಿಯುತವಾಗಿ ಮಾಡುವುದು ಸಾಧ್ಯವಿಲ್ಲ' ಎಂದರು. ಆಗಲೂ ಸಹ ಗಾಂಧಿಯವರು 'ನಾನು ಹಾಲನ್ನು ತೆಗೆದುಕೊಳ್ಳುವುದಿಲ್ಲವೆಂದು ಬಹಳ ಹಿಂದೆಯೇ ವ್ರತ ಹೂಡಿದ್ದೇನೆ' ಎಂದರು. ಡಾ. ದಲಾಲರು 'ನಿಮ್ಮ ವ್ರತಕ್ಕೆ ಏನು ಕಾರಣ? ಎಂದು ಕೇಳಿದರು. 'ನಾನು ಒಮ್ಮೆ ಕಲ್ಕತ್ತದಲ್ಲಿ ಗೋಮಾಲೀಕರನ್ನು ಕಾಣಲು ಹೋಗಿದ್ದಾಗ ತಮ್ಮ ಹಸು ಎಮ್ಮೆಗಳಿಂದ ಒಂದು ತೊಟ್ಟು ಹಾಲನ್ನು ಬಿಡದೆ ತೆಗೆದುಕೊಳ್ಳಲು ಅನುಸರಿಸುತ್ತಿದ್ದ 'ಫೂಕಾನ್' ಪದ್ಧತಿಯನ್ನು ಕಂಡೆ. ಅದು



ಇನ್ನೂ ನನ್ನ ಕಣ್ಣಿಗೆ ಕಟ್ಟಿದಂತೆ ಇದೆ. ಅಂದರೆ ಹಸುವಿಗೆ ಹಿಂದಿನಿಂದ ದೊಣ್ಣೆ ಕೋಲನ್ನು ತುರುಕಿ ಕೆಚ್ಚಲಿನಲ್ಲಿರುವ ಪೂರ್ತಿ ಹಾಲು ಹೊರಬರಲು ಅನುಸರಿಸುತ್ತಿದ್ದ ವಿಧಾನ ಇದಾಗಿದ್ದು ಆಗಾಗ್ಗೆ ರಕ್ತವೂ ಹೊರಬರುತ್ತಿತ್ತು. ಎಂದು ಗಾಂಧೀಜಿ ತಾವು ಕಂಡಿದ್ದ ಪೂರ್ಣ ವಿವರವನ್ನು ತಿಳಿಸಿ ಅದರಿಂದಾಗಿ ನಾನು ಹಾಲನ್ನು ಸೇವಿಸಬಾರದೆಂದು ಶಪಥಗೈದುದಾಗಿ ಹೇಳಿದರು. ಈ ಸಂಭಾಷಣೆ ನಡೆಯುತ್ತಿದ್ದಾಗ ಪಕ್ಕದಲ್ಲಿಯೇ ಇದ್ದ ಕಸ್ತೂರಿಬಾ ಗಾಂಧಿಯವರು 'ಹಾಗಾದರೆ ಆಡಿನ ಹಾಲನ್ನು ಕುಡಿಯ ಬಹುದಲ್ಲಾ ಎಂದರು. ಅಲ್ಲಿಯೇ ಇದ್ದ ಡಾ. ದಲಾಲರೂ ಸಹ 'ನೀವು ಆಡಿನ ಹಾಲನ್ನು ಕುಡಿದರೆ ನನಗೂ ಸಂತೋಷ' ಎಂದರು. ಆನಂತರ ಮಹಾತ್ಮರು ಆಡಿನ ಹಾಲನ್ನೇ ಕುಡಿಯಲು ಪ್ರಾರಂಭಿಸಿದರು.

ಖಾದಿ ಪ್ರಚಾರಕ್ಕಾಗಿ ಗಾಂಧೀಜಿ 1927ರಲ್ಲಿ ಕರ್ನಾಟಕಕ್ಕೆ ಆಗಮಿಸುತ್ತಿದ್ದಾಗ ಹಾದಿಯಲ್ಲಿ ಅವರ ದೇಹ ಪೂರ್ತಿ ನಿತ್ರಾಣಗೊಂಡಿತು. ಆಗ ನೇರವಾಗಿ ನಂದಿಗಿರಿ ಧಾಮಕ್ಕೆ ಆಗಮಿಸಿ 45 ದಿವಸ ವಿಶ್ರಾಂತಿ ಪಡೆದರು. ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್‌ರವರ ಆದೇಶದ ಮೇರೆಗೆ ಅನೇಕ ಆಡುಗಳು ನಂದಿಗಿರಿ ಧಾಮಕ್ಕೆ ಆಗಮಿಸಿದ್ದವು. ಗಾಂಧೀಯವರನ್ನು ಕಾಣಲು ನಂದಿಬೆಟ್ಟಕ್ಕೆ ಬರುತ್ತಿದ್ದ ಜನರು ಜಾಸ್ತಿಯಾದರು. ಅಲ್ಲಿದ್ದ ಅಯ್ಯರ್ ಹೋಟಲ್‌ನಲ್ಲಿ ಎಲ್ಲರಿಗೂ ಕಾಫಿ ಸರಬರಾಜು ಕಷ್ಟವಾಯಿತು. ಹೋಟೆಲಿನ ಪಕ್ಕದಲ್ಲಿಯೇ ಆಡುಗಳನ್ನು ನೋಡಿಕೊಳ್ಳುತ್ತಿದ್ದ ಹುಡುಗರು ಹಾಲನ್ನು ಕರೆದು ಸ್ವಲ್ಪ ಹಾಲನ್ನು ಮಾತ್ರ ಗಾಂಧಿಯವರಿಗೆ ಕಳುಹಿಸಿ ಮಿಕ್ಕ ಹಾಲನ್ನು ಹೋಟಲಿಗೆ ಕೊಟ್ಟು ಬಿಡುತ್ತಿದ್ದರು. ಹೋಟೆಲಿನವರು ಹಸು ಹಾಲಿನ ಬದಲಾಗಿ ಕಾಫಿಗೆ ಆಡಿನ ಹಾಲನ್ನು ಗುಟ್ಟಾಗಿ ಉಪಯೋಗಿಸ ತೊಡಗಿದರು. ಹೋಟೆಲಿಗೆ ಬರುತ್ತಿದ್ದವರೆಲ್ಲರೂ ಈ ಆಡು ಹಾಲಿನ ಕಾಫಿಯನ್ನೇ 'ಚೆನ್ನಾಗಿದೆ' ಎಂದು ಕುಡಿಯುತ್ತಿದ್ದರು. ಗಾಂಧಿಯವರ ಜೊತೆಯಲ್ಲಿ ರಾಜಗೋಪಾಲಾಚಾರಿ ಯವರೂ ತಂಗಿದ್ದರು. ಇವರಿಗೆ ಕಾಫಿ ಚಟ ಜಾಸ್ತಿ. ದಿನಕ್ಕೆ ಆರೇಳು ಸಲ ಅಯ್ಯರ್ ಹೋಟೆಲ್‌ಗೆ ಹೋಗಿ ಈ ಕಾಫಿಯನ್ನು ಕುಡಿಯುತ್ತಿದ್ದರು. ಇದು ಆಡಿನ ಹಾಲಿನ ಕಾಫಿ ಎಂದು ರಾಜಾಜಿಯವರಿಗೆ ತಡವಾಗಿ ತಿಳಿಯಿತು. ರಾಜಾಜಿ ಗಾಂಧಿಯವರಿಗೆ ಈ ವಿಷಯವನ್ನು ತಿಳಿಸಿದರು. 'ನನ್ನಿಂದ ಎಲ್ಲರೂ ಆಡಿನ ಹಾಲನ್ನು ಕುಡಿಯುವಂತಾಯಿತಲ್ಲ' ಎಂದು ಗಾಂಧೀಜಿ ಸಂತೋಷ ವ್ಯಕ್ತಪಡಿಸಿದರು.

ದುಂಡು ಮೇಜಿನ ಪರಿಷತ್ತಿಗಾಗಿ ಗಾಂಧೀಜಿ 1931 ರಲ್ಲಿ ಲಂಡನ್ನಿಗೆ ಹೋಗಿ ಸುಮಾರು ಮೂರು ತಿಂಗಳು ವಾಸ್ತವ್ಯ ಹೂಡಿದ್ದರು. ಅಲ್ಲಿಯೂ ಅವರಿಗೆ ಆಡಿನ ಹಾಲನ್ನು ಒದಗಿಸಲು ಏರ್ಪಾಟು ಮಾಡಲಾಗಿತ್ತು. ಗಾಂಧೀಜಿ ಲಂಡನ್ ಸೇರುವ ಮುನ್ನ ಅಲ್ಲಿನ ದಿನ ಪತ್ರಿಕೆಗಳಲ್ಲಿ ವ್ಯವಸ್ಥಾಪಕರು ಈ ರೀತಿಯಾಗಿ ಪ್ರಚಾರ ಮಾಡಿದ್ದರು ಈ ದೇಶದಲ್ಲಿ ಒಬ್ಬ ಮಹಾಪುರುಷರು ಆಡಿನ ಹಾಲು ಬೇಕೆಂದು ಕೇಳುತ್ತಿರುವ ಸಂಗತಿಯನ್ನು ನಾವೆಲ್ಲರೂ ಪತ್ರಿಕೆಗಳಲ್ಲಿ ಓದಿದ್ದೇವೆ. ಅವರಿಗೆ ಆಡಿನ ಹಾಲು ದೊರೆಯುವುದು ತುಂಬ ಪ್ರಯಾಸ ವಾಗುವುದೆಂದು ನನಗೆ ತಿಳಿದು ಬಂದಿದೆ. ಇಲ್ಲಿಗೆ ಆ ಮಹಾಪುರುಷನು ಒಂದು ಆಡುಗಳ ಪ್ರದರ್ಶನವನ್ನು ಸಂದರ್ಶಿಸಲಿ. ಪ್ರಪಂಚದಲ್ಲಿ ಯಾವ ದೇಶದವರೇ ಆಗಲಿ ತಮ್ಮ ಆಡುಗಳ ತಳಿಯನ್ನು ಉತ್ತಮಪಡಿಸಬೇಕೆಂದು ಇಚ್ಚೆಯುಳ್ಳವರಾದರೆ ಅವರು ಬ್ರಿಟನ್ನಿಗೆ ತಮ್ಮ ಆಡುಗಳನ್ನು ಕಳುಹಿಸಿಕೊಡಬೇಕು. ಗಾಂಧಿಯವರನ್ನು ಕಾಣಲು ನಿಮ್ಮ ಪೈಕಿ ಕೆಲವರು ನನಗೆ ಸಹಾಯ ಮಾಡುವಿರೆಂದು ನಾನು ಬಯಸುತ್ತೇನೆ. ಆಡುಗಳ ಜೊತೆಯಲ್ಲಿ ಗಾಂಧಿಯವರ ಭಾವಚಿತ್ರವನ್ನು ತೆಗೆಯಲು ಇಷ್ಟಪಡುತ್ತೇನೆ.

ಈ ಪ್ರಚಾರದ ಮೇರೆಗೆ ಹಾಲು ಕೊಡುತ್ತಿದ್ದ ಉತ್ತಮ ಆಡುಗಳು ಲಂಡನ್ನಿಗೆ ಆಗಮಿಸಿದುವು. ಆಡಿನ ಹಾಲಿನ ವ್ಯವಸ್ಥೆ ಮಾಡಿದ ಐಲಿಂಗ್‌ಟನ್ ಡೈರಿ ಫಾರಂನವರು ಅಲ್ಲಿನ ರಾಯಲ್ ಅಗ್ರಿಕಲ್ಚರಲ್ ಹಾಲ್‌ನಲ್ಲಿ ಜನರು ಕಾಣಲೆಂದು ಆಡುಗಳ ಪ್ರದರ್ಶನವನ್ನೇ ಏರ್ಪಡಿಸಿದರು. ಅಲ್ಲಿನ ನಾಗರಿಕರಿಗೆ ಮೇಕೆ ಎಂಬುದು ಅಪರೂಪದ ಪ್ರಾಣಿಯಾಗಿದ್ದು, ಲಂಡನ್‌ನಲ್ಲಿ ನಡೆದ ಪ್ರಥಮ ಪ್ರದರ್ಶನವಾಗಿತ್ತು. ಈ ಪ್ರದರ್ಶನಕ್ಕೆ ಮಹಾತ್ಮರನ್ನು ವ್ಯವಸ್ಥಾಪಕರು ಆಹ್ವಾನಿಸಿದರು. ಪ್ರದರ್ಶನದ ಕೊನೆಯ ದಿವಸವಾದ 23–10–1931 ರಂದು ಗಾಂಧೀಜಿ ಆಗಮಿಸಿ ಎಲ್ಲಾ ಆಡುಗಳನ್ನು ವೀಕ್ಷಿಸಿದ ನಂತರ "ಭರತ ಖಂಡದಲ್ಲಿ ಅರೆ ಹೊಟ್ಟೆಯುಂಡು ಜೀವಿಸುತ್ತಿರುವ ಜನರಂತೆಯೇ ಭಾರತದ ಆಡುಗಳೂ ಬಡಕಲು. ಇಲ್ಲಿನ ಆಡುಗಳಂತೆ ಪುಷ್ಟಿಯಿಲ್ಲ" ಮುಂತಾಗಿ ತಿಳಿಸಿದರು. ಅಂದು ಮಹಾತ್ಮರ



ಸಂಗಡ ಮದನಮೋಹನ ಮಾಳವೀಯ, ಮಹದೇವ ದೇಸಾಯಿ, ಮೀರಾ ಮುಂತಾದವರು ಇದ್ದರು ವ್ಯವಸ್ಥಾಪಕರು ಗಾಂಧಿಯವರಿಗೆ ಈ ಪ್ರದರ್ಶನದಲ್ಲಿ ಪ್ರಥಮ ಬಹುಮಾನ ಗಳಿಸಿದ ಆಡನ್ನು ತೋರಿಸುತ್ತಾ "ಈ ಆಡಿನ ಹಾಲನ್ನೇ ನೀವು ಕುಡಿಯುತ್ತಿರುವುದು" ಎಂದು ತಿಳಿಸಿದರು. ಮಹಾತ್ಮರು ಸಂತೋಷಪಟ್ಟರು. ನಂತರ ಆ ಆಡಿಗೆ 'ಮಹಾತ್ಮಗಾಂಧಿ' ಎಂದು ಹೆಸರಿಟ್ಟರು. ಮತ್ತೊಂದು ಆಡಿಗೆ ಸಮಾಧಾನಕರ ಬಹುಮಾನ ದೊರೆಯಿತು.

ಒಮ್ಮೆ ಚಿಕ್ಕಮಗಳೂರಿಗೆ ಗಾಂಧೀಜಿ ಬಂದಿದ್ದಾಗ ಅಲ್ಲಿನ ಉತ್ಸಾಹಿಗಳು ಒಂದು ಕೊಡದ ತುಂಬ ಆಡಿನ ಹಾಲನ್ನು ಶೇಖರಿಸಿದ್ದರು. ನನಗೆ ಬೇಕಾದುದು ಒಂದು ಹೊತ್ತಿಗೆ ಒಂದು ಲೋಟ ಹಾಲು. ಇಷ್ಟೊಂದು ಹಾಲು ವ್ಯರ್ಥವಲ್ಲ" ಎಂದು ಗಾಂಧಿ ನೊಂದು ನುಡಿದರು. ಗಾಂಧೀಜಿ ಜೈಲಿನಲ್ಲಿದ್ದಾಗಲೂ ಆಡಿನ ಹಾಲನ್ನೇ ಒದಗಿಸಲಾಗುತ್ತಿತ್ತು. ಈ ರೀತಿ ಮಹಾತ್ಮರು ಎಲ್ಲಿಗೆ ಹೋಗಲಿ ಅಲ್ಲಿ ಆಡಿನ ಹಾಲಿನ ವಿಶೇಷ ವ್ಯವಸ್ಥೆ ಆಗುತ್ತಿತ್ತು.

ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ಆಡಿನ ಹಾಲನ್ನು ರೈತಾಪಿ ಜನಗಳು ಬಳಸುತ್ತಿದ್ದು, ತುಸು ಒಗರೆನಿಸಿದರೂ ಆರೋಗ್ಯಕ್ಕೆ ಉತ್ತಮ. ವೈದ್ಯಕೀಯ ಪ್ರಯೋಜನವನ್ನು ಹೊಂದಿದೆ. ○





# ಅಶೋಕ ಮೆಹತಾ ಮತ್ತು ಮಹಾತ್ಮಾ ಗಾಂಧಿ

- ಬಾಪು ಹೆದ್ದೂರ ಶೆಟ್ಟಿ

**ಭಾ**ರತದ ಸಮಾಜವಾದಿ ಆಂದೋಲನದ ಮೇಲೆ ಮಹಾತ್ಮಗಾಂಧಿ ಪ್ರಭಾವ ಬೀರಿದ ಹಾಗೆ ಸಮಾಜವಾದಿ ಆಂದೋಲನ ಕೂಡ ಮಹಾತ್ಮಗಾಂಧಿಯವರ ಮೇಲೆ ತನ್ನ ಪ್ರಭಾವವನ್ನು ಬೀರಿತ್ತು. ಮಹಾತ್ಮ ಗಾಂಧಿಯವರ ಮೇಲೆ ಸಮಾಜವಾದಿ ಆಂದೋಲನ ಪ್ರಭಾವ ಬೀರಲು ಭಾರತದ ಸಮಾಜವಾದಿ ಆಂದೋಲನದ ಒಬ್ಬ ಪ್ರಮುಖ ಮುಖಂಡ ಅಶೋಕ ಮೆಹತಾ ಹಾಗೂ ಅವರು ಪ್ರತಿಪಾದಿಸಿದ ಜನತಾಂತ್ರಿಕ ಸಮಾಜವಾದ ಕಾರಣವಾಗಿತ್ತು. ಆದರೆ ಮಹಾತ್ಮಾ ಗಾಂಧಿ ಪ್ರಾರಂಭಿಸಿದ ಆಂದೋಲನಗಳಲ್ಲಿ ಭಾಗವಹಿಸಿದರೂ, ಅಶೋಕ ಮೆಹತಾ ಮಹಾತ್ಮಾಗಾಂಧಿಯವರಿಂದ ಪ್ರಭಾವಿತ ರಾದರೇ ಹೊರತು ಅವರ ವಿಚಾರಗಳಿಂದ ಪ್ರಭಾವಿತರಾಗಲಿಲ್ಲ.

ತಮ್ಮ ಕಾಲೇಜಿನ ವಿದ್ಯಾಭ್ಯಾಸದ ಅವಧಿಯಲ್ಲಿ ಅಶೋಕ ಮೆಹತಾ ಅಂದು ಮುಂಬಯಿಯಲ್ಲಿ ಹೆಸರಾಂತ ಸಮಾಜವಾದಿ ಮುಖಂಡರಾಗಿದ್ದ ಯೂಸುಫ ಮೆಹೆರಲಿಯವರಿಂದ ಪ್ರಭಾವಿತರಾಗಿದ್ದರು. ಬಹುಶಃ ಇದರಿಂದಾಗಿಯೇ ಅವರು ತಮ್ಮ ವಿದ್ಯಾರ್ಥಿ ಜೀವನದ ಅವಧಿಯಲ್ಲಿಯೇ ಕಾರ್ಲಮಾರ್ಕ್ಸ, ರಾಬರ್ಟ್ ಓವೆನ್, ಸ್ಯಾಂಸೀಮೋಂ, ಶಾರ್ಲ ಫೂರಿಯೆ, ಪ್ರೋಧೋಂ ಮೊದಲಾದ ಸಮಾಜವಾದಿಗಳ ಸಾಹಿತ್ಯವನ್ನು ಓದಿಕೊಂಡಿದ್ದರು, ಅವರ ವಿಚಾರಗಳಿಂದ ಪರಿಚಿತರಾಗಿದ್ದರು.

ತಮ್ಮ ಕಾಲೇಜಿನ ವಿದ್ಯಾಭ್ಯಾಸವನ್ನು ತ್ಯಜಿಸಿ ಅಶೋಕ ಮೆಹತಾ ಅವರು, ಮಹಾತ್ಮಾ ಗಾಂಧಿ 1932ರಲ್ಲಿ ಪ್ರಾರಂಭಿಸಿದ್ದ ನಾಗರಿಕ ಅಸಹಕಾರ ಚಳುವಳಿಯಲ್ಲಿ ಭಾಗವಹಿಸಿ ಬಂಧಿತರಾಗಿದ್ದರು. ಎರಡೂವರೆ ವರ್ಷ ನಾಸಿಕದ ಜೈಲಿನಲ್ಲಿ ಜೈಲುವಾಸ ಅನುಭವಿಸಿದರು. ಆಗ ಅಶೋಕ ಮೆಹತಾ ಅವರಿಗೆ ಬರಿ 21 ವರ್ಷ ವಯಸ್ಸು. ನಾಸಿಕದ ಜೈಲಿನಲ್ಲಿ ಅವರು ಮಾರ್ಕ್ಸವಾದದಿಂದ ಪ್ರಭಾವಿತರಾಗಿದ್ದ ಜಯಪ್ರಕಾಶ ನಾರಾಯಣ, ಅಚ್ಯುತ ಪಟವರ್ಧನ, ನಾನಾಸಾಹೇಬ ಗೋರೆ ಮೊದಲಾದವರೊಂದಿಗೆ ಒಡನಾಟ ಹೊಂದಿದ್ದರು. ಇವರೆಲ್ಲ ಮಹಾತ್ಮ ಗಾಂಧಿ ಪ್ರಾರಂಭಿಸಿದ ಚಳುವಳಿಯಲ್ಲಿ ಭಾಗವಹಿಸಿ ಜೈಲು ಸೇರಿದ್ದರು. ಆದರೆ ಬಹುಶಃ ಅಚ್ಯುತಪಟವರ್ಧನ ಒಬ್ಬರನ್ನು ಬಿಟ್ಟರೆ ಉಳಿದವರೆಲ್ಲ ಮಹಾತ್ಮ ಗಾಂಧಿಯವರ ವಿಚಾರಗಳನ್ನು ಒಪ್ಪುತ್ತಿರಲಿಲ್ಲ. ಅಷ್ಟೇ ಅಲ್ಲ, ಅವರ ವಿಚಾರಗಳನ್ನು ಅವೈಜ್ಞಾನಿಕವೆಂದು ಮೂದಲಿಸುತ್ತಿದ್ದರು ಕೂಡ. ಆದರೆ ಇಂತಹ ಮಾರ್ಕ್ಸವಾದಿಗಳೊಂದಿಗೆ ಅಷ್ಟು ಕಾಲ ಅಶೋಕ ಮೆಹತಾ ಮಾರ್ಕ್ಸವಾದದಿಂದ ಪ್ರಭಾವಿತರಾಗಲಿಲ್ಲ.

ನಂತರ 1941ರಲ್ಲಿ ಮಹಾತ್ಮಾ ಗಾಂಧಿ ಸಾರ್ವಜನಿಕ ಸತ್ಯಾಗ್ರಹದ ಬದಲು ವೈಯಕ್ತಿಕ ಸತ್ಯಾಗ್ರಹಕ್ಕೆ ಕರೆ ನೀಡಿದ್ದರು. ಮಹಾತ್ಮಾಗಾಂಧಿ ಆಯ್ಕೆ ಮಾಡಿದ ಸತ್ಯಾಗ್ರಹಿಗಳು ಈ ವೈಯಕ್ತಿಕ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು. ವಿನೋಬಾ ಭಾವೆಯವರನ್ನು ಮಹಾತ್ಮಾ ಗಾಂಧಿ ಮೊದಲ ಸತ್ಯಾಗ್ರಹಿಯನ್ನಾಗಿ ಆಯ್ಕೆ ಮಾಡಿದ್ದರು. ವಿಶಾಲ ಸಾಮೂಹಿಕ ಹೋರಾಟದ ಕಾಲ ಸನ್ನಿಹಿತವಾಗಿದೆ ಎಂದು ನಂಬಿದ್ದ ಜಯಪ್ರಕಾಶ ನಾರಾಯಣ ಅವರು ಈ ವೈಯಕ್ತಿಕ ಸತ್ಯಾಗ್ರಹದ ಕಲ್ಪನೆಯನ್ನು ವಿರೋಧಿಸಿದ್ದರು. ಆದರೆ ಅಶೋಕ ಮೆಹತಾ ಮಾತ್ರ ತಾವೂ ಸತ್ಯಾಗ್ರಹಿಯಾಗಿ ಆಯ್ಕೆಯಾಗಿ ವೈಯಕ್ತಿಕ ಸತ್ಯಾಗ್ರಹದಲ್ಲಿ ಭಾಗವಹಿಸಿ ಮತ್ತೇ ಒಂದೂವರೆ ವರ್ಷ ಜೈಲುವಾಸ ಅನುಭವಿಸಿದರು.

ಜೈಲಿನಲ್ಲಿ ಮಾರ್ಕ್ಸವಾದಿಗಳೊಂದಿಗೆ ಒಡನಾಡಿದರೂ ಅವರ ಪ್ರಭಾವಕ್ಕೆ ಒಳಗಾಗದಿದ್ದ ಅಶೋಕ ಮೆಹತಾ, ಗಾಂಧಿಯವರ ಸತ್ಯಾಗ್ರಹಗಳಲ್ಲಿ ಭಾಗವಹಿಸಿ ಜೈಲುವಾಸ ಅನುಭವಿಸಿದರೂ ಅವರ ಪ್ರಭಾವಕ್ಕೂ ಒಳಗಾಗದೇ ತಮ್ಮ ಜನತಾಂತ್ರಿಕ ಸಮಾಜವಾದಿ ವಿಚಾರಗಳಿಗೇ ಕಟ್ಟುಬಿದ್ದು ತಮ್ಮತನವನ್ನು ಉಳಿಸಿಕೊಂಡರು. ಆದರೆ ಮಹಾತ್ಮಾ ಗಾಂಧಿಯವರ ಅಥವಾ ಅವರ ಸಿದ್ಧಾಂತಗಳ ಬಗೆಗಿನ ಅಶೋಕ ಮೆಹತಾ ಅವರ ಟೀಕೆ, ಇನ್ನಿತರ ಮಾರ್ಕ್ಸವಾದಿ ಸಮಾಜವಾದಿಗಳ ಟೀಕೆಯ ಹಾಗೆ ಕಟುವಾಗಿರಲಿಲ್ಲ. ಗಾಂಧೀಯನ್ನು ಅವರು ಕಾರ್ಲಮಾರ್ಕ್ಸ ಜೊತೆಗೆ ನಿಲ್ಲಿಸುತ್ತಾರೆ. ಒಬ್ಬ



ದ್ರಷ್ಟಾರ, ಒಬ್ಬ ತಾಳ್ಮೆ ಇಲ್ಲದ ಸುಧಾರಕ, ಮಾನವ ಜನಾಂಗ ತನ್ನ ಗತಿಯೊಂದಿಗೆ ಮುನ್ನಡೆಯುತ್ತದೆ ಎಂದು ಭಾವಿಸುತ್ತಾನೆ; ಮಣ್ಣಿನಿಂದ ಮಾಡಿದ ಸಾಮಾನ್ಯ ಮನುಷ್ಯರು, ಒಬ್ಬ ಗಾಂಧಿಗೆ ಅಥವಾ ಒಬ್ಬ ಮಾರ್ಕ್ಸನಿಗಿದ್ದ ಭಾವನಾ ತೀವ್ರತೆಯನ್ನು ಹೊಂದಿರುತ್ತಾರೆ ಎನ್ನುವುದು ಇತಿಹಾಸದ ಒಂದು ದೊಡ್ಡ ತಪ್ಪು. ಜಗತ್ತನ್ನೇ ಅಲುಗಾಡಿಸಿದ ಈ ಜನರಿಗಿದ್ದ ತೀವ್ರತೆ ನನಗೂ ನಿಮಗೂ ಇರುವುದಿಲ್ಲ ಎನ್ನುತ್ತಾರೆ ಅಶೋಕ ಮೆಹತಾ.

ಆದರೆ ಕಾಲ ಕಳೆದಂತೆ ಗಾಂಧೀ ಬಗೆಗಿನ ಅಶೋಕ ಮೆಹತಾ ಅವರ ಟೀಕೆ ಮೊದಲಿಗೆ ಮೆಚ್ಚುಗೆಯಾಗಿ ರೂಪಾಂತರಗೊಂಡು ನಂತರ ಹೊಗಳಿಕೆಯಾಗಿ ಪರ್ಯಾವಸಾನವಾಯಿತು. 1959ರಲ್ಲಿ ಬರೆದ ತಮ್ಮ 'ಸ್ಟಡೀಸ್ ಇನ್ ಸೋಷಲಿಜಂ' ಎಂಬ ಪುಸ್ತಕದಲ್ಲಿ ಅಶೋಕ ಮೆಹತಾ ತಮ್ಮೆಲ್ಲ ನಮ್ರತೆಯೊಂದಿಗೆ, ನಾನು 1934ರಲ್ಲಿ ಬರೆದ ನನ್ನ ಪ್ರಪ್ರಥಮ ಲೇಖನದಲ್ಲಿ ಗಾಂಧೀಜಿಯವರ ಶಾಸ್ತ್ರೀಯ ಯಥಾಸ್ಥಿತಿ ವಾದವನ್ನು ಪ್ರತಿಕ್ರಿಯಾವಾದಿ ಸ್ವಚ್ಛಂದತಾ ವಾದದೊಂದಿಗೆ ಗೊಂದಲಿಸಿಕೊಂಡಿದ್ದೆ, ಇದನ್ನು ಅರಿತುಕೊಳ್ಳಲು ನನಗೆ 20 ವರ್ಷಗಳು ಬೇಕಾದವು ಎಂದು ಹೇಳುತ್ತಾರೆ. 20 ವರ್ಷಗಳ ಈ ಅವಧಿಯಲ್ಲಿ ತಾವು ಗಾಂಧೀವಾದವನ್ನು ಸರಿಯಾಗಿ ಅರ್ಥ ಮಾಡಿಕೊಂಡಿರುವುದಾಗಿ ಅಶೋಕ ಮೆಹತಾ ಹೇಳುತ್ತಾರೆಯೇ ಹೊರತು ಅದರಿಂದ ಪ್ರಭಾವಿತರಾಗುವುದಿಲ್ಲ.

ಭಾರತದಲ್ಲಿ ಸ್ವಚ್ಛಂದತಾವಾದಿ ಪ್ರತಿಕ್ರಿಯೆ ಒಂದು ಮಹತ್ವದ ಅಂಶವಾಗಿತ್ತು, ಆದರೆ ಅದು ಅರ್ಥಶೂನ್ಯವೂ, ಭಾವುಕವೂ ಆಗಿತ್ತು ಎನ್ನುತ್ತಾರೆ ಅಶೋಕ ಮೆಹತಾ. ಮಹಾತ್ಮಾಗಾಂಧಿ ಅದಕ್ಕೊಂದು ಅರ್ಥವನ್ನು ಕಲ್ಪಿಸಿಕೊಟ್ಟರು. ಗಾಂಧಿಯವರಲ್ಲಿ ಅದು ಬರಿ ಭಾವುಕತೆಯಾಗಿ ಮಾತ್ರ ಉಳಿಯಲಿಲ್ಲ. ಅಶೋಕ ಮೆಹತಾ ಅವರ ಪ್ರಕಾರ ಮಹಾತ್ಮಾಗಾಂಧಿಯವರ ಸ್ವಚ್ಛಂದತಾವಾದವನ್ನು ಪಶ್ಚಿಮದ ಪೆಟಿ-ಬೈರ್ಷ್ವಾ ಸ್ವಚ್ಛಂದತಾ ವಾದಕ್ಕೊಂದು ವೈಶಿಷ್ಟ್ಯವನ್ನು ತಂದು ಕೊಟ್ಟಿದ್ದರು.

ಈ 20 ವರ್ಷಗಳಲ್ಲಿ ಪ್ರತಿಕ್ರಿಯಾವಾದಿ ಸ್ವಚ್ಛಂದವಾದಿಯಾಗಿದ್ದ, ಅಶೋಕ ಮೆಹತಾ ಅವರಿಗೆ ಉಟೋಪಿಯನ್ ಸಮಾಜವಾದದ ಸಾರಸಂಗ್ರಹ ವಾದರು. ತಮ್ಮ 'ಸ್ಟಡೀಸ್ ಇನ್ ಸೋಷಲಿಜಂ' ಎಂಬ ಪುಸ್ತಕದಲ್ಲಿ ಅಶೋಕ ಮೆಹತಾ ಏಷಿಯಾ ಭೂಖಂಡ ಉಟೋಪಿಯನ್ ವಿಚಾರಗಳೊಂದಿಗೆ ತಲ್ಲಣಗೊಳ್ಳುತ್ತಿದೆ. ಭಾರತದ ಬಗ್ಗೆ ಅಂತೂ ನಾವು ಈ ಮಾತನ್ನು ಅರಿವು ಹಾಗೂ ವಿಶ್ವಾಸಗಳೊಂದಿಗೆ ಹೇಳಬಹುದು. ಇಲ್ಲಿ ಒಂದು ಶತಮಾನಕ್ಕಿಂತ ಹೆಚ್ಚು ಅವಧಿಯಲ್ಲಿ ಹಲವಾರು ಉಟೋಪಿಯಾವಾದಿಗಳು ಬದುಕಿದ್ದರು ಹಾಗೂ ಕ್ರಿಯಾಶೀಲರಾಗಿದ್ದರು. ಅವರಲ್ಲಿ ಗಾಂಧಿ ಅತ್ಯಂತ ಶ್ರೇಷ್ಠರು. ಅವರಲ್ಲಿ ಉಟೋಪಿಯನ್‌ವಾದ ತನ್ನ ಸಾರಸಂಗ್ರಹದ ಅತ್ಯುತ್ತಮ ಶಿಖರವನ್ನು ಕಂಡಿತು ಎನ್ನುತ್ತಾರಲ್ಲದೇ ನಂತರ, ಗಾಂಧಿ ಹಾಗೂ ವಿನೋಬಾ ಇವರು ಬರಿ ಅಂಚಿನ ವಿದ್ಯಮಾನವಲ್ಲ, ಸಾಮಾಜಿಕ ಪ್ರಕ್ರಿಯೆಯಲ್ಲಿ ಒಂದು ಅಸಮ ವಿಲಕ್ಷಣವಲ್ಲ, ಅದರ ಇತ್ತೀಚಿನ ಇತಿಹಾಸದ ಕೇಂದ್ರ ಹಾಗೂ ಸಾಂದ್ರ, ಈ ಇಬ್ಬರು ಶ್ರೇಷ್ಠ ಭಾರತೀಯರಲ್ಲಿ ಉಟೋಪಿಯನ್ ಸಮಾಜವಾದಿ ಚಿಂತನೆ ತನ್ನ ಶಿಖರವನ್ನು ತಲುಪಿದೆ ಎನ್ನುತ್ತಾರೆ.

ಅಶೋಕ ಮೆಹತಾ ಅವರು ಮಹಾತ್ಮಾ ಗಾಂಧೀಯವರೊಂದಿಗೆ ಒಂದು ಉದ್ದೇಶದ ಸಾಮ್ಯವನ್ನು ಕಂಡರು. ಸಮಾಜವಾದಿ ಚಿಂತನೆಗೆ ಮಹಾತ್ಮಾ ಗಾಂಧಿ ನೀಡಿದ ಕೊಡುಗೆಯನ್ನು ಅಶೋಕ ಮೆಹತಾ ವಿವರಿಸುತ್ತಾರೆ. ಸಮಾಜವಾದ ಪರಿಹರಿಸಬೇಕೆನ್ನುವ ಕಠಿಣ ಸಾಮಾಜಿಕ-ಆರ್ಥಿಕ ಸಮಸ್ಯೆಗಳನ್ನು ಗಾಂಧಿ ಮತ್ತು ವಿನೋಬಾ ಪರಿಹರಿಸದೇ ಇರಬಹುದು, ಆದರೆ ಅವುಗಳ ಪರಿಹಾರಕ್ಕೆ ಅವರು ಒಂದು ಹೊಸ ಒಳನೋಟವನ್ನು ಒದಗಿಸಿದ್ದಾರೆ, ಒಂದು ಹೊಸ ವಿಧಾನಕ್ಕೆ ಪ್ರೇರಣೆ ನೀಡಿದ್ದಾರೆ, ದಾರಿ ಹಾಗೂ ಗುರಿಗಳ ನಡುವೆ ಒಂದು ಜೈವಿಕ ಸಂಬಂಧವನ್ನು ಏರ್ಪಡಿಸಿದ್ದಾರೆ. ಉಟೋಪಿಯನ್ ಸಮಾಜವಾದಿಯೇ ಆಗಿರಲಿ, ವೈಜ್ಞಾನಿಕ ಸಮಾಜವಾದಿಯೇ ಆಗಿರಲಿ, ಎಲ್ಲಾ ಸಮಾಜವಾದಿಗಳ ಅಂತಿಮ ಗುರಿಯಾದ ತಾತ್ವಿಕ ಅನಧಿಪತ್ಯವಾದಕ್ಕೆ ಅವರೊಂದಿಗೆ ಸದಾಕಾಲವೂ ಅರಳುತ್ತಿರುವ ವಿಧಾನವನ್ನು ಒದಗಿಸಿದ್ದಾರೆ.

ಮಹಾತ್ಮಾ ಗಾಂಧಿಯವರ ಸಿದ್ಧಾಂತಗಳ ಬಗೆಗಿನ ಅಶೋಕ ಮೆಹತಾ ಅವರ ಈ ಮೆಚ್ಚುಗೆ ಅವರನ್ನು ಅವರ ಜನತಾಂತ್ರಿಕ ಸಮಾಜವಾದದ ನಂಬಿಕೆಯಿಂದ ವಿಚಲಿತಗೊಳಿಸಲಿಲ್ಲ. ಸಮಾಜವಾದದ ಆದರ್ಶಗಳಾದ ಸ್ವಾತಂತ್ರ್ಯ, ಸಮಾನತೆ ಹಾಗೂ ಸಹೋದರತೆಗಳ ಕಡೆಗಿನ ತಮ್ಮ ಸೈದ್ಧಾಂತಿಕ ಪಯಣದಲ್ಲಿ, ಜಯಪ್ರಕಾಶ ನಾರಾಯಣ ಅವರು, ಗಾಂಧೀವಾದವನ್ನು ಮುಂದಿನ



ಮೈಲಿಗಲ್ಲು ಎಂದು ಪರಿಗಣಿಸಿದರೆ ಅಶೋಕ ಮೆಹತಾ ಅವರು ಗಾಂಧಿಯವರ ವಿಚಾರಗಳ ಬಗ್ಗೆ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಲೂ ಅವರೊಂದಿಗಿನ ತಮ್ಮ ಭಿನ್ನಾಭಿಪ್ರಾಯವನ್ನು ಉಳಿಸಿಕೊಂಡರು. ಜನತಾಂತ್ರಿಕ ಸಮಾಜವಾದದ ಬಗೆಗಿನ ತಮ್ಮ ನಿಲುವಿನ ಬಗ್ಗೆ ಅಚಲರಾಗಿದ್ದರು.

ಮಹಾತ್ಮಾಗಾಂಧಿ ಬೃಹತ್ ಉತ್ಪಾದನಾ ವ್ಯವಸ್ಥೆಯನ್ನು ವಿರೋಧಿಸಿದ್ದರು. ಅವರು ಸಾಮೂಹಿಕ ಉತ್ಪಾದನಾ ವ್ಯವಸ್ಥೆಯನ್ನು ಬಯಸಿದ್ದರು. ಇದರ ಅರ್ಥ ಸಾಧ್ಯವಿದ್ದಲ್ಲೆಲ್ಲ ಸಣ್ಣ ಯಂತ್ರಗಳ ಮೂಲಕ ಉತ್ಪಾದನೆಯನ್ನು ಮಾಡುವುದೇ ಆಗಿತ್ತು. ಇದರಿಂದಾಗಿ ನಿರುದ್ಯೋಗ ಹಾಗೂ ಅರೆಕಾಲಿಕ ಉದ್ಯೋಗದಿಂದ ಬಳಲುತ್ತಿದ್ದ ಲಕ್ಷಾಂತರ ಜನರಿಗೆ ಉದ್ಯೋಗಾವಕಾಶಗಳು ದೊರಕುತ್ತವೆ ಎನ್ನುವುದು ಗಾಂಧಿಯವರ ವಾದವಾಗಿತ್ತು. ಚರಕ ಮಹಾತ್ಮಾ ಗಾಂಧಿಯವರ ಆರ್ಥಿಕ ಸಿದ್ಧಾಂತದ ಪ್ರತೀಕವಾಗಿತ್ತು. ವಿತರಣೆಯು ಉತ್ಪಾದನೆಯ ಅವಿಭಾಜ್ಯ ಅಂಗವಾಗಿರಬೇಕೆಂಬುದು ಗಾಂಧಿಯವರ ಅಭಿಪ್ರಾಯವಾಗಿತ್ತು.

ಅಶೋಕ ಮೆಹತಾ ಅವರ ಅಭಿಪ್ರಾಯ ಭಿನ್ನವಾಗಿತ್ತು. ಯಂತ್ರೋತ್ಪಾದನೆಯಿಂದಾಗಿ ಭಾರತದ ಗ್ರಾಮೋದ್ಯೋಗಗಳು ನಷ್ಟವಾಗಿರುವುದರ ಬಗ್ಗೆ ಅಶೋಕ ಮೆಹತಾ ಅವರಿಗೆ ಬೇಸರವಿತ್ತು. ಆದರೆ ಯಾವುದೇ ವಿನಾಶಕಾರಿ ಬದಲಾವಣೆ ಎರಡು ರೀತಿಯ ಪ್ರತಿಕ್ರಿಯೆಗಳನ್ನು ಹುಟ್ಟು ಹಾಕುತ್ತದೆ. ಮೊದಲನೆಯದು, ಬದಲಾವಣೆಯನ್ನು ಅರ್ಥ ಮಾಡಿಕೊಂಡು ಅದನ್ನು ತನ್ನ ಅವಶ್ಯಕತೆಗಳಿಗನುಗುಣವಾಗಿ ಸಂಯೋಜಿಸಿ ಕೊಳ್ಳುವುದು. ಇನ್ನೊಂದು, ಬದಲಾವಣೆಯಿಂದ ಭಯಭೀತವಾಗಿ ಗತಕಾಲಕ್ಕೆ ಮರಳಬಯಸುವುದು ಎಂದು ಅವರು ಹೇಳುತ್ತಿದ್ದರು. ಇದರಲ್ಲಿ ಎರಡನೆಯದು ಪ್ರಾಯಶಃ ಗ್ರಾಮೋದ್ಯೋಗಗಳ ಮೂಲಕ ಉತ್ಪಾದನೆ ಮಾಡುವುದರ ಮೇಲೆ ಒತ್ತು ಕೊಡುವ ಮಹಾತ್ಮಾ ಗಾಂಧಿಯವರ ಸಾಮೂಹಿಕ ಉತ್ಪಾದನೆಯ ಸಿದ್ಧಾಂತವನ್ನುದ್ದೇಶಿ ಹೇಳಿದ್ದು. ಭಾರತ ಯಂತ್ರೋತ್ಪಾದನೆಯ ಪ್ರಯೋಜನಗಳಿಂದ ವಂಚಿತವಾಗಬಾರದು ಎಂದು ಅಶೋಕ ಮೆಹತಾ ಬಯಸಿದರು. ಯಂತ್ರೋತ್ಪಾದನೆಯೂ ಸೇರಿದಂತೆ, ಬಡತನವನ್ನು ಕಡಿಮೆ ಮಾಡುವಂತೆ ವಸ್ತುಗಳನ್ನು ಉತ್ಪಾದಿಸುವ ಯಾವುದೇ ವಿಧಾನವನ್ನು ಬಳಸಬೇಕು ಎನ್ನುವುದು ಅವರ ವಾದವಾಗಿತ್ತು. ಹಾಗೆಯೇ ಮನುಷ್ಯ ತನ್ನ ಜೀವನೋಪಾಯಕ್ಕಾಗಿ ಕನಿಷ್ಟ ಎಂಟು ಗಂಟೆಗಳ ಕಾಲ ದುಡಿಯಬೇಕು, ಇದು ಅವಶ್ಯಕ ಎನ್ನುವುದು ಗಾಂಧಿಯವರ ವಾದವಾಗಿತ್ತು. ಆದರೆ ಯಂತ್ರೋತ್ಪಾದನೆಯನ್ನು ಯಾವ ರೀತಿ ವ್ಯವಸ್ಥಿತಗೊಳಸಬೇಕು ಎಂದರೆ, ಎಲ್ಲರಿಗೂ ದುಡಿಮೆ ಹಾಗೂ ಬಿಡುವುಗಳ ಸಮನಾಗಿ ವಿತರಣೆಯಾಗುವಂತಿರಬೇಕು ಎನ್ನುವುದು ಅಶೋಕ ಮೆಹತಾ ಅವರ ಅಭಿಪ್ರಾಯವಾಗಿತ್ತು.

ಭಾರತದ ಗ್ರಾಮಗಳು ಸ್ವಾವಲಂಬಿಗಳಾಗಿರಬೇಕು ಎನ್ನುವುದು ಮಹಾತ್ಮಾ ಗಾಂಧಿಯವರ ವಾದವಾಗಿತ್ತು. ಆದರೆ ಗ್ರಾಮಗಳಿಂದ ಮಾರುಕಟ್ಟೆಗೆ ಬರುವ ಅತಿರಿಕ್ತ ಉತ್ಪಾದನೆ ಹೆಚ್ಚು ಮುಖ್ಯ. ಇಂತಹ ಅತಿರಿಕ್ತ ಉತ್ಪಾದನೆಯೇ ನಗರೀಕರಣ ಹಾಗೂ ಔದ್ಯೋಗೀಕರಣದ ಅವಶ್ಯಕತೆಗಳನ್ನು ಪೂರೈಸುತ್ತದೆ ಎನ್ನುವುದು ಅಶೋಕ ಮೆಹತಾ ಅವರ ಅಭಿಪ್ರಾಯವಾಗಿತ್ತು. ಈ ದೃಷ್ಟಿಯಿಂದ ಸರ್ವೋದಯವಾದಿಗಳ ವಿಚಾರ ಮೂಲಭೂತವಾಗಿ ದೋಷಪೂರಿತವಾಗಿದೆ. ಗ್ರಾಮಗಳು ಸ್ವಾವಲಂಬಿಗಳಾದರೆ, ಅವು ತನ್ನ ಅವಶ್ಯಕತೆಗಳನ್ನು ಮಿತಗೊಳಿಸಿಕೊಂಡರೆ, ನಗರಗಳ ಜನರ ಮುಂದೆ ಭೀಕರ ಬಿಕ್ಕಟ್ಟು ಉದ್ಭವಿಸುತ್ತದೆ. ಹೆಚ್ಚುತ್ತಿರುವ ಜನಸಂಖ್ಯೆ ಮತ್ತು ಬಡತನಗಳ ಸಮಸ್ಯೆಗಳನ್ನು ಎದುರಿಸಲು ಔದ್ಯೋಗೀಕರಣವನ್ನು ಮತ್ತು ಯಾಂತ್ರೀಕರಣವನ್ನು ಹೆಚ್ಚು ಮಾಡಬೇಕು. ಸಮಾಜವಾದದ ಸಾರ ಇರುವುದು ಅರ್ಥ ವ್ಯವಸ್ಥೆಯ ವಿಕೇಂದ್ರಿಕೃತ ವಿಭಾಗದಲ್ಲಿರುವ ಬಂಡವಾಳದ ಕೊರತೆಯನ್ನು ಉತ್ತಮ ಸಂಘಟನೆ, ಸಹಕಾರ ಹಾಗೂ ಸಾಮಾಜಿಕ ಅರಿವುಗಳ ಮೂಲಕ ಪರಿಹರಿಸುವುದರಲ್ಲಿಯೇ ಎನ್ನುವುದು ಅಶೋಕ ಮೆಹತಾ ಅವರ ಅಭಿಪ್ರಾಯವಾಗಿತ್ತು. ಗ್ರಾಮಗಳು ಆಡಳಿತದ ಹಾಗೂ ಅಭಿವೃದ್ಧಿಯ ಘಟಕಗಳಾಗಬೇಕು ಎನ್ನುವುದು ಮಹಾತ್ಮಾ ಗಾಂಧಿಯವರ ವಿಚಾರವಾಗಿತ್ತು. ಆದರೆ ಗ್ರಾಮಗಳು ಆರ್ಥಿಕವಾಗಿ, ಆಡಳಿತ ಹಾಗೂ ಅಭಿವೃದ್ಧಿಗಳ ಎರಡೂ ದೃಷ್ಟಿಯಿಂದ, ಕಾರ್ಯಸಾಧ್ಯವಾದ ಘಟಕಗಳಾಗುವುದು ಸಾಧ್ಯವಿಲ್ಲದೇ ಇದ್ದುದರಿಂದ ಅಶೋಕ ಮೆಹತಾ ಅವರು ಮಂಡಲ ಪಂಚಾಯತಿಯ ಪರಿಕಲ್ಪನೆಯನ್ನು ಪ್ರತಿಪಾದಿಸಿದರು. ಹಳ್ಳಿಗಳ ಒಂದು ಸಮೂಹದ ಮಧ್ಯದಲ್ಲಿರುವ ಗ್ರಾಮವು ಸುತ್ತಮುತ್ತಲಿನ ಗ್ರಾಮಗಳು ಪ್ರತಿಸ್ಪಂದಿಸುವಂತಹ, ಪ್ರತಿಕ್ರಿಯಿಸುವಂತಹ



ಹಾಗೂ ಅದರ ಮೂಲಕ ಆಧುನಿಕ ಸೌಲಭ್ಯಗಳು ಹೊರಸೂಸುವಂತಹ, ಒಂದು ಕೇಂದ್ರಬಿಂದುವಾಗಿ ಹೊರಹೊಮ್ಮುವುದು ಅಭಿವೃದ್ಧಿ ಹಾಗೂ ಪ್ರಗತಿಯ ಒಂದು ಸಮರ್ಪಕ ಮಾದರಿಯಾಗಬಹುದಾಗಿದೆ ಎನ್ನುವುದು ಅಶೋಕ ಅವರ ಪ್ರತಿಪಾದನೆಯಾಗಿತ್ತು.

1947ರ ಮೇ 6ರಂದು ಅಶೋಕ ಮೆಹತಾ ಹಾಗೂ ಶ್ರೀಮತಿ ಅರುಣಾ ಅಸಫ ಅಲಿಯವರು ಮಹಾತ್ಮಾ ಗಾಂಧಿಯವರನ್ನು ಭೇಟಿಯಾಗಿದ್ದರು. ಅಂದಿನ ಜ್ವಲಂತ ಸಮಸ್ಯೆಯಾಗಿದ್ದ ಭಾರತದ ವಿಭಜನೆಯ ಬಗ್ಗೆ ಚರ್ಚಿಸುವುದು ಅವರ ಉದ್ದೇಶವಾಗಿತ್ತು. ಈ ಮಾತುಕತೆಯ ಸಂದರ್ಭದಲ್ಲಿಯೇ ಮಹಾತ್ಮಾ ಗಾಂಧಿ ಹೇಳಿದ್ದರು: ನೀವೆಲ್ಲ ಹುಟ್ಟುವುದಕ್ಕಿಂತ ಮೊದಲು ನಾನು ಸಮಾಜವಾದಿಯಾಗಿದ್ದೆ. ನೀವೆಲ್ಲ ಆರಾಮ ಕುರ್ಚಿಯ ಸಮಾಜವಾದಿಗಳು. ಭಾರತದಲ್ಲಿ ಎಲ್ಲರಿಗೂ ಒಂದು ಮೋಟಾರು ಕಾರು ಹಾಗೂ ಒಂದು ಬಂಗಲೆಯನ್ನು ಕೊಡುವುದು ನಿಮ್ಮ ಆದರ್ಶ. ಅದು ಆಗುವವರೆಗೂ ನೀವು ನಿಮ್ಮ ಯಾವುದೇ ಸೌಲಭ್ಯಗಳನ್ನು ತ್ಯಾಗ ಮಾಡದೇ ಈಗ ಬದುಕುತ್ತಿರುವ ಹಾಗೆಯೇ ಬದುಕುತ್ತೀರಿ. ಆದರೆ ನಾನು ಅತ್ಯಂತ ಬಡವನ, ಅತ್ಯಂತ ಕೆಳಗಿನವನ ಸ್ತರದಲ್ಲಿ ಇಂದೇ, ಈಗಲೇ, ಬದುಕಬೇಕೆಂದು ಬಯಸುತ್ತೇನೆ. ನನ್ನ ಸಮಾಜವಾದ ಇಂದಿನದಲ್ಲ. ನಾನು ದಕ್ಷಿಣ ಆಫ್ರಿಕೆಯಲ್ಲಿರುವಾಗಿನಿಂದಲೇ ಸಮಾಜವಾದವನ್ನು ಬದುಕಲು ಪ್ರಾರಂಭಿಸಿದೆ. ಆಗ ಕೂಡ ಹಲವಾರು ಲೇಬರ್ ಪಕ್ಷದ ತಥಾಕಥಿತ ಸಮಾಜವಾದಿಗಳು ತಮ್ಮ ಕೊಳಕು ಕೆಂಪು ಟೈಗಳನ್ನು ಧರಿಸಿಕೊಂಡು, ನಾನು ಅವರೊಂದಿಗೆ ಸೇರಿಸಿಕೊಳ್ಳಬೇಕೆಂದು ಆಹ್ವಾನಿಸುತ್ತಿದ್ದರು. ಆದರೆ ನಂತರ ಅವರೇ ನನ್ನೊಡನೆ ಸೇರಿಕೊಂಡರು. ಯಾಕೆಂದರೆ ನಿಜವಾದ ಸಮಾಜವಾದ ಅಹಿಂಸೆಯನ್ನು ಆಧರಿಸಿರುತ್ತದೆ ಎನ್ನುವುದನ್ನು ಅವರು ಕಂಡುಕೊಂಡರು.

ಆದರೆ ದೇಶದಲ್ಲಿ ತಾಂಡವವಾಡುತ್ತಿದ್ದ ಕೋಮು ದಳ್ಳುರಿಯೊಂದಿಗೆ ಹೋರಾಡಲು ತಮ್ಮೊಂದಿಗೆ ಸೇರಿಕೊಳ್ಳಬೇಕೆಂದು ಮಹಾತ್ಮಾಗಾಂಧಿಯವರು ಅಶೋಕ ಮೆಹತಾ ಹಾಗೂ ಇನ್ನಿತರ ಸಮಾಜವಾದಿಗಳನ್ನು ಆಹ್ವಾನಿಸಿದರು. ನೀವು ಹಾಗೂ ನಿಮ್ಮ ಪ್ರಭಾವವಲಯದಲ್ಲಿರುವವರು ದೇಶದಲ್ಲಿ ಅಹಿಂಸೆಯ ವಾತಾವರಣವನ್ನು ಸೃಷ್ಟಿಸುವಲ್ಲಿ ನನಗೆ ಸಹಾಯ ಮಾಡಬೇಕು. ನೀನು ಈ ವಿಷಯದಲ್ಲಿ ನನ್ನೊಟ್ಟಿಗಿರುವುದು ನನಗೆ ಸಂತೋಷ ತರುತ್ತದೆ ಎಂದು ಹೇಳಿದರು.

ಆದರೆ ಅಶೋಕ ಮೆಹತಾ ಮಹಾತ್ಮಾ ಗಾಂಧಿಯವರೊಂದಿಗೆ ಇರಲಿಲ್ಲ ಎನ್ನುವುದು ಅವರಿಗೆ ಗೊತ್ತಿತ್ತು. ಆದುದರಿಂದಲೇ ಈಗ ಹೇಳಿ, ನಿಮ್ಮಲ್ಲಿ ಎಷ್ಟು ಜನ ನನ್ನ ಜೊತೆ ಇದ್ದೀರಿ. ಅರುಣಾ ನನ್ನ ಜೊತೆಗಿದ್ದಾರೆಯೇ? ಅಶೋಕ ಹಾಗೂ ಅಚ್ಯುತ (ಪಟವರ್ಧನ) ನನ್ನ ಜೊತೆಗಿದ್ದಾರೆಯೇ? ಇಲ್ಲ, ನೀವು ನನ್ನ ಜೊತೆಗಿಲ್ಲ ಎಂದಿದ್ದರು ಗಾಂಧಿ.

ಕೋಮು ಸೌಹಾರ್ದದ ವಿಷಯದಲ್ಲಿ ಅಶೋಕ ಮೆಹತಾ ಮಹಾತ್ಮಾ ಗಾಂಧಿಯವರ ಜೊತೆಗಿದ್ದರು. ಆದರೆ ಸೈದ್ಧಾಂತಿಕವಾಗಿ ಗಾಂಧಿಯವರ ಜೊತೆಗಿರುವುದು ಅಶೋಕ ಮೆಹತಾ ಅವರಿಗೆ ಸಾಧ್ಯವಿರಲಿಲ್ಲ. ಅವರು ಮಹಾತ್ಮಾಗಾಂಧಿಯವರನ್ನು ಅತ್ಯಂತ ಶ್ರೇಷ್ಠ ಉಟೋಪಿಯನ್ ಸಮಾಜವಾದಿ ಎಂದು ಅರ್ಥೈಸಿದ್ದರೂ, ಅಶೋಕ ಮೆಹತಾ ಒಬ್ಬ ಜನತಾಂತ್ರಿಕ ಸಮಾಜವಾದಿಯಾಗಿದ್ದರು. 1977ರಲ್ಲಿ ಬರೆದ 'ರಿಫ್ಲೆಕ್ಶನ್ಸ ಆನ್ ಸೋಷಲಿಸ್ಟ ಎರಾ' ಎಂಬ ಪುಸ್ತಕದಲ್ಲಿ ಅಶೋಕ ಮೆಹತಾ ಗಾಂಧಿಯವರನ್ನು ಪ್ರೂಧೋಂ–ಕ್ರೊಪೋಟ್ಕಿನ ಅವರ ಅನಧಿಪತ್ಯವಾದದ ಪರಂಪರೆಯಲ್ಲಿ ಹಾಗೂ ನೆಹರೂ ಅವರನ್ನು ಜನತಾಂತ್ರಿಕ ಸಮಾಜವಾದಿ ಪರಂಪರೆಯಲ್ಲಿ ಪರಿಗಣಿಸಿದರು. ತಾವೇ ಒಬ್ಬ ಜನತಾಂತ್ರಿಕ ಸಮಾಜವಾದಿಯಾಗಿದ್ದ ಅಶೋಕ ಮೆಹತಾ, ಗಾಂಧೀವಾದಿಯಾಗುವುದು ಸಾಧ್ಯವಿರಲಿಲ್ಲ, ಏನಾದರೂ ಆಗಿದ್ದರೆ ಅವರು ನೆಹರೂವಾದಿಯಾಗಬಹುದಿತ್ತು.

ಅಶೋಕ ಮೆಹತಾ ಹಾಗೂ ಮಹಾತ್ಮಾ ಗಾಂಧಿ ಇನ್ನೂ ಹೆಚ್ಚಿನ ಸಂಪರ್ಕವನ್ನು ಹೊಂದಿದ್ದರೆ, ಇನ್ನೂ ಹೆಚ್ಚು ಸಂವಾದಗಳನ್ನು, ಚರ್ಚೆಗಳನ್ನು ನಡೆಸಿದ್ದರೆ, ಜನತಾಂತ್ರಿಕ ಸಮಾಜವಾದ ತನ್ನನ್ನು ಪ್ರೂಧೋಂನ ಪರಂಪರೆಯಲ್ಲಿ ಪರಿಗಣಿಸುತ್ತದೆ ಎನ್ನುವುದನ್ನು, ಬರಿ ಹಿಂಸೆಯನ್ನು ತ್ಯಜಿಸಬೇಕೆಂದು ಮಾತ್ರವಲ್ಲ, ಸಮಾಜದ ಪುನರ್ರಚನೆ ಹಾಗೂ ಮಾನವ ಪುನರುತ್ಥಾನಗಳೆರಡೂ ಜೊತೆಜೊತೆಯಲ್ಲಿ ನಡೆಯಬೇಕು ಹಾಗೂ ಆಸ್ತಿ ಎಂದರೆ ಅದೊಂದು ಕಳ್ಳತನ ಎಂದು ಪ್ರೂಧೋಂ ಹೇಳಿದ್ದ ಎನ್ನುವುದನ್ನು ಮಹಾತ್ಮಾ ಗಾಂಧಿ ಅರಿಯುತ್ತಿದ್ದರು ಹಾಗೂ ಇದರಿಂದಾಗಿ ಬಹುಶಃ ಅವರಿಗೆ ಸಮಾಜವಾದ ಇನ್ನೂ ಪ್ರಿಯವಾಗುತ್ತಿತ್ತೋ ಏನೋ? ○





# ಗಾಂಧೀಜಿ ಮತ್ತು ಮಹಿಳೆ

- ಡಾ. ಎಚ್. ಜಯಮ್ಮ ಕರಿಯಣ್ಣ

ಮಹಿಳೆಯ ವ್ಯಕ್ತಿತ್ವ, ಸ್ವಂತಿಕೆ ತೇಜಸ್ಸಿನಿಂದ ಬೆಳಗುವುದಕ್ಕೆ ಇರುವ ತೊಂದರೆ ಅಥವಾ ಅಡೆತಡೆಗಳನ್ನು ನಿವಾರಿಸಿ ಅವಳನ್ನು ಅಭಿವೃದ್ಧಿ ಪಥದಲ್ಲಿ ಮುನ್ನಡೆಸುವ ಪ್ರಯತ್ನವೇ ಮಹಿಳೆಯ ಸಬಲೀಕರಣ ಎನ್ನಬಹುದು. ಮಹಿಳೆ ಅನುಭವಿಸುವ ಲಿಂಗಾಧಾರಿತ ಅಸಮಾನತೆಯ ನೆಲೆಗಳನ್ನು ಗುರುತಿಸಿ ಅದನ್ನು ನಿವಾರಿಸಲು ಪ್ರಜ್ಞಾವಂತರು ಕೈಗೊಂಡ ಚಳುವಳಿಗಳು ಮೂಡಿಸುತ್ತಾ ಬಂದಿರುವ ಜಾಗೃತಿ ಒಂದು ರಾಜಕೀಯ ನೀತಿಯಾಗಿ ರೂಪುಗೊಂಡಿತು.

ಅನೇಕ ಶತಮಾನಗಳ ಕಾಲ ಭಾರತದ ಸ್ತ್ರೀಯರು ಅನಕ್ಷರಸ್ಥರೂ, ಅಜ್ಞರೂ ಆಗಿದ್ದು ಪುರುಷರ ದಬ್ಬಾಳಿಕೆ ಮತ್ತು ದೌರ್ಜನ್ಯದಿಂದ ಹಾಗೂ ಕೆಲವು ಧಾರ್ಮಿಕ ನಿಯಮಗಳ ಕಟ್ಟುಪಾಡುಗಳು ಅವಳ ಮೇಲೆ ಬಲವಂತವಾಗಿ ಹೇರಿದ್ದವು. ಪ್ರಾಚೀನ ಕಾಲದಲ್ಲಿ ಅಂದರೆ ಋಗ್ವೇದ ಮತ್ತು ವೇದಗಳ ಕಾಲದಲ್ಲಿ ಭಾರತದ ಸ್ತ್ರೀಯರು ಗಂಡಿನ ಸಮನಾಗಿ ಸಾಮಾಜಿಕವಾಗಿ, ಧಾರ್ಮಿಕವಾಗಿ ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ಪಡೆದಿದ್ದರು.

ಮುಂದಿನ ಸಂಹಿತೆಗಳು, ಬ್ರಾಹ್ಮಣಗಳು, ಉಪನಿಷತ್ತುಗಳು, ಧರ್ಮಸೂತ್ರಗಳು ಮತ್ತು ಸ್ಮೃತಿಗಳು ಸ್ತ್ರೀಯರನ್ನು ವ್ಯಾಸಂಗದಿಂದ, ಯಜ್ಞಯಾಗಾದಿಗಳಂತಹ ವಿವಿಧ ಸಂಸ್ಕಾರಗಳಲ್ಲಿ ಭಾಗವಹಿಸಿ ನಡೆಸಿಕೊಡಲು ಅವಕಾಶವಿಲ್ಲವಾಯಿತು. ಗಂಡು ಮತ್ತು ಹೆಣ್ಣು ಸಮಾನವಾಗಿ ಆಚರಿಸುತ್ತಿದ್ದ ಸಂಸ್ಕಾರಗಳು ತಪ್ಪಿಹೋದವು. ಮನುಸ್ಮೃತಿಯೇ ಪರಮಪೂಜ್ಯ ಗ್ರಂಥವೆಂದು ಪರಿಗಣಿಸಿತು. ಹಿಂದೂ ಸಮಾಜ ಅದನ್ನು ಒಪ್ಪಿ ಸ್ವೀಕರಿಸಿತು. ಅಲ್ಲಿಂದ ಮಹಿಳೆಯರ ಸಾಮಾಜಿಕ ಜೀವನ ಆಮೂಲಾಗ್ರವಾಗಿ ಪರಿವರ್ತನೆ ಹೊಂದಿ ಅವರು ಮನೆಯಲ್ಲಿ ಮತ್ತು ಸಾಮಾಜಿಕವಾಗಿ ಕೆಳಮಟ್ಟದ ಸ್ಥಾನವನ್ನು ಹೊಂದುವಂತಾದರು. ಸತಿಪದ್ಧತಿ, ಬಾಲ್ಯವಿವಾಹ, ಶಿಶು ಬಲಿದಾನ ಮೊದಲಾದ ಅನಿಷ್ಟ ರೂಢಿಪ್ರದವಾದ ಮೂಢನಂಬಿಕೆ ಜನಮನವನ್ನು ಎಚ್ಚರಿಸಿ ಅಜ್ಞಾನ ಕೂಪದಿಂದ ಮೇಲೆತ್ತುವ ನೂತನ ದೃಷ್ಟಿಕೋನ ಅವಶ್ಯವಾಗಿತ್ತು. ಆಗ ಮಹಿಳೆಯರ ಸರ್ವತೋಮುಖ ಏಳಿಗೆಗಾಗಿ ಅಲ್ಲಲ್ಲಿ ಕಾರ್ಯಚಟುವಟಿಕೆಗಳು ಪ್ರಾರಂಭವಾದವು. ಬಂಗಾಲದಲ್ಲಿ ರಾಜಾರಾಮ ಮೋಹನರಾಯರು ಬ್ರಹ್ಮಸಮಾಜವನ್ನು, ಪಂಜಾಬಿನಲ್ಲಿ ದಯಾನಂದ ಸರಸ್ವತಿಯವರು ಆರ್ಯಸಮಾಜವನ್ನು ನಿರ್ಮಿಸಿ ಮಹಿಳೆಯರ ಕಲ್ಯಾಣಕಾರ್ಯ ಕೈಗೊಂಡರು. ಸ್ವಾಮಿ ವಿವೇಕಾನಂದರ 'ಜಗನ್ಮಾತೆಯ ಜೀವಂತ ಸ್ವರೂಪದಂತಿರುವ ಮಹಿಳೆಯರನ್ನು ಉನ್ನತ ಸ್ಥಿತಿಗೆ ತಾರದೆ ಯಾರು ಗೌರವ ತೋರಲಾರರೋ ಅಂತಹವರ ಅಭ್ಯುದಯವಾಗದೆಂದು ಜಾಗತಿಕ ಮಟ್ಟದಲ್ಲಿ ನಿಂತು ಸಾರಿದರು. ಮಹಿಳೆಯ ಜಾಗೃತಿಗಾಗಿ ರಾಮಕೃಷ್ಣ ಕೇಶವಚಂದ್ರಸೇನ, ದೇವೇಂದ್ರನಾಥಟ್ಯಾಗೋರ, ಈಶ್ವರಚಂದ್ರ ವಿದ್ಯಾಸಾಗರ ಮೊದಲಾದವರು ಈ ನಿಟ್ಟಿನಲ್ಲಿ ಶ್ರಮಿಸಿದರು.

ಗಾಂಧೀಜಿಯವರು ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕಿದ ಮೇಲೆ ಭಾರತೀಯ ಸ್ತ್ರೀಯರಲ್ಲಿನ ತ್ಯಾಗ, ಸದ್ಗುಣಗಳ ಜೊತೆಗೆ ಅವರ ಅಂತಃಸತ್ವ ತಾಳ್ಮೆ, ಧೈರ್ಯಗಳನ್ನು ಪ್ರಶಂಸಿಸಿದ್ದಾರೆ. ಮಹಿಳೆಯರ ಸ್ವಾತಂತ್ರ್ಯದ ಪರಿಕಲ್ಪನೆಯನ್ನು ತಮ್ಮ ಭಾವನೆಗಳ ಮೂಲಕ ವ್ಯಕ್ತಪಡಿಸಿದ್ದಾರೆ. ಮಹಿಳೆಯರ ಬಗ್ಗೆ ಉದಾತ್ತ ಭಾವನೆಯನ್ನು ಗಾಂಧೀಜಿ ಹೊಂದಿದ್ದರು. ಹೆಣ್ಣು ಸ್ವಾರ್ಥರಹಿತ ತ್ಯಾಗವನ್ನು ಸಾಕ್ಷಾತ್ಕಾರ ಮಾಡಿಕೊಂಡವಳು. ಗಂಡಸರು ತಮ್ಮಿಂದ ಏನೆಲ್ಲಾ ಪ್ರಯೋಜನ ಪಡೆಯುತ್ತಿದ್ದಾರೆಂದು ಸಹ ಮಹಿಳೆ ಯೋಚಿಸಲಾರಳು. ವಿವಾಹಿತ ಮಹಿಳೆಯರು ಗಂಡನ ಗುಲಾಮಳಂತೆ ಬದುಕಿದ್ದಾಳೆ. ವಿವಾಹಿತ ಪುರುಷನು ತನ್ನ ಧರ್ಮಪತ್ನಿಯನ್ನು ತನ್ನ ಅರ್ಧಾಂಗಿ, ಸಹಧರ್ಮಿಣಿ ಮತ್ತು ಸ್ನೇಹಿತೆಯಂತೆ ಕಾಣುವ ಆಲೋಚನೆಯನ್ನು ಒಮ್ಮೆಯೂ ಮಾಡುವುದಿಲ್ಲ. ಅವಳು ಗಂಡಿನ ಅಧಿಕಾರ ಹಾಗೂ ಕರ್ತವ್ಯಗಳೆರಡರಲ್ಲಿಯೂ ಸಮಾನವಾದ ಅಧಿಕಾರ ಹೊಂದಿರಬೇಕು. ಹಾಗಿದ್ದರೆ ಮಾತ್ರ ಗಂಡ



ಹೆಂಡತಿಯ ನಡುವೆ ಪರಸ್ಪರರಲ್ಲಿ ಕೊಡು-ಕೊಳ್ಳುವ ಅಧಿಕಾರ, ನಂಬಿಕೆ ಮತ್ತು ಇಬ್ಬರ ದೃಷ್ಟಿ ಒಂದೇ ಆಗಿರಬೇಕು. ಆಗ ಅದು ಮಹಿಳೆಯರ ಪುನರುಜ್ಜೀವನವಾಗಿ ಪರಿಣಮಿಸುತ್ತದೆ ಎಂದು ಗಾಂಧೀಜಿ ಅಭಿಪ್ರಾಯಪಟ್ಟಿದ್ದಾರೆ.

ಮಹಿಳೆಯರ ಬದುಕಿಗೆ ಸಂಬಂಧಿಸಿದಂತೆ ಹಲವರು ಕೇಳಿದ ಪ್ರಶ್ನೆಗಳಿಗಾಗಿ ಗಾಂಧೀಜಿಯವರು ಯಂಗ್ ಇಂಡಿಯಾ, ಹರಿಜನ, ನವಜೀವನ ಪತ್ರಿಕೆಗಳ ಮೂಲಕ ಮಹಿಳೆಯರ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅವರ ಅಭಿಪ್ರಾಯಗಳ ಬಗ್ಗೆಯೂ ಸ್ವಲ್ಪ ಗಮನಿಸಬಹುದು.

ಸ್ತ್ರೀ ಪುರುಷರ ನಡುವಿನ ಸಮಾನತೆಯ ಬಗ್ಗೆ ಗಾಂಧೀಜಿ ತಾವು ದಕ್ಷಿಣ ಆಫ್ರಿಕೆಯಲ್ಲಿರುವಾಗ ಸುಮಾರು 60 ಹೆಣ್ಣು ಮಕ್ಕಳು ಆಶ್ರಮವಾಸಿಯಾಗಿದ್ದರು. ಅವರ ಗಂಡಂದಿರು ಕಾರಾಗೃಹ ವಾಸದಲ್ಲಿರುವಾಗ ಆ ಮಹಿಳೆಯರಿಗೆ ಅಣ್ಣನಾಗಿ, ತಂದೆಯಾಗಿ ಅವರೊಡನಿದ್ದು ಅವರ ಮನಸ್ಸನ್ನು ಸಾಕಷ್ಟು ಅರಿಯುವ ಅವಕಾಶ ದೊರೆಯಿತು. 'ಪುರುಷನ ಒಡನಾಡಿಯಾಗಿ ಸ್ತ್ರೀ ಪುರುಷನಷ್ಟೇ ಬುದ್ಧಿ ಪ್ರಧಾನಳು. ಅವಳಿಗೆ ಪುರುಷನ ಪ್ರತಿ ಕಾರ್ಯದಲ್ಲಿ ಪ್ರವೇಶಿಸುವ ಸ್ವಾತಂತ್ರ್ಯ ಮತ್ತು ಅಧಿಕಾರ ಹಾಗೂ ಸಮಾನತೆ ಪಡೆಯುವ ಅಧಿಕಾರವಿದೆ. ಆದರೆ ಕೆಟ್ಟ ಸಂಪ್ರದಾಯಗಳ ಮರೆಯಲ್ಲಿ ಅನೇಕ ಅಯೋಗ್ಯ ಗಂಡಸರಿಗೆ ಬುದ್ಧಿ, ವಿವೇಕಗಳಲ್ಲಿ ಅರ್ಹತೆ ಇಲ್ಲದಿದ್ದರೂ ಸಹ ಮಹಿಳೆಯರನ್ನು ಅಧೀನದಲ್ಲಿರಿಸಿ ಕೊಳ್ಳುವ ಹುನ್ನಾರ ಮಾಡುತ್ತಾ ಬಂದು ತಾವೇ ಶ್ರೇಷ್ಠರೆಂದು ಪರಿಗಣಿಸಿ ಸಂತೋಷಪಡುತ್ತಾರೆ. ಪುರುಷನಿಗಿಲ್ಲದ ಕಾನೂನಿನ ಬಂಧನ ಹೆಣ್ಣಿಗೂ ಇರಬಾರದು. ಮಗಳನ್ನು ಸಹಾ ಮಗನಂತೆ ಪ್ರೀತಿ ಹಾಗೂ ಸಮಾನ ದೃಷ್ಟಿಯಿಂದ ನೋಡಿಕೊಳ್ಳಬೇಕು. ಗಂಡು ಹೆಣ್ಣು ಎಂಬ ಪಕ್ಷಪಾತವನ್ನು ಮಾಡಬಾರದು. ಗಂಡು ಮಗು ಹುಟ್ಟಿದಾಗ ಆನಂದ, ಸಂತೋಷ ವ್ಯಕ್ತಪಡಿಸುವ ಮಹನೀಯರು ಹೆಣ್ಣು ಹುಟ್ಟಿದಾಗ ವ್ಯಥೆ ಪಡುವರು. ಇಬ್ಬರೂ ದೇವರ ಅನುಗ್ರಹದಿಂದ ಜನಿಸಿದವರು. ಅವರಿಬ್ಬರಿಗೂ ಜಗತ್ತಿನಲ್ಲಿ ಬಾಳುವ ಸಮಾನ ಅಧಿಕಾರವಿದೆ. ಅದನ್ನು ಎಲ್ಲರೂ ಮನಗಾಣಬೇಕಾಗಿದೆ ಎನ್ನುತ್ತಾರೆ ಗಾಂಧೀಜಿ.

ಹೆಣ್ಣು ಗಂಡಿಗಿಂತಲೂ ಉದಾರವಾದ ಪ್ರಜ್ಞೆ ಹೊಂದಿದ್ದಾಳೆ. ಹೆಣ್ಣು ತ್ಯಾಗದ ಪ್ರತಿಮೂರ್ತಿ. ತಾನು ಎದುರಿಸಬೇಕಾಗಬಹುದಾದ ಹಲವು ಮೂಕ ವೇದನೆಗಳನ್ನು ಸದ್ದಿಲ್ಲದೆ ಅನುಭವಿಸುತ್ತಾಳೆ. ಎಷ್ಟೆಲ್ಲಾ ನೋವು ಸಂಕಟಗಳನ್ನು ಅನುಭವಿಸುತ್ತಿದ್ದರೂ ನಮ್ರತೆ ಮತ್ತು ನಂಬಿಕೆಯ ಪ್ರತೀಕವಾಗಿದ್ದಾಳೆ. ಹೆಣ್ಣು ದುರ್ಬಲಳಲ್ಲ. ಅವಳಿಗೆ ಪಶುಬಲವಿಲ್ಲದಿರಬಹುದು. ಆದರೆ ಆಕೆಯ ನೈತಿಕ ಬಲದಲ್ಲಿ ಗಂಡಸರಿಗಿಂತಲೂ ಸಾವಿರ ಪಾಲು ಸಮರ್ಥಳಿದ್ದಾಳೆ. ಅವಳಿಗೆ ಅಂತರ್ಜ್ಞಾನ, ಸಹನಶಕ್ತಿ ಅಪಾರವಾಗಿದೆ. ನೈತಿಕವಾಗಿ ಅಪರಿಮಿತ ಧೈರ್ಯವಂತಳು. ಹೆಣ್ಣು ಸ್ವಾರ್ಥ ತ್ಯಾಗದ ಪ್ರತಿರೂಪವೆಂದು ಗಾಂಧೀಜಿ ತಿಳಿದವರು. ಟಾಲ್‌ಸ್ಟಾಯ್ ಅವರು ಹೇಳುವಂತೆ ಹೆಣ್ಣುಮಕ್ಕಳು ಗಂಡಸರ ಮಾಯಾಜಾಲದಲ್ಲಿ ಮುಳುಗಿ ಮೇಲೆದ್ದು ಬರಲಾರದೆ ತೊಳಲುತ್ತಿದ್ದಾರೆ. ಸ್ತ್ರೀಯರ ಮನಸ್ಸಿನಲ್ಲಿ ತಮ್ಮ ಸದ್ಯದ ಪರಿಸ್ಥಿತಿಯ ಬಗ್ಗೆ ತಿಳುವಳಿಕೆ ಮೂಡುವಂತೆ ಅವರಲ್ಲಿ ಜಾಗೃತಿಯನ್ನುಂಟು ಮಾಡುವುದು ನಮ್ಮ ಪ್ರಥಮ ಪ್ರಯತ್ನವಾಗಬೇಕು ಎನ್ನುತ್ತಾರೆ.

ಮಹಾತ್ಮಾಗಾಂಧಿ ಕೃತಿಸಂಚಯದಲ್ಲಿ ಹೀಗೆ ಹೇಳಿದ್ದಾರೆ – 'ಪಾರ್ಸಿ ಮಹಿಳೆಯರಾದ ಮಿಸೆಸ್ ಭಕಾಯಿಜಿ ರುಸ್ತುಮ್ ಜಿ, ಕೆ. ಆರ್. ಕಾಮಾ ಅವರು ಇಪ್ಪತ್ತು ವರ್ಷಗಳಿಗೂ ಹೆಚ್ಚು ರಾಜಕೀಯ ಜೀವನದ ಅನುಭವವಿದ್ದು ಪ್ಯಾರಿಸ್‌ನಲ್ಲಿ ವಾಸಿಸುತ್ತಿದ್ದರು. ಅವರಲ್ಲಿ ದೇಶಭಕ್ತಿ ತುಂಬಿ ತುಳುಕುತ್ತಿದ್ದು ಅವರು ಭಾರತವನ್ನು ಕುರಿತು ಯಾರಾರು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡವರೋ ಅವರು ಅರ್ಧ ಸತ್ತಂತೆ. ನ್ಯಾಯ ಮತ್ತು ಸತ್ಯಕ್ಕಾಗಿ ಹೋರಾಡಲು ಮುಂದೆ ಬನ್ನಿ. ಗುಲಾಮಗಿರಿಯಲ್ಲಿ ಬದುಕುವುದಕ್ಕಿಂತ ದೇಶಕ್ಕಾಗಿ ಹೋರಾಡಲು ಮುಂದೆ ಬನ್ನಿ' ಎಂಬ ಕರೆಗೆ ಓಗೊಡಲು ಹೇಳಿದ್ದಾರೆ.

ಇಟಲಿಯ ಒಂದು ಖಾಸಗಿ ಸಭೆಯಲ್ಲಿ ಗಾಂಧೀಜಿಯವರನ್ನು ಭಾರತೀಯ ಹೆಣ್ಣು ಮಕ್ಕಳಿಂದ ಇಟಲಿಯ ಹೆಣ್ಣು ಮಕ್ಕಳು ಕಲಿಯುವಂತಹುದು ಅಂದರೆ ಸ್ತ್ರೀಯರು ಸೈನಿಕರಾಗಿ ಸೇವೆ ಸಲ್ಲಿಸಬಹುದೇ' ಎಂದು ಪ್ರಶ್ನೆ ಕೇಳಿದವರಿಗೆ 'ಹೆಣ್ಣು ಮಕ್ಕಳು ತಾವು



ನಿರ್ಬಲರೆಂಬುದನ್ನು ಮರೆತರೆ ಯುದ್ಧದಲ್ಲಿ ಪುರುಷರಿಗಿಂತಲೂ ಹೆಚ್ಚಿನ ಸೇವೆಯನ್ನು ಸಲ್ಲಿಸಬಲ್ಲರು. ಮಹಿಳೆಯರು ಸ್ವಾರ್ಥ ತ್ಯಾಗದ ಸಾಕ್ಷಾತ್ಕಾರವೆಂದು ನಾನು ಭಾವಿಸುತ್ತೇನೆ. ಪುರುಷನು ವಹಿಸಿದಷ್ಟೇ ಪಾತ್ರವನ್ನು ಸ್ತ್ರೀಯು ವಹಿಸುವುದೇ ಅಹಿಂಸಾ ಯುದ್ಧದ ಸೌಂದರ್ಯ. ಅಹಿಂಸಾತ್ಮಕ ಯುದ್ಧದಲ್ಲಿ ಬವಣೆ ಪಡುತ್ತಿದ್ದಾರೆ. ಮನೆಯ ಗೃಹಕೃತ್ಯವನ್ನು ಮಾತ್ರ ನೋಡಿಕೊಂಡರೆ ಸಾಲದು, ರಾಷ್ಟ್ರಕ್ಕೂ ಸೇವೆ ಮಾಡುವ ಬಯಕೆ ಹೊಂದಿರುವರು' ಎಂದು ಹೇಳುತ್ತಾರೆ. ಅವರು ಕಾಯ್ದೆಗೆ ವಿರುದ್ಧವಾಗಿ ಉಪ್ಪನ್ನು ಉತ್ಪಾದಿಸಿದರು. ವಿದೇಶಿಯರ ಬಟ್ಟೆ ಅಂಗಡಿಗಳನ್ನು ಬಹಿಷ್ಕರಿಸಿದರು. ಸೇಂದಿ ಅಂಗಡಿಗಳೆದುರು ಸತ್ಯಾಗ್ರಹ ಮಾಡಿದರು. ಅವರು ಕೊಳ್ಳುವವರನ್ನು ಕೊಳ್ಳದಂತೆ, ಮಾರುವವರನ್ನು ಮಾರದಂತೆ ತಡೆದರು. ಮಧ್ಯರಾತ್ರಿಗಳಲ್ಲಿ ಕೂಡ ಕುಡುಕರನ್ನು ಸ್ತ್ರೀಯರು ಪ್ರೀತಿ ಮತ್ತು ಧೈರ್ಯದಿಂದ ಅವರವರ ಮನೆಯವರೆಗೆ ಹೋಗಿ ಬಿಟ್ಟು ಬಂದರು. ಮಹಿಳೆಯರು ಸೆರೆಮನೆಗೆ ಹೋದರಲ್ಲದೆ ಪುರುಷರಂತೆ ಕೆಲವರು ಲಾಠಿ ಹೊಡೆತಗಳನ್ನು ಸಹಿಸಿಕೊಂಡರು. ಭಾರತೀಯ ಹೆಣ್ಣು ಮಕ್ಕಳು ತಮ್ಮ ಮುಖವನ್ನು ಮುಚ್ಚಿಕೊಳ್ಳುತ್ತಿದ್ದ ಘೋಷ ಎಂಬ ಪರದೆಯನ್ನು ಕಿತ್ತೊಗೆದು ರಾಷ್ಟ್ರ ಸೇವೆಗೆಂದು ಬಂದರು. ಪಾಶ್ಚಿಮಾತ್ಯ ಸ್ತ್ರೀಯರು ಪಶುಗಳಾಗಿ ಪುರುಷರೊಡನೆ ಸ್ಪರ್ಧಿಸಲು ಸಿದ್ಧರಾದರೆ ಭಾರತೀಯ ಹೆಣ್ಣುಮಕ್ಕಳಿಂದ ಕಲಿಯುವಂತಹುದು ಏನು ಇಲ್ಲವೆಂದು ಗಾಂಧೀಜಿ ಉತ್ತರಿಸಿದರು.

ಮಹಿಳೆಯರಿಗೆ ನೀಡಬೇಕಾಗಿರುವ ಶಿಕ್ಷಣದ ಬಗ್ಗೆಯು ಕೆಲವು ವಿಷಯಗಳನ್ನು ಪ್ರಸ್ತಾಪಿಸುತ್ತಾರೆ. 'ಗಾಂಧೀಜಿಯು ಮಹಿಳೆಯರಿಗೆ ಮೊದಲು ಶಿಕ್ಷಣ ಕೊಡುವ ಮೂಲಕವೇ ಜಾಗೃತಿಯನ್ನುಂಟು ಮಾಡಲು ಸಾಕಷ್ಟು ಕಾಲಾವಕಾಶ ಬೇಕಾಗುತ್ತದೆ. ಅಲ್ಲದೆ ನಿಶ್ಚಿತ ಕಾಲಾವಧಿಯಲ್ಲಿ ಶಿಕ್ಷಣ ಕೊಡಲು ಸಾಧ್ಯವಿಲ್ಲ. ನಮ್ಮ ಉದ್ದೇಶದ ಸಾಧನೆ ಫಲಪ್ರದವಾಗಬೇಕಾದರೆ ಮಹಿಳೆಯರು ತಮ್ಮ ವಸ್ತುಸ್ಥಿತಿಯನ್ನು, ಪರಿಸ್ಥಿತಿಯನ್ನು ತಿಳಿಯುವಂತೆ ಅರಿವುಂಟು ಮಾಡಬೇಕು. ಜೊತೆ ಜೊತೆಗೆ ಓದು, ಬರಹ, ಗಣಿತ ಮೊದಲಾದ ಶಿಕ್ಷಣದ ಕಲಿಕೆಯಿಂದ ಅವರ ಬುದ್ಧಿಯನ್ನು ವಿಕಸಿತಗೊಳಿಸಿ ಹರಿತ ಮಾಡುತ್ತದೆ. ಒಳ್ಳೆಯದನ್ನು ತಿಳಿದು ಮಾಡುವ ಶಕ್ತಿಯನ್ನು ಹೆಚ್ಚಿಸುತ್ತದೆ. ಆದರೆ ಅಶಿಕ್ಷಿತರೆಂಬ ಕಾರಣದಿಂದ ಹೆಣ್ಣುಮಕ್ಕಳಿಗೆ ಸಮಾನ ಹಕ್ಕು ಬಾಧ್ಯತೆಗಳನ್ನು ಕೊಡದಿರುವುದು ನ್ಯಾಯವಲ್ಲವೆಂದು ಪುರುಷರಿಗೆ ಕಾಲಕಾಲಕ್ಕೆ ಎಚ್ಚರಿಸಿದ್ದಾರೆ. ಓದು ಬರಹದಿಂದ ಅನೇಕ ಗ್ರಂಥಗಳಲ್ಲಿರುವ ನಿಷ್ಕಳಂಕವಾದ ಅರಿವಿನ ಜೊತೆಗೂಡುತ್ತದೆ. ಸಂತೋಷವನ್ನು ಶಿಕ್ಷಣವಿಲ್ಲದೆ ಸವಿಯಲು ಸಾಧ್ಯವಿಲ್ಲ. ಶಿಕ್ಷಣವಿಲ್ಲದವನು ಪಶುಸಮಾನ ಎಂಬ ವಿಷಯ ಎಲ್ಲರಿಗೂ ತಿಳಿದ ವಿಷಯ. ಹಾಗೆಂದು ಹೆಣ್ಣುಮಕ್ಕಳ ಮತ್ತು ಪುರುಷರ ಶಿಕ್ಷಣ ಒಂದೇ ರೀತಿಯಲ್ಲಿರಬೇಕೆಂಬ ಅರ್ಥವಲ್ಲ. ಹೆಣ್ಣುಮಕ್ಕಳ ಶಿಕ್ಷಣದ ಸ್ವರೂಪಗಳನ್ನು ಸಿದ್ಧಪಡಿಸುವಾಗ ಅವರು ಒಬ್ಬರಿಗೊಬ್ಬರು ಪೂರಕವಾಗಿರುವರೆಂಬ ಅಂಶ ನೆನಪಿನಲ್ಲಿರಬೇಕು. ವೈವಾಹಿಕ ಜೀವನದಲ್ಲಿ ಹೊರಗಿನ ಚಟುವಟಿಕೆಗಳು ಪುರುಷನಿಗೆ ಮುಖ್ಯ ಮತ್ತು ಅಗತ್ಯ. ಅವನಿಗೆ ಹೆಚ್ಚಿನ ಜ್ಞಾನ ಮತ್ತು ತಿಳುವಳಿಕೆ ಲಭ್ಯವಾಗುವಂತಹ ಶಿಕ್ಷಣದ ರೂಪವನ್ನು ಸಿದ್ಧಪಡಿಸಬೇಕು. ಗೃಹಕೃತ್ಯದಲ್ಲಿ ಕುಟುಂಬದಲ್ಲಿ ಬಹುವಾಗಿ ಸಾಲ್ಗೊಳ್ಳುವ ಮಹಿಳೆಯರಿಗೆ ಬೇಕಾಗುವ ವಿಷಯಗಳ ಜೊತೆಗೆ ಮಕ್ಕಳನ್ನು ಪೋಷಿಸಿ ಸರಿಯಾದ ಮಾರ್ಗದಲ್ಲಿ ಬೆಳೆಸುವ ಮತ್ತು ಸಂಸಾರವನ್ನು ಸಂಪೂರ್ಣವಾಗಿ ನಿಭಾಯಿಸುವಂತಹ ಶಿಕ್ಷಣದ ರೂಪವನ್ನು ಸಿದ್ಧಪಡಿಸಬೇಕು ಎನ್ನುತ್ತಾರೆ ಗಾಂಧೀಜಿ.

ಒಮ್ಮೆ ಮಹಿಳೆಯರನ್ನು ಉದ್ದೇಶಿಸಿ ಭಾಷಣ ಮಾಡುತ್ತಾ 'ಲಕ್ಷಾಂತರ ಜನರು ತಮ್ಮ ಮುಂದಿನ ಪೀಳಿಗೆಗೆ ಪಿತ್ರಾರ್ಜಿತ ಆಸ್ತಿಯನ್ನು ಹೊಂದಿರುವುದು ಅದರ ರಕ್ಷಣೆ ಮಾಡುವುದಕ್ಕೆ ಬದಲಾಗಿ ಉತ್ತಮ ತಂದೆ ತಾಯಿಯರು ತಮ್ಮ ಎಲ್ಲಾ ಮಕ್ಕಳಿಗೆ ಸಮನಾಗಿ ನೀಡಬಹುದಾದ ಆಸ್ತಿ ಎಂದರೆ ಸೌಶೀಲ್ಯ ಮತ್ತು ವಿದ್ಯಾರ್ಹತೆ' ಎಂದು ಹೇಳಿದರು.

ಸಾಹಿತ್ಯದ ಅಭಿರುಚಿಯನ್ನು ಬೆಳಸಿಕೊಂಡವರು ಇಂಗ್ಲೀಷ್ ಅಭ್ಯಾಸವನ್ನು ಪಡೆಯಬಹುದು. ಆದರೆ ನಮ್ಮ ಸಾಮಾನ್ಯ ಜೀವನದ ಬದುಕಿಗೆ ಮಹಿಳೆಯರಿಗೆ ಅಥವಾ ಪುರುಷರಿಗೆ ಇಂಗ್ಲೀಷ್ ಜ್ಞಾನದ ಅವಶ್ಯಕತೆ ಇದೆಯೆಂದು



ನನಗನ್ನಿಸುವುದಿಲ್ಲ. ಆ ಜ್ಞಾನ ಬದುಕಿನ ಅಂದರೆ ಹೊಟ್ಟೆಪಾಡಿಗಾಗಿ ಹಾಗೂ ರಾಜಕೀಯದ ಸಂಬಂಧವನ್ನು ಬೆಳಸಿಕೊಳ್ಳಲು ಇಂಗ್ಲೀಷಿನ ಅಗತ್ಯವಿದೆ. ಅಲ್ಲದೆ ಬೇರೆ ಬೇರೆ ಭಾಷೆಗಳಲ್ಲಿರುವ ಅಪೂರ್ವ ಕೃತಿಗಳನ್ನು ನಮ್ಮಗಳ ಭಾಷೆಗೆ ತರ್ಜುಮೆ ಮಾಡುವ ವಿದ್ವಾಂಸರು ಬೇಕು. ಸಾಹಿತ್ಯ ಎಲ್ಲರಿಗೂ ಸುಲಭವಾಗಿ ಲಭ್ಯವಾಗುವಂತಿರ ಬೇಕು ಎನ್ನುತ್ತಾರೆ ಗಾಂಧೀಜಿ.

ಗಾಂಧೀಜಿಯವರು ಸೇವಾಗ್ರಾಮದಲ್ಲಿ ನಿತ್ಯವೂ ದುಡಿಯುತ್ತಿರುವ ಒಕ್ಕಲು ಮಕ್ಕಳಲ್ಲಿ ಗಂಡು ಮತ್ತು ಹೆಣ್ಣು ಕೂಡಿಯೇ ಹೊಲಗಳಲ್ಲಿ ಕೆಲಸ ಮಾಡುತ್ತಾರೆ. ಆದರೆ ಗಂಡು ಕಷ್ಟಕರವಾದ ನೇಗಿಲಿಂದ ಹೊಲವನ್ನು ಉಳುವ ಕೆಲಸ ಮಾಡಿದರೆ, ಹೆಣ್ಣು ಅವನಿಗೆ ಸಹಾಯಕಳಾಗಿ ತನ್ನ ಕೈ ಜೋಡಿಸುತ್ತಾಳೆ. ಲಕ್ಷಾಂತರ ಹೆಣ್ಣುಮಕ್ಕಳು ಹೊಟ್ಟೆ ಪಾಡಿಗಾಗಿ ದುಡಿಯುವುದು ಅನಿವಾರ್ಯವಾದರೂ ಕೋವಿಯನ್ನು ಹಿಡಿದು ಹೋರಾಡಬೇಕಿಲ್ಲ. ಕೂಲಿ ಮಾಡುವುದು ಅನುವಂಶಿಕವಾಗಿ ಬಂದ ಅನಾಗರೀಕತೆ ಏನೂ ಅಲ್ಲ. ಹೆಣ್ಣುಮಕ್ಕಳು ತಮ್ಮ ಮನೆಯ ಕೆಲಸವನ್ನು ಮುಗಿಸಿ ತಮ್ಮ ಹೊಲಗಳಲ್ಲಿ ಕೆಲಸ ಮಾಡುವುದು ಅನಾಗರೀಕತೆ ಅಲ್ಲ. ನನ್ನ ಹೊಸ ರೂಪದ ಸಮಾಜದಲ್ಲಿ ಎಲ್ಲರೂ ದುಡಿದು ತಕ್ಕ ಪ್ರತಿಫಲ ಬರುವಂತೆ ಶ್ರಮಿಸಬೇಕೇ ಹೊರತು ಅವರನ್ನು ಅನಿಷ್ಟ ಉದ್ದೇಶಪೂರ್ವಕವಾಗಿ ಮಲಿನರನ್ನಾಗಿ ಮಾಡಲಾರೆ ಎನ್ನುತ್ತಾರೆ.

ಭಾರತೀಯ ಹೆಣ್ಣು ಮಕ್ಕಳಲ್ಲಿ ಉಂಟಾಗಿರುವ ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆ ಅವರ ಸಾಂಪ್ರದಾಯಿಕ ಗೃಹಕೃತ್ಯಗಳ ಮತ್ತು ಸಾಮಾಜಿಕ ಕರ್ತವ್ಯಗಳಲ್ಲಿ ಮತಭೇದವನ್ನೇ ಹುಟ್ಟಿಸಿದೆ. ಹೆಣ್ಣುಮಗಳು ಸಾರ್ವಜನಿಕ ಕಾರ್ಯದಲ್ಲಿ ನಿರತಳಾದರೆ ಅವಳು ಮನೆಯನ್ನು ಮತ್ತು ಮಕ್ಕಳನ್ನು ನಿರ್ಲಕ್ಷಿಸಬೇಕಾಗುತ್ತದೆ. ಈ ಸಮಸ್ಯೆಯ ಪರಿಹಾರಕ್ಕೆ ಗಾಂಧೀಜಿಯು 'ಹೆಣ್ಣುಮಕ್ಕಳ ಗೃಹಸಂಸಾರದ ಗುಲಾಮಗಿರಿ ನನಗೆ ಅನಾಗರೀಕತೆಯ ಸಂಕೇತವಾಗಿದೆ. ಮನೆಗೆಲಸಕ್ಕಾಗಿ ಹೆಣ್ಣುಮಕ್ಕಳು ದಿನವನ್ನೆಲ್ಲಾ ತೆಗೆದುಕೊಳ್ಳಬಾರದು ಎನ್ನುತ್ತಾರೆ. ಸತ್ಯವನ್ನು ಎದುರಿಸುವಷ್ಟು ಧೈರ್ಯವಿರಬೇಕು. ಈ ವಿಶ್ವವ್ಯಾಪಾರದಲ್ಲಿ ನೀವೂ ಪಾತ್ರಧಾರಿಗಳು. ಪುರುಷರನ್ನು ಸಂತೋಷಪಡಿಸಲು ಶೃಂಗರಿಸಿಕೊಂಡು ಅವರನ್ನು ಮೆಚ್ಚಿಸಲು ಪ್ರಯತ್ನಿಸಬಾರದು. ಹಾಗೆ ನೋಡಿದರೆ ನಾನು ನನ್ನ ಹೆಂಡತಿಯನ್ನು ಮೊದಲು ನಡೆಸಿಕೊಳ್ಳುತ್ತಿದ್ದ ರೀತಿಯಲ್ಲಿದ್ದರೆ ಅವಳ ಹೃದಯವನ್ನು ಗೆಲ್ಲುವುದು ಸಾಧ್ಯವಿರಲಿಲ್ಲ. ಗಂಡನಾಗಿ ನಾನು ನನ್ನ ಹಕ್ಕುಗಳನ್ನೆಲ್ಲಾ ಅವಳಿಗಾಗಿ ಬಿಟ್ಟುಕೊಟ್ಟೆ. ಇಂದು ಅವಳು ನನ್ನಷ್ಟೇ ಸಾದಾ ಜೀವಿಯಾಗಿರುವುದನ್ನು ನೋಡಬಹುದು. ಇಂದು ಅವಳ ಮೈಮೇಲೆ ಚಿನ್ನದ ಆಭರಣಗಳಾಗಲಿ ಶೃಂಗಾರದ ವಸ್ತುಗಳನ್ನಾಗಲಿ ನೀವು ನೋಡಲಾರಿರಿ. ಪುರುಷರನ್ನು ಒಲಿಸಿಕೊಳ್ಳಲು ಸಂತೋಷಪಡಿಸಲು ಅಲಂಕರಿಸಿ ಕೊಳ್ಳಬೇಡಿ. ಸುವಾಸನೆಯ ತೈಲ ನಿಮ್ಮಲ್ಲಿರುವ ಒಳ್ಳೆಯತನದ ಸುವಾಸನೆಯನ್ನು ಹರಡುವುದಿಲ್ಲ. ನಿಮ್ಮ ಹೃದಯದಿಂದ ಮತ್ತು ಅಂತರಂಗದಿಂದ ಸುವಾಸನೆ ಬೀರುತ್ತಾ ಮಾನವ ಕುಲವನ್ನೇ ಸೆರೆ ಹಿಡಿಯಿರಿ. ಅದು ನಿಮ್ಮ ಆಜನ್ಮ ಸಿದ್ಧ ಹಕ್ಕನ್ನು ಪುರುಷನು ತೆಗೆದುಕೊಳ್ಳಬಾರದು. ಅವನು ಹೆಣ್ಣಿನಿಂದಲೇ ಜನಿಸಿದ್ದಾನೆ. ಎಂದಿಗೂ ಮರೆಯಬೇಡಿ ಎನ್ನುತ್ತಾರೆ.

ಗಾಂಧೀಜಿಯವರು ಕೈಗೊಂಡ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಹಿಳೆಯರಿಗೆ ಹೆಚ್ಚಿನ ಉತ್ತೇಜನವಿತ್ತರು. ನಮ್ಮದು ಅಹಿಂಸಾ ಚಳವಳಿ. ಈ ಅಹಿಂಸಾ ಚಳವಳಿಯಲ್ಲಿ ಮಾನವ ಶಕ್ತಿಯನ್ನು ಅಳೆಯಬೇಕಾದ ಅಗತ್ಯವಿಲ್ಲ. ಸಹನೆ, ತಾಳ್ಮೆ, ನಿಶ್ಚಲತೆ, ಸದ್ಗುಣಗಳಿಂದ ಮಹಿಳೆ ದಕ್ಷಳೆಂದು ನಿರೂಪಿತಳಾಗುತ್ತಾಳೆಂದರು ಬಾಪೂಜಿ.

ಮಹಾತ್ಮರ ಆದೇಶದಂತೆ ರಾಷ್ಟ್ರಾದ್ಯಂತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಉಮಾಬಾಯಿ ಕುಂದಾಪುರ ಅವರು ಹುಬ್ಬಳ್ಳಿಯಲ್ಲಿ 'ಭಗಿನಿ ಸಮಾಜ' ಎಂಬ ಸಂಸ್ಥೆ ರಚಿಸಿ ಅದರ ಮೂಲಕ ಸಾಮಾಜಿಕ ಕ್ರಾಂತಿ ಮುಂದುವರಿಸಿದರು. ಅಲ್ಲದೆ ಅಂದು ಕಾಂಗ್ರೆಸ್ ನಿಧಿಗೆಂದು ಒಂದು ಲಕ್ಷ ರೂಪಾಯಿಗಳನ್ನು ಸಂಗ್ರಹಿಸಿಕೊಟ್ಟರು. ಕೃಷ್ಣಾಬಾಯಿ ಪಣಜಿಕರ ಮೊದಲಾದ ಮಹಿಳೆಯರು ಸೇರಿ ಮಹಿಳಾ ಮಂಡಳಿಗಳನ್ನು ಸ್ಥಾಪಿಸಿ ಮಹಿಳೆಯರಲ್ಲಿ ಜಾಗೃತಿಯನ್ನು ತುಂಬತೊಡಗಿದರು. ಸ್ವದೇಶಿ ಬಟ್ಟೆಗಳ ಬಳಕೆ, ಖಾದಿ ಪ್ರಚಾರದ ಜೊತೆಗೆ ವಿದೇಶಿ ವಸ್ತುಗಳ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡುವುದು ಮುಂದುವರಿದಿತ್ತು.



ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಮಹಿಳೆಯರ ಕ್ರಾಂತಿಕಾರಕ ಚಟುವಟಿಕೆಗಳು ಅವರ ಪ್ರಚಂಡ ಸ್ವಾತಂತ್ರ್ಯ ಮನೋಭಾವ ಸಾಹಸಮಯ ವಾಗಿದ್ದವು. ಸಾಮಾಜಿಕ ಜೀವನದ ಕುಂದುಕೊರತೆಗಳನ್ನು ನೀಗಿಸಲು ಪ್ರಯತ್ನಪಡುವುದರ ಜೊತೆಗೆ ಶೈಕ್ಷಣಿಕ ಪ್ರಗತಿ, ಆಧ್ಯಾತ್ಮ ಜೀವನದಿಂದ ಆಗುವ ಉನ್ನತಿಯನ್ನು ತಿಳಿಸುವುದರ ಮೂಲಕ ವರ್ಗ, ವರ್ಣಭೇದದ ವಿರುದ್ಧ ಹೋರಾಡಿದರು. ಮಾನವೀಯ ಅನುಕಂಪ ವಿಶ್ವಪ್ರೇಮ ಜನತೆಯ ಮುಂದಾಳುಗಳಾಗಿ ರಾಷ್ಟ್ರವನ್ನು ಮುನ್ನಡೆಸುವ ಆತ್ಮಬಲ, ಆಧ್ಯಾತ್ಮಿಕ ಶಕ್ತಿ ಅವರನ್ನು ದೇಶಪ್ರೇಮಿಗಳ ನ್ನಾಗಿಸಿತ್ತು. ಉಪ್ಪಿನ ಸತ್ಯಾಗ್ರಹದಲ್ಲಿ ಮುನ್ನುಗ್ಗಿ ಬ್ರಿಟಿಷರ ಕಣ್ಣಿಗೆ ಮಣ್ಣೆರಚಿ ತಮ್ಮ ವೇಷ ಮರೆಸಿಕೊಂಡು ಗುಪ್ತ ಸ್ಥಳಗಳಿಗೆ ಹೋಗಿ ಜನರಲ್ಲಿ ಜಾಗೃತಿಯನ್ನುಂಟು ಮಾಡಿದ ಮಹಿಳಾ ತಂಡಗಳಿವೆ. ಅವಿದ್ಯಾವಂತರೆನಿಸಿದ ಭಾರತೀಯ ಮಹಿಳೆಯರ ತಂಡ ಅಹಿಂಸಾತ್ಮಾಕ ಮತ್ತು ಬ್ರಿಟಿಷರ ವಿರುದ್ಧ ಅಸಹಕಾರ ಚಳುವಳಿಯಲ್ಲಿ ಉತ್ತಮ ರೀತಿಯಲ್ಲಿ ನಡೆದುಕೊಂಡಿದ್ದಾರೆ. ಬ್ರಿಟಿಷ್ ಸರಕಾರ ನೀಡಿದ ಶಿಕ್ಷೆಯನ್ನು, ಬೈಗುಳವನ್ನು ಮತ್ತು ಕ್ರೋಧವನ್ನು ಧೈರ್ಯದಿಂದ ಹಾಗೂ ತಾಳ್ಮೆಯಿಂದ ಸಹಿಸಿ ಅಹಿಂಸಾ ಚಳುವಳಿಗೆ ನಿಜವಾದ ಅರ್ಥಕೊಟ್ಟವರಾಗಿದ್ದಾರೆ. ಗಾಂಧೀಜಿಯವರ ದೇಶಪ್ರೇಮ ಅನುಪಮ. ಮಾನವೀಯ ಅನುಕಂಪಗಳು, ಬಹುಜನ ಮಹಿಳೆಯರನ್ನು ವರ್ಗ, ವರ್ಣ, ಜಾತಿ, ಕುಲ, ಗೋತ್ರಗಳನ್ನು ಪಕ್ಕಕ್ಕಿರಿಸಿ ಹೋರಾಟಕ್ಕೆ ದೀಕ್ಷಾಬದ್ಧರನ್ನಾಗಿಸಿತ್ತು. ಭಾರತೀಯರ ರಾಷ್ಟ್ರೀಯ ಭಾವನೆಯನ್ನು ಜಾಗೃತಗೊಳಿಸಿ ಸ್ವಾತಂತ್ರ್ಯ ಸಂಗ್ರಾಮಕ್ಕಾಗಿ ತಮ್ಮ ತನು-ಮನ-ಧನಗಳನ್ನು ಸಮರ್ಪಣೆ ಮಾಡುವ ಜವಾಬ್ದಾರಿಯನ್ನು ಮಹಿಳೆಯರು ಹೊತ್ತರು.

ಅಸ್ಪೃಶ್ಯತೆಯ ನಿವಾರಣೆ ಸ್ವಾತಂತ್ರ್ಯ ಚಳವಳಿಯ ಮುಖ್ಯ ಕೆಲಸವೆಂದ ಗಾಂಧೀಜಿಯವರ ಮಾತನ್ನು ಶಿರಸಾವಹಿಸಿ ದೇಶಭಕ್ತರಾದ ವೀರನಗೌಡರು ಶ್ರಮಿಸಿದರಲ್ಲದೆ, ಈ ಕೆಲಸದ ಪೂರ್ಣ ಜವಾಬ್ದಾರಿಯನ್ನು ಪತ್ನಿ ನಾಗಮ್ಮನವರಿಗೆ ವಹಿಸಿ ಕೊಟ್ಟರು. 1934ರಲ್ಲಿ ಹುಬ್ಬಳ್ಳಿಯಲ್ಲಿ ಇಬ್ಬರು ಹರಿಜನ ವಿದ್ಯಾರ್ಥಿನಿಯರಿಂದ ಮಹಿಳಾ ವಿದ್ಯಾಪೀಠ ಪ್ರಾರಂಭವಾಯಿತು. ಹರಿಜನರಲ್ಲಿ ಜಾಗೃತಿ ಮೂಡಿಸುವುದು ಸ್ವಾತಂತ್ರ್ಯ ಹೋರಾಟದ ಮತ್ತೊಂದು ಮುಖವಾಗಿತ್ತು. ಈ ದೃಷ್ಟಿಯಿಂದ ವಿದ್ಯಾಪೀಠದಲ್ಲಿ ಪ್ರಭಾತಫೇರಿ, ದೇಶಭಕ್ತಿ ಗೀತೆಗಳು, ಲಾಠಿವರಸೆ, ಲೆಝಿಮ್ ಕ್ರೀಡೆಯ ಜೊತೆಗೆ ಹಂಜಿ ನೂಲುವುದು ಮೊದಲಾದ ಚಟುವಟಿಕೆಗಳು ವಿದ್ಯಾಪೀಠದಲ್ಲಿ ನಡೆಯುತ್ತಿದ್ದು ಒಳ್ಳೆಯ ವಾತಾವರಣ ಉಂಟುಮಾಡಲಾಯಿತು. ಅಲ್ಲದೆ ಮಹಿಳೆಯರಲ್ಲಿ ಜಾಗೃತಿಯ ಅರಿವು ಮೂಡಿಸಲಾಗಿತ್ತು.

ಹೀಗೆ ಅಪಾರ ಸಂಖ್ಯೆಯಲ್ಲಿ ಭಾಗವಹಿಸಿದ ಸ್ವಾತಂತ್ರ್ಯ ಹೋರಾಟಗಾರ್ತಿಯರಲ್ಲಿ ಹಾಸನದ ಶಾರದಮ್ಮ ಗೋವಿಂದರಾವ್, ಮೈಸೂರಿನ ಸುನಂದಮ್ಮ, ಬೆಂಗಳೂರಿನ ಬಿ. ಕಾಮಾಕ್ಷಮ್ಮ ಮೊದಲಾದವರನ್ನು ಹೆಸರಿಸಬಹುದು. ತಮಿಳುನಾಡಿನ ಹೋರಾಟಗಾರಳಾದ ಗಂಗಾಬಾಯಿ ಎಂಬಾಕೆ ಕಲ್ಕತ್ತಾದಲ್ಲಿ ಮಹಿಳಾ ವಿದ್ಯಾಲಯ, ಮಹಾಕಾಳಿ ವಿದ್ಯಾಲಯ ಪಾಠಶಾಲೆಗಳನ್ನು ಪ್ರಾರಂಭಿಸಿ ಭಾರತೀಯ ಮಹಿಳೆಯರನ್ನು ಚಳವಳಿಯಲ್ಲಿ ಭಾಗವಹಿಸುವ ತರಬೇತಿ ನೀಡುತ್ತಾ ಸ್ವಾತಂತ್ರ್ಯ ಹೋರಾಟದ ಕಿಚ್ಚು ಎಬ್ಬಿಸಿದ ಹೋರಾಟಗಾರಳಾಗಿದ್ದಳು.

ಮಹಿಳೆಯರು ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಸಮಾನ ಹಕ್ಕುಗಳ ಜೊತೆ ದೇಶಸೇವೆಗಾಗಿ, ಸಮಾಜದ ಉನ್ನತಿಗಾಗಿ ಮಹಿಳೆಯರು ಸಂಘಟನೆ ನಡೆಸಿ ಕಷ್ಟ ಮತ್ತು ನಿಷ್ಠೂರದ ಬದುಕನ್ನು ನಿರ್ವಹಿಸಿದರು. ದೇಶದ ಹಿತವನ್ನು ತಮ್ಮ ಗಮನದಲ್ಲಿರಿಸಿಕೊಂಡು ಗಾಂಧೀಜಿಯವರು ಭಾಷಣ ಮಾಡಲು ಹೋದ ಕಡೆಯಲ್ಲಿ ಸಹಾಯವನ್ನು ಕೇಳಿದಾಗ ಮಹಿಳೆಯರು, ಮಕ್ಕಳು ತಮ್ಮ ಮೈಮೇಲೆ ಧರಿಸಿದ್ದ ಒಡವೆಗಳನ್ನು ಕೊಟ್ಟ ಅನೇಕ ಉದಾಹರಣೆಗಳಿವೆ.

ಹೀಗೆ ಗಾಂಧೀಜಿ ಅವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಹಿಳೆಯರ ಬಗ್ಗೆ ಇರಿಸಿಕೊಂಡಿದ್ದ ಗೌರವ, ಅನುಕಂಪ ಮತ್ತು ಏಳಿಗೆಯ ಬಗೆಗಿನ ಚಿಂತನೆಗಳು ತಿಳಿದುಬರುತ್ತದೆ.

ಆದರೆ ಅಂದು ಗಾಂಧೀಜಿ ಇಷ್ಟೆಲ್ಲಾ ವಿಚಾರಗಳನ್ನು ಮಹಿಳೆಯರ ಬಗೆಗೆ ಗೌರವ ಪ್ರೀತಿ ಇರಿಸಿಕೊಂಡು ಮಾಡಿದ ಕೆಲಸ ಮತ್ತು ಉಪದೇಶ ಇಂದಿಗೂ



ಸಾಮಾಜಿಕವಾಗಿ ಕಾರ್ಯರೂಪಕ್ಕೆ ಬಂದಿಲ್ಲ. ಅಂದು ಮಹಿಳೆಯರು ಕುಟುಂಬವನ್ನು ಬಿಟ್ಟು ಹೊರಗೆ ಹೋಗಿ ದುಡಿದು ಸಂಪಾದನೆ ಮಾಡುವುದು ಅಗತ್ಯವಿಲ್ಲವೆಂದು ಗಾಂಧೀಜಿ ನುಡಿದಿದ್ದರು. ಇಂದು ಗೃಹಕೃತ್ಯದ ಸಂಪೂರ್ಣ ಹೊಣೆಯನ್ನು ನಿರ್ವಹಿಸುತ್ತಿದ್ದಾಳೆ. ಮಹಿಳೆ ಪುರುಷನಿಗೆ ಸರಿಸಮನವಾಗಿ ರಾಜಕೀಯವಾಗಿ, ವೈಜ್ಞಾನಿಕವಾಗಿ ಎಲ್ಲಾ ಕ್ಷೇತ್ರಗಳಲ್ಲೂ ದುಡಿಯುತ್ತಿದ್ದಾಳೆ. ಆರ್ಥಿಕವಾಗಿ ಕುಟುಂಬಕ್ಕೆ ಬೆನ್ನೆಲುಬಾಗಿದ್ದಾಳೆ. ಪ್ರತಿದಿನ ಪತ್ರಿಕೆಗಳಲ್ಲಿ ಪ್ರಧಾನವಾಗಿ ಕಾಣಬರುತ್ತಿರುವುದು ವರದಕ್ಷಿಣೆಗೆ ಸಂಬಂಧಿಸಿದಂತೆ ಆತ್ಮಹತ್ಯೆ, ಕೊಲೆ ಪ್ರಕರಣಗಳು. ದುಡಿಯುತ್ತಿರುವ ಸ್ಥಳಗಳಲ್ಲಿ ಅವಳ ಮೇಲೆ ಆಗುತ್ತಿರುವ ಶೋಷಣೆ, ದೌರ್ಜನ್ಯ, ಲೈಂಗಿಕ ಕಿರುಕುಳ ನಿಂತಿಲ್ಲ. ಸಮಾನತೆಯ ಹೆಸರಿನಲ್ಲಿ ಆಗುತ್ತಿರುವ ಅನ್ಯಾಯಗಳನ್ನು ಕಡೆಗಣಿಸುವಂತಿಲ್ಲ.

ಬಹುಶಃ ಗಾಂಧೀಜಿಯವರ ಕನಸಿನ ಭಾರತ ನಾವು ಕಾಣಲು ಸಾಧ್ಯವೇ? ಎಂಬ ಪ್ರಶ್ನೆ ಮನದಲ್ಲಿ ಯಾವಾಗಲೂ ಕೊರೆಯುತ್ತಿರುತ್ತದೆ.

### ಗ್ರಂಥ ಋಣ :


1. ಮಹಾತ್ಮ ಗಾಂಧೀಜಿಯವರ ಸಂದೇಶ –ಯು. ಎಸ್. ಮೋಹನರಾವ್.
2. ಮಹಾತ್ಮ ಗಾಂಧಿ : 100 ವರ್ಷಗಳು –ಅನು: ಡಾ. ಎಚ್. ತಿಪ್ಪೆರುದ್ರಸ್ವಾಮಿ.
3. ನನ್ನ ಆರಂಭ ಜೀವನ – ಮೋ. ಕ. ಗಾಂಧಿ: ಕನ್ನಡಿಸಿದವರು : ಮ. ಗೋವಿಂದರಾಯರು.
4. ಗಾಂಧೀಜಿ ಅವರ ಕಥೆ – ಕೃಷ್ಣಾ ಹಥೀಸಿಂಗ್.






# ಗಾಂಧೀಜಿ ಮತ್ತು ಬೆಳಗಾವಿ ಕಾಂಗ್ರೆಸ್ ಅಧಿವೇಶನ

– ಡಾ|| ಮಹಾದೇವಿ

ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ್‌ನ ಅಧಿವೇಶನವು ಇತಿಹಾಸದ ದೃಷ್ಟಿಯಿಂದ ಕಾಂಗ್ರೆಸಿನ ಹಾಗೂ ನಾಡಿನ ಇತಿಹಾಸದ ದೃಷ್ಟಿಯಿಂದ ಅತ್ಯಂತ ಮಹತ್ವಪೂರ್ಣವಾದುದ್ದಾಗಿದೆ. ಈ ಸಮ್ಮೇಳನವು ಕಾಂಗ್ರೆಸ್ ಸಂಸ್ಥೆಯ ಬೆಳವಣಿಗೆಯ ಮೇಲೆ ಪರಿಣಾಮವನ್ನು ಉಂಟುಮಾಡಿದ್ದಲ್ಲದೆ ಮಹಾತ್ಮ ಗಾಂಧಿಯವರ ಸಿದ್ಧಾಂತದ ವಿಕಾಸದಲ್ಲೂ ಒಂದು ಮೈಲಿಗಲ್ಲಾಯಿತೆಂದು ಹೇಳಬಹುದಾಗಿದೆ. ಕಾಂಗ್ರೆಸ್ ಸಂಸ್ಥೆ ಇನ್ನೂ ಶೈಶವಾವಸ್ಥೆಯಲ್ಲಿ ಇರುವಾಗಲೇ ಈ ಸಮ್ಮೇಳನವು ರಾಜ್ಯದಲ್ಲಿ ಸ್ವಾತಂತ್ರ್ಯ ಕಿಡಿಯನ್ನು ಹಚ್ಚಿ ರಾಷ್ಟ್ರೀಯತೆಯನ್ನು ಉದ್ದೀಪನಗೊಳಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿತು. ಗಾಂಧೀಜಿಯವರ ಭೇಟಿಯಿಂದ ಅನೇಕ ಉತ್ಸಾಹಿ ಹಾಗೂ ದೇಶಪ್ರೇಮಿ ಯುವಕರು ನಾಯಕರಾಗಿ ಮುಂದೆ ಬರುವುದಕ್ಕೆ ಈ ಸಮ್ಮೇಳನ ಪ್ರೇರಣೆ ನೀಡಿತು.

ಬೆಳಗಾವಿಯು ಪ್ರಾರಂಭದಿಂದಲೂ ಸ್ವಾತಂತ್ರ್ಯ ಚಳುವಳಿಯ ಮುಂಚೂಣಿಯಲ್ಲಿದ್ದು 1885ರಲ್ಲಿ ಮುಂಬೈಯಲ್ಲಿ ಮೊದಲನೆಯ ಕಾಂಗ್ರೆಸ್ ಸಮ್ಮೇಳನ ಜರುಗಿದಾಗ ಮುಂಬೈಗೆ ಬಹು ಸಮೀಪದ್ದಾಗಿದ್ದ ಪುಣೆಯ ಮೇಲೆ ರಾಷ್ಟ್ರೀಯತೆಯ ಬಿರುಗಾಳಿಯು ಬಲವಾಗಿ ಬೀಸತೊಡಗಿತ್ತು. ಇದಾದ ನಂತರ ಬಾಲಗಂಗಾಧರ್ ತಿಳಕರು ಬೆಳಗಾವಿಗೆ ಅನೇಕ ಬಾರಿ ಭೇಟಿ ನೀಡಿದ್ದರು. ಬೆಳಗಾವಿ ನಗರ ಮಾತ್ರವಲ್ಲದೆ ಅವರು ತಾಲ್ಲೂಕು ಕೇಂದ್ರಗಳಿಗೂ ಭೇಟಿ ನೀಡಿ ಸ್ವಾತಂತ್ರ್ಯ ಚಳುವಳಿಯಲ್ಲಿ ಜನರು ಭಾಗವಹಿಸಲು ಕರೆಯಿತ್ತರು. ಹಲವಾರು ಪತ್ರಿಕೆಗಳು ಅನೇಕ ಮುಖಂಡರು ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಲು ಪ್ರಾರಂಭಿಸಿದರು. ಪುಣೆ ಮತ್ತು ಸಮೀಪದ ಬೆಳಗಾವಿಯಲ್ಲಿ ಉಗ್ರಗಾಮಿಗಳು, ಮಂದಗಾಮಿಗಳು ಬಿರುಸಿನ ಚಟುವಟಿಕೆಗಳನ್ನು ನಡೆಸಿ ಸ್ವಾತಂತ್ರ್ಯದ ಕಿಚ್ಚನ್ನು ಹಚ್ಚಿದರು. ಸ್ವದೇಶಿ ಮತ್ತು ಹೋಂ ರೂಲ್ ಚಳುವಳಿಗಳು ರಾಷ್ಟ್ರೀಯ ಚಳುವಳಿ ಬೇರೂರುವಂತೆ ಮಾಡಿದವು. ಮಹಾತ್ಮ ಗಾಂಧೀಯವರು 1920 ರಲ್ಲಿ ಬೆಳಗಾವಿಗೆ ಬಂದು ಸಾರ್ವಜನಿಕ ಸಭೆಗಳನ್ನು ಉದ್ದೇಶಿಸಿ ಭಾಷಣಗಳನ್ನು ಮಾಡಿದರು. ಗಾಂಧೀಜಿಯವರು ತಿಲಕರ ಸ್ವರಾಜ್ಯ ನಿಧಿಗೆ ಜನರಿಗೆ ಹಣ ಸಂಗ್ರಹಿಸಲು ಕರೆಯಿತ್ತರು. ಅದು ಅಲ್ಲಿನ ಜನರಲ್ಲಿ ದೇಶಾಭಿಮಾನ ವೃದ್ಧಿಸಿತು.

1924ರಲ್ಲಿ ಕಾಂಗ್ರೆಸ್ ಸಂಸ್ಥೆಯು ಸಂದಿಗ್ಧ ಪರಿಸ್ಥಿತಿಯನ್ನು ಎದುರಿಸುತ್ತಿದ್ದು, ಗಾಂಧೀಜಿಯವರು ಆಗ ತಾನೇ ಅಸಹಕಾರ ಚಳುವಳಿಯನ್ನು ನಿಲ್ಲಿಸಲು ಮನವಿ ಮಾಡಿದರು. ಇದೂ ಅಲ್ಲದೆ ಅನೇಕ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಹುಟ್ಟಿಕೊಂಡು, ಕಾಂಗ್ರೆಸ್ ಸಂಸ್ಥೆಯನ್ನು ಇಬ್ಭಾಗ ಮಾಡಲು ಹೊರಟಿದ್ದವು. ಸ್ವರಾಜ್ಯವಾದಿಗಳು ಪರಿವರ್ತನಾ ವಿರೋಧಿಗಳ (No changer) ಪರಸ್ಪರ ಘರ್ಷಣೆಗಳಲ್ಲಿ ತೊಡಗಿದ್ದರು. ಇಂತಹ ಸ್ಥಿತಿಯಲ್ಲಿ ಸ್ವಾತಂತ್ರ್ಯ ಚಳುವಳಿಯು ತೀವ್ರವಾದ ಬಿಕ್ಕಟ್ಟಿಗೆ ಸಿಲುಕಿದಂತೆ ಕಂಡುಬಂದಿದ್ದು ಈ ರೀತಿಯ ಸೂಕ್ಷ್ಮ ಪರಿಸ್ಥಿತಿಯಲ್ಲಿ ಮಹಾತ್ಮ ಗಾಂಧಿಯವರನ್ನು ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿದ್ದು, ಅತ್ಯಂತ ಸಮಂಜಸವಾಗಿತ್ತೆಂದು ಹೇಳಬಹುದು. ಗಾಂಧೀಜಿಯವರು ಮಾತ್ರ ಈ ಸಂದಿಗ್ಧ ಸ್ಥಿತಿಯಿಂದ ಕಾಂಗ್ರೆಸ್ಸನ್ನು ಪಾರು ಮಾಡಿ ರಾಷ್ಟ್ರಕ್ಕೆ ಸೂಕ್ತ ಮಾರ್ಗದರ್ಶನವನ್ನು ನೀಡಬಲ್ಲರೆಂದು ಕಾಂಗ್ರೆಸ್ ನಾಯಕರು ನಂಬಿದ್ದು ಸ್ವಾಭಾವಿಕವಾಗಿದ್ದಿತು.

1924ರ ಡಿಸೆಂಬರ್ 26 ರಂದು ನಡೆದ ಕಾಂಗ್ರೆಸಿನ 39ನೇ ಅಧಿವೇಶನವು ಒಂದು ಅದ್ದೂರಿಯ ಬೃಹತ್ ಸಮಾವೇಶವಾಗಿದ್ದು, ಒಂದು ಲಕ್ಷಕ್ಕಿಂತಲೂ ಹೆಚ್ಚು ಜನರು ಅದರಲ್ಲಿ ಭಾಗವಹಿಸಿದರು. ಭಾರತದ 20 ರಾಜ್ಯಗಳಿಂದ ಮತ್ತು ಪ್ರಾಂತ್ಯಗಳಿಂದ ಮಾತ್ರವಲ್ಲದೆ ಇಂದಿನ ಪಾಕಿಸ್ತಾನ, ಆಫ್ಘಾನಿಸ್ತಾನ, ಬರ್ಮಾದಿಂದಲೂ ಪ್ರತಿನಿಧಿಗಳು ಇಲ್ಲಿಗೆ ಬಂದಿದ್ದರು. ಬೆಳಗಾವಿಯಲ್ಲಿ ಒಂದು ಹಬ್ಬದ ವಾತಾವರಣ ಏರ್ಪಟ್ಟಿದ್ದಿತು. ಬೆಳಗಾವಿಯ ಜನರು ಮಾತ್ರವಲ್ಲದೆ ಜಿಲ್ಲೆಯ ನಾನಾ ಭಾಗಗಳಿಂದ ಸ್ವಾತಂತ್ರ್ಯ ಪ್ರೇಮಿಗಳು



ಗಾಂಧೀಜಿಯವರನ್ನು ನೋಡಲೆಂದೇ ಅಲ್ಲಿಗೆ ಆಗಮಿಸಿದರು. ಸಮ್ಮೇಳನದ ಸ್ವಾಗತ ಸಮಿತಿಯ ಪ್ರಮುಖರಾಗಿದ್ದ ಗಂಗಾಧರ್‌ರಾವ್ ದೇಶಪಾಂಡೆ ಯವರು ಅಧಿವೇಶನಕ್ಕೆ ಬೇಕಾದ ಎಲ್ಲಾ ವ್ಯವಸ್ಥೆಗಳನ್ನು ಮಾಡಿದ್ದರು. ಕೂಡಲು ಉತ್ತಮವಾದ ಆಸನಗಳು, ಎಲ್ಲರಿಗೂ ಬಾಳೆ ಎಲೆಯ ಮೇಲೆ ಸ್ವಚ್ಛ ರುಚಿಕರ ಭೋಜನ, ಎಲ್ಲೆಲ್ಲೂ ಶಿಸ್ತಿನಿಂದ ಕಾರ್ಯ ನಿರ್ವಹಿಸುತ್ತಿದ್ದ ಸ್ವಯಂ ಸೇವಕರು ಅಧಿವೇಶನಕ್ಕೆ ವಿಶೇಷ ಕಳೆಯನ್ನು ತಂದುಕೊಟ್ಟಿದ್ದರು.

ಬೆಳಗಾವಿ ಪೌರಸಭೆ ಗಾಂಧೀಜಿಯವರನ್ನು ಸ್ವಾಗತಿಸಿ ಅವರಿಗೆ ಬಿನ್ನವತ್ತಳೆಯನ್ನು ಸಮರ್ಪಿಸಿತು. ಗಾಂಧೀಜಿಯವರು ತಮ್ಮ ಉತ್ತರದಲ್ಲಿ ಎಲ್ಲಾ ಪೌರಸಭೆಗಳೂ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಬೇಕು. ನಗರದ ನೈರ್ಮಲ್ಯಕ್ಕೆ ಹೆಚ್ಚು ಗಮನ ನೀಡಬೇಕು. ಪಾಶ್ಚಿಮಾತ್ಯರಿಂದ ನಾವು ಕಲಿಯಬೇಕಾದುದ್ದು ಬಹಳವಿದೆ ಎಂದು ಹೇಳಿದರು. ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ ಗಾಂಧೀಜಿಯವರು ಕೆಲವು ಮುಖ್ಯವಾದ ವಿಚಾರಗಳನ್ನು ಒತ್ತಿ ಹೇಳಿದ್ದರು. ಹಿಂದೂ ಮುಸ್ಲಿಂ ಐಕ್ಯತೆ, ಗ್ರಾಮೋದ್ಧಾರ, ಸ್ವರಾಜ್ಯ ಪಕ್ಷ ಮತ್ತು ಪರಿವರ್ತನ ವಿರೋಧಿಗಳ ನಡುವಿನ ಭಿನ್ನಾಭಿಪ್ರಾಯ ನಿವಾರಣೆ ಮುಂತಾದ ಅಂಶಗಳನ್ನು ಅವರು ಒತ್ತಿ ಹೇಳಿದರು. ಬೆಳಗಾವಿಯಲ್ಲಿ ಇದೇ ಸಂದರ್ಭದಲ್ಲಿ ಹಲವಾರು ಸಮ್ಮೇಳನಗಳು ಜರುಗಿದ್ದವು. ಶಿಕ್ಷಕರ ಪರಿಷತ್, ವಿದ್ಯಾರ್ಥಿಗಳ ಸಭೆ, ಗೋರಕ್ಷಣಾ ಸಮ್ಮೇಳನ, ಅಸ್ಪೃಶ್ಯತೆ ನಿವಾರಣಾ ಸಮ್ಮೇಳನ, ಆಯುರ್ವೇದ ಸಮ್ಮೇಳನ, ಪ್ರಕೃತಿ ಚಿಕಿತ್ಸಾ ಸಮ್ಮೇಳನ ಮುಂತಾದವುಗಳು ಇದೇ ಸಂದರ್ಭದಲ್ಲಿ ಜರುಗಿದ್ದು ಅಧಿಕ ಸಂಖ್ಯೆಯ ಪ್ರತಿನಿಧಿಗಳು ಅದರಲ್ಲಿ ಭಾಗವಹಿಸಿದರು.

ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನವು ಮಹಾತ್ಮ ಗಾಂಧಿಯವರ ಆಗಮನದಿಂದ ಒಂದು ಐತಿಹಾಸಿಕವಾದ ಸಮ್ಮೇಳನವಾಯಿತೆಂದು ಹೇಳಬಹುದು. ಈ ಸಮ್ಮೇಳನವನ್ನು ಐಕ್ಯತೆಯ ಸಮ್ಮೇಳನವೆಂದು ಹೇಳಲಾಗಿದೆ. ಇದು ಕೋಮು ಸಾಮರಸ್ಯವನ್ನು ಸಾಧಿಸಿ ಭಾವೈಕ್ಯತೆಗೆ ಎಡೆ ಮಾಡಿಕೊಟ್ಟಿತ್ತೆಂದು ಹೇಳಲಾಗಿದೆ. ಈ ಸಮ್ಮೇಳನವು ರಾಷ್ಟ್ರೀಯತೆಯ ಬೆಳವಣಿಗೆಗೆ ಅಗತ್ಯವಾದ ಸಿದ್ಧಾಂತವನ್ನು ಜನತೆಗೆ ನೀಡಿತ್ತೆಂದು ಹೇಳಬಹುದು. ಬೆಳಗಾವಿಯ ಕಾಂಗ್ರೆಸ್ ಅಧಿವೇಶನವು ಸ್ವಾತಂತ್ರ್ಯಕ್ಕಾಗಿ ತ್ಯಾಗ ಬಲಿದಾನ ಮಾಡಲು ಜನರಿಗೆ ಪ್ರೇರಣೆ ನೀಡಿತು. ಪಟ್ಟಾಭಿ ಸೀತಾರಾಮಯ್ಯನವರು ಹೇಳುವಂತೆ ಅಸಹಕಾರ ಇತಿಹಾಸದಲ್ಲಿ ಬೆಳಗಾವಿಯ ಕಾಂಗ್ರೆಸ್ ಒಂದು ಮುಖ್ಯ ಘಟ್ಟ. ಗಾಂಧೀವಾದದ ಬಹಿಷ್ಕಾರ ಪದ್ಧತಿಯ ವಿರುದ್ಧ ಎದ್ದಿದ್ದ ಬಂಡು ಅಲ್ಲಿ ಶಾಂತವಾಯಿತು. ಕಾಂಗ್ರೆಸ್ ಎರಡು ಬಣವಾಗಿ ಒಡೆಯದಂತೆ ಇಡೀ ಕಾಂಗ್ರೆಸ್ಸನ್ನು ಒಗ್ಗೂಡಿಸಲು ಗಾಂಧೀಜಿಯವರಿಗೆ ಮಾತ್ರ ಸಾಧ್ಯವಾಗಿದ್ದಿತು. ಶಾಸನ ಸಭೆ ಪ್ರವೇಶ ನಿಷೇಧಿಸಬೇಕು. ಆದರೆ ಸ್ವರಾಜ್ಯ ಪಕ್ಷಕ್ಕೆ ಘಾಸಿಯಾಗಬಾರದು. ಇಂತಹ ಸ್ಥಿತಿಯಲ್ಲಿ ಗಾಂಧೀಜಿಯವರು ಅಧ್ಯಕ್ಷರಾಗಿ ಪರಿಸ್ಥಿತಿಯನ್ನು ತಿಳಿಗೊಳಿಸಿದರು. ಯಾವುದಾದರೂ ಮಹಾಕಾರ್ಯ ವನ್ನು ಸಾಧಿಸಲು ಮಹಾಪುರುಷರೇ ಬೇಕು. ಅಂತಹ ಮಹಾ ಕಾರ್ಯವನ್ನು ಉಪ ಸಂಹರಿಸಲು ಗಾಂಧೀಜಿಯವರೇ ಸೂಕ್ತ. ಆದ್ದರಿಂದ ಬೆಳಗಾವಿ ಕಾಂಗ್ರೆಸ್ಸಿಗೆ ಗಾಂಧಿ ಅಧ್ಯಕ್ಷರಾದುದು ಆ ಕಾಲದ ದೃಷ್ಟಿಯಿಂದ ಅತ್ಯಂತ ಯೋಗ್ಯವಾಗಿದ್ದು ಗಾಂಧೀಜಿಯವರು ಈ ಸಮ್ಮೇಳನದಲ್ಲಿ ಅಸ್ಪೃಶ್ಯತೆ ನಿವಾರಣೆ ಹಿಂದೂ ಮುಸ್ಲಿಂ ಐಕ್ಯತೆ ಖಾದಿ ಗ್ರಾಮೋದ್ಯೋಗ ಮುಂತಾದ ಅಂಶಗಳನ್ನು ಒತ್ತಿ ಹೇಳಿದರು.

ಗಾಂಧೀಜಿಯವರ ಕಾರ್ಯದರ್ಶಿಗಳಾಗಿದ್ದ ಮಹಾದೇವ ದೇಸಾಯಿರವರು ಈ ಅಧಿವೇಶನವನ್ನು ಈ ರೀತಿಯಲ್ಲಿ ಸ್ಮರಿಸುತ್ತಾರೆ. "ಬೆಳಗಾವಿಯ ನೆನಪು ಪುಣ್ಯ ತೀರ್ಥದ ರೂಪದಲ್ಲಿ ಆಗುತ್ತದೆ. ಗಾಂಧೀಜಿಯವರು ಅಧ್ಯಕ್ಷರಾಗಿ ಬಂದಿದ್ದು ಕರ್ನಾಟಕದ ಭಾಗ್ಯವೆನ್ನಬಹುದು. 7-8 ದಿನ ಗಾಂಧೀಜಿಯವರ ವಿಚಾರ ಕಾರ್ಯಕ್ರಮಗಳಿಂದ ಬೆಳಗಾವಿಯ ವಾತಾವರಣ ಪುನೀತವಾಗಿತ್ತು. ಎಲ್ಲಾ ರಾಷ್ಟ್ರೀಯ ನಾಯಕರು ಗಾಂಧೀಜಿಯವರ ವಿಚಾರಧಾರೆಯಿಂದ ಪ್ರಭಾವಿತರಾಗಿದ್ದರು. ಗಂಗಾಧರ್‌ರಾಯರ ಪ್ರೇಮದಿಂದ ತುಂಬಿದ ವಾತಾವರಣ ಶಿಕ್ಷಣ ಹಾಗೂ ಅಜ್ಞಾಪಾಲನೆಯ ರಹಸ್ಯವನ್ನು ತಿಳಿದ ಸ್ವಯಂ ಸೇವಕರ ಭಕ್ತಿ ಮತ್ತು ಶಿಸ್ತು ಸಮ್ಮೇಳನದ ಯಶಸ್ಸಿಗೆ ಕಾರಣವಾದವು. ಬೆಳಗಾವಿ ಅಧಿವೇಶನದ ಸಂದರ್ಭದಲ್ಲಿ ಗಂಗಾಧರ



ದೇಶಪಾಂಡೆಯವರು ಶ್ರೇಷ್ಠಮಟ್ಟದ ನಾಯಕರಾಗಿ ಬೆಳೆಯಲು ಅವಕಾಶವಾಯಿತು. ಅವರಲ್ಲದೆ ಇತರ ನಾಯಕರು ಮುಂದೆ ಬಂದರು. ಜಯದೇವ ಕುಲಕರ್ಣಿ ಅವರು ಮುಂದೆ ಚಲೇಜಾವ್ ಚಳವಳಿಯಲ್ಲಿ ಪ್ರಧಾನ ಪಾತ್ರ ವಹಿಸಿದರು. ಶ್ರೀರಂಗ ಕಾಮತ್ ಅವರು 1930ರ ಚಳುವಳಿಯ ಮುಂಚೂಣಿಯಲ್ಲಿದ್ದರು. ವಾಮನರಾವ್ ಅವರು "ವೀರವಾಮನರಾವ್" ಎಂದು ಹೆಸರು ಗಳಿಸಿ ಚಳವಳಿ ನಡೆಸಿದರು. ಚನ್ನಪ್ಪವಾಲಿ, ಬೆಳಗಾವಿಯ ಮತ್ತೊಬ್ಬ ಉಗ್ರ ಹೋರಾಟಗಾರರಾಗಿದ್ದರು. ಅಣ್ಣ ಗುರೂಜಿ, ರಾಮಚಂದ್ರ ವಡವಿ ಮುಂತಾದ ಅನೇಕ ಸ್ವಾತಂತ್ರ್ಯ ಯೋಧರು ಬೆಳಗಾವಿ ಅಧಿವೇಶನದಲ್ಲಿ ದೀಕ್ಷೆ ಪಡೆದ ಪ್ರಸಿದ್ಧ ನಾಯಕರಾದರು.

ಬೆಳಗಾವಿ ಅಧಿವೇಶನ ಕರ್ನಾಟಕದಲ್ಲಿ ಮಾತ್ರವಲ್ಲದೆ ಭಾರತದೆಲ್ಲೆಡೆ ಸ್ವಾತಂತ್ರ್ಯದ ಕಹಳೆಯನ್ನು ಮೊಳಗಿತು. ಬೆಳಗಾವಿ ಗಾಂಧೀ ತತ್ವದ ಪ್ರಮುಖ ಕೇಂದ್ರವಾಯಿತು. ಅನೇಕ ಗಾಂಧೀವಾದಿಗಳು ಇಲ್ಲಿಂದ ಸ್ಪೂರ್ತಿಪಡೆದು ರಾಷ್ಟ್ರೀಯ ಚಳುವಳಿಯನ್ನು ಮುನ್ನಡೆಸಿದರು. ಅಂದಿನಿಂದ ಕಾಂಗ್ರೆಸ್ ಸಾಮಾನ್ಯ ಜನರ ಚಳುವಳಿಯಾಗಿ ರೂಪುಗೊಂಡಿತು.

1924ರಲ್ಲಿ ನಡೆದ ಬೆಳಗಾವಿ ಅಧಿವೇಶನದಲ್ಲಿ ಹೊರಗಿನ ಪ್ರತಿನಿಧಿಗಳಿಗೆ ಕರ್ನಾಟಕದ ಸಂಸ್ಕೃತಿಯನ್ನು ಪರಿಚಯ ಮಾಡಿಕೊಡಲು ಸ್ವಾಗತ ಸಮಿತಿ ಕೆಲವು ಕ್ರಮಗಳನ್ನು ಕೈಗೊಳ್ಳಲಾಗಿದ್ದಿತು. ಅಧಿವೇಶನದ ಆವರಣವನ್ನು ವಿಜಯನಗರವೆಂದು ಮುಖ್ಯ ಬೀದಿಗೆ ವಿದ್ಯಾರಣ್ಯ ಮಾರ್ಗವೆಂದು ಹೆಸರನ್ನು ಇಡಲಾಯಿತು. ಅಧಿವೇಶನದಲ್ಲಿ ವಿಜಯನಗರದ ರೀತಿಯ ಗೋಪುರವನ್ನು ನಿರ್ಮಿಸಲಾಗಿದ್ದಿತು. ಕಾಂಗ್ರೆಸ್ ಅಧಿವೇಶನದಲ್ಲಿ ಪ್ರಸಿದ್ಧ ಸಂಗೀತಜ್ಞ ವೀಣೆಶೇಷಣ್ಣನವರ ವೀಣಾವಾದನವನ್ನು ಏರ್ಪಡಿಸಲಾಗಿದ್ದಿತು.

ಒಟ್ಟಿನಲ್ಲಿ ಬೆಳಗಾವಿಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನವು ಕೇವಲ ಒಂದು ಶುಷ್ಕವಾದ ವಾರ್ಷಿಕ ಅಧಿವೇಶನವಾಗಿರದೆ ಸಾಮ್ರಾಜ್ಯದ ರಾಜಕೀಯಕ್ಕೆ ಒಂದು ತಿರುವು ನೀಡಿದ ಮಹತ್ವದ ಘಟನೆಯಾಗಿ ದಾಖಲಾಯಿತು. ಆ ಸಂದರ್ಭದಲ್ಲಿ ಕಾಂಗ್ರೆಸ್‌ಗೆ ಸಂಬಂಧಿಸಿದ ವಿವಾದಗಳಿಗೆ ಗಾಂಧೀಜಿಯವರು ತೆರೆ ಎಳೆದು ಸಂಸ್ಥೆಯನ್ನು ಬಲಪಡಿಸಿದರು. ಗಾಂಧೀ ತತ್ವಗಳ ನೈಜ ದರ್ಶನವನ್ನು ಪಡೆದ ಕರ್ನಾಟಕದ ಜನ ಅವರ ಮಾರ್ಗವನ್ನೂ ಅನುಸರಿಸಿ ಮುನ್ನಡೆಯಲು ಸಿದ್ಧರಾದರು.

ಡಾ॥ ಮಹಾದೇವಿ
ಸಹ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಇತಿಹಾಸ ವಿಭಾಗ
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು





# ದಂಡೀಯಾತ್ರೆಯ ಸುತ್ತಮುತ್ತ

– ಮ.ವೆಂ.ಶ್ರೀ

ಮಹಾತ್ಮಗಾಂಧೀಯವರು 1930ರಲ್ಲಿ ನಡೆಸಿದ ದಂಡಿ ಸತ್ಯಾಗ್ರಹ ದಂಡಿಗ್ರಾಮಕ್ಕೆ ಸಂಚಾರ ಮಾಡಿ ನಡೆಸಿದ ಉಪ್ಪಿನ ಸತ್ಯಾಗ್ರಹ. ಅನಂತರ ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧ ಅವರು ನಡೆಸಿದ ಕಾನೂನು ಭಂಗ ಚಳುವಳಿ ಆಧುನಿಕ ಇತಿಹಾಸದ ಅತ್ಯಂತ ಮಹತ್ವದ ಘಟನೆಗಳಲ್ಲಿ ಮುಖ್ಯವಾದುದೆಂದು ಹೇಳಬಹುದು. ಈ ರೋಮಾಂಚಕವಾದ ಘಟನೆಯಲ್ಲಿ ಪಾಲ್ಗೊಂಡು ಪ್ರತಿಯೊಂದು ದಿನದ ಪ್ರತಿಯೊಂದು ಘಟನೆಯ ವಿವರವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುವ ಪುಸ್ತಕ ಥಾಮಸ್ ವೆಬರ್ (THOMAS WEBAR) ಬರೆದ ಆನ್ ದಿ ಸಾಲ್ಟ್ ಮಾರ್ಚ್ (ON THE SALT MARCH) ಎಂಬ ಗ್ರಂಥ, ಭಾರತದ ಸ್ವಾತಂತ್ರ್ಯ ಸಂಗ್ರಾಮದ ಒಂದು ಅಪೂರ್ವ ಘಟ್ಟದ ಅರ್ಥವತ್ತಾದ ಚಿತ್ರಣವನ್ನು ನೀಡುತ್ತದೆ. ಇದು ಕೇವಲ ಗಾಂಧೀಜಿಯವರು ನಡೆಸಿದ ದಂಡಿ ಯಾತ್ರೆ ಮಾತ್ರವಲ್ಲದೇ ಗಾಂಧೀಜಿಯವರ ಜೀವನ ಯಾತ್ರೆಯ ಸತ್ಯ ಸಂಗತಿಯನ್ನು ಎತ್ತಿ ತೋರಿಸುವ ಸುಂದರವಾದ ಕೃತಿಯಾಗಿದೆ. ದಂಡಿಯಾತ್ರೆ ಸಂದರ್ಭ, ಅದು ನಡೆದ ರೀತಿ, ಅದರ ಪರಿಣಾಮಗಳು, ಸ್ವಾರಸ್ಯಗಳನ್ನು ಕಣ್ಣಿಗೆ ಕಟ್ಟುವಂತೆ ಈ ವಿದ್ವತ್‌ಪೂರ್ಣ ಕೃತಿಯಲ್ಲಿ ಚಿತ್ರಿಸಲಾಗಿದೆ. 700 ಪುಟಗಳಷ್ಟು ಸುಧೀರ್ಘವಾದ ವರ್ಣನೆಯಲ್ಲಿ ಲೇಖಕರು ಸ್ವಾತಂತ್ರ್ಯ ಚಳುವಳಿಯ ತತ್ವ ಸಂದೇಶಗಳನ್ನು ಭಾರತೀಯರು ಅದರಲ್ಲಿ ಪಾಲ್ಗೊಂಡ ಬಗೆಯನ್ನು ಬಹು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ಥಾಮಸ್ ವೆಬರ್ ದಂಡಿಯಾತ್ರೆ ಭಾರತದ ಸ್ವಾತಂತ್ರ ಸಂಗ್ರಾಮದಲ್ಲಿ ಒಂದು ಅಪೂರ್ವ ಅಧ್ಯಾಯ. ಆದರೆ ಅದರ ವಿವಿಧ ಮುಖಗಳು ತಮ್ಮ ಅರಿವಿಗೆ ಬಾರದೆ ಹೋಗಿದೆ ಎಂದು ಹೇಳಿ ಈ ಸಂದರ್ಭದಲ್ಲಿ ಸ್ಥಳೀಯ ಜನರ ಪ್ರತಿಕ್ರಿಯೆಯನ್ನು ಅವರ ಕೊಡುಗೆಯನ್ನು ತಮ್ಮ ಅನುಭವದ ನೆಲೆಯಲ್ಲಿ ನಿರೂಪಿಸಿದ್ದಾರೆ. ದಂಡಿ ಸತ್ಯಾಗ್ರಹದ ಹಿನ್ನೆಲೆಯನ್ನು ವಿವರಿಸುತ್ತಾ ಗಾಂಧೀಜಿಯವರು ತಮ್ಮ ನಾಯಕತ್ವದಲ್ಲಿ ಸತ್ಯಾಗ್ರಹಿಗಳನ್ನು ಸಂಘಟಿಸಿ ನಗರವಾಸಿ ಮತ್ತು ಗ್ರಾಮೀಣ ಜನರನ್ನು ಒಗ್ಗೂಡಿಸಿ ಚಳುವಳಿಯನ್ನು ರಾಷ್ಟ್ರಮಟ್ಟದ ಹೋರಾಟವನ್ನಾಗಿ ಪರಿವರ್ತಿಸಿದ ರೆಂಬುದನ್ನು ತಿಳಿಸುತ್ತಾರೆ. ಇದು ಒಡೆದಿದ್ದ ಕಾಂಗ್ರೆಸ್ಸನ್ನು ಒಗ್ಗೂಡಿಸುವ ಒಂದು ತಂತ್ರವು ಆಗಿದ್ದಿತು. ಈ ಘಟನೆ ಕಾಂಗ್ರೆಸ್ಸಿನ ಆಡಳಿತ ಘಟಕದ ವ್ಯವಸ್ಥೆಯನ್ನು ಬಳಸದೇ ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧ ಹೋರಾಟಕ್ಕೆ ಗಾಂಧೀಜಿಯವರು ನಡೆಸಿದ ಒಂದು ಪ್ರಯತ್ನವೆಂದು ಇಲ್ಲಿ ವ್ಯಾಖ್ಯಾನಿಸಿದ್ದಾರೆ.

ಗಾಂಧೀಜಿಯವರ ದಂಡಿ ಸತ್ಯಾಗ್ರಹ ಸ್ಥಳೀಯರಲ್ಲಿ ರಾಷ್ಟ್ರೀಯ ಭಾವನೆಯನ್ನು ಪ್ರಚೋದಿಸುವಲ್ಲಿ ಯಶಸ್ವಿಯಾಯಿತು. ಪತಿಧಾರ ಮೊದಲಾದ ವರ್ಗಗಳಲ್ಲಿ ರಾಷ್ಟ್ರೀಯ ಭಾವನೆಯನ್ನು ಪ್ರಚೋದಿಸಿ ರಾಷ್ಟ್ರೀಯ ಆಂದೋಲನಕ್ಕೆ ಅವರನ್ನು ಸಜ್ಜುಗೊಳಿಸುವುದು ಗಾಂಧೀಜಿಯವರ ಉದ್ದೇಶವಾಗಿತ್ತು. ಕೋಮು ಸೌಹಾರ್ದವನ್ನು ಪ್ರೋತ್ಸಾಹಿಸುವುದು ಗಾಂಧೀಜಿಯವರ ಮುಖ್ಯ ಗುರಿಯಾಗಿದ್ದಿತು. ಮಹಾತ್ಮರು ಸಾಕಷ್ಟು ಅಲ್ಪ ಸಂಖ್ಯಾತ ನಾಯಕರು ಸತ್ಯಾಗ್ರಹದಲ್ಲಿ ತೊಡಗುವಂತೆ ಪ್ರೇರೇಪಣೆ ಮಾಡಿದ್ದರು. ದಂಡಿ ಸತ್ಯಾಗ್ರಹವನ್ನು ಉದ್ಘಾಟಿಸಿದ್ದು ಇಮಾಮ್ ಸಾಹೇಬ್ ಬೇವಾಜಿ. ಗಾಂಧೀಜಿಯವರು ಅಂದು ಉಳಿದುಕೊಂಡಿದ್ದು ಸಿರಾಜುದ್ದೀನ್‌ಸೇಟ್ ಅವರ ಮುಸ್ಲಿಂ ಬಂಗಲೆಯಲ್ಲಿ. ಸತ್ಯಾಗ್ರಹದ ಅವಧಿಯಲ್ಲಿ ಸ್ವಯಂ ಸೇವಕರ ನಾಯಕತ್ವವನ್ನು ವಹಿಸಿದ್ದವರು ಅಬ್ಬಾಸ್ ಥ್ಯಾಬ್‌ಜಿ.

ದಂಡಿಯಾತ್ರೆಯ ಅವಧಿಯಲ್ಲಿ ಸ್ವಯಂ ಸೇವಕರಿಗೆ ಶಿಸ್ತು ಪಾಲನೆ ಮತ್ತು ಸತ್ಯಾಗ್ರಹದ ತತ್ವಗಳ ಆಚರಣೆಯನ್ನು ಗಾಂಧೀಜಿಯವರು ಪ್ರತಿಯೊಬ್ಬರಿಗೂ ಅರ್ಥವಾಗುವಂತೆ ಮನದಟ್ಟು ಮಾಡಿಕೊಟ್ಟರು. ಹೀಗೆ ಮೂವತ್ತು ದಿನಗಳ ಕಾಲ ಸತ್ಯಾಗ್ರಹವು ಒಂದು ಜ್ವಲಂತ ಪಾಠಶಾಲೆಯಾಗಿತ್ತು. ಗಾಂಧೀಜಿಯವರ ಧ್ಯೇಯ ಧೋರಣೆಗಳ ಮುಕ್ತ ಪ್ರದರ್ಶನವಾಗಿದ್ದಿತು. ಥಾಮಸ್



ವೆಬರ್ ತಮ್ಮ ಈ ಪುಸ್ತಕದಲ್ಲಿ ಭಾರತೀಯರ ಜೀವನ ಕ್ರಮದಲ್ಲಿ ಉಪ್ಪಿನ ಮಹತ್ವವನ್ನು ಕುರಿತ ಸ್ವಾರಸ್ಯಕರ ಭಾರತೀಯರ ಭೋಜನದಲ್ಲಿ ಆರೋಗ್ಯದಲ್ಲಿ, ಸಾಹಿತ್ಯದಲ್ಲಿ, ಜನಪದ ಸಾಹಿತ್ಯದಲ್ಲಿ, ಉಪ್ಪಿನ ಪ್ರಸ್ತಾಪವನ್ನು ಇಲ್ಲಿ ವಿವರಿಸಿದ್ದಾರೆ. ಲೈಂಗಿಕ ಜೀವನದಲ್ಲಿ ಹಾಗೂ ಮಾನವಶಾಸ್ತ್ರದಲ್ಲಿ ಉಪ್ಪಿನ ಪಾತ್ರವೇನು ? ಎಂಬುದನ್ನು ಅನೇಕ ಆಧಾರಗಳೊಡನೆ ವಿವರಿಸಿದ್ದಾರೆ. ಗಾಂಧೀಜಿಯವರು ಬಹಳ ವರ್ಷಗಳ ಕಾಲ ಉಪ್ಪಿನ ಬಳಕೆಯನ್ನು ಬಿಟ್ಟು ಬಿಟ್ಟಿದ್ದರು. 1930ರಲ್ಲಿ ಅದನ್ನು ಮಿತವಾಗಿ ಬಳಸುತ್ತಿದ್ದರು.

ದಂಡಿಯಾತ್ರೆ ಗಾಂಧೀಜಿಯವರ ಒಂದು ಯಶಸ್ವಿ ಸತ್ಯಾಗ್ರಹ ತತ್ವದ ಪ್ರಯೋಗ. ಅದರ ಕ್ಷಣಕ್ಷಣದ ಸ್ವಾರಸ್ಯಗಳನ್ನು ಲೇಖಕರು ಪದರ ಪದರವಾಗಿ ಬಿಡಿಸುತ್ತಾ ಹೋಗುತ್ತಾರೆ. ಸತ್ಯಾಗ್ರಹಿಗಳು ನಡೆದು ಹೋಗುವಾಗ ಸಿಕ್ಕುತ್ತಿದ್ದ ಅವರು ಕಂಡ ಗ್ರಾಮಗಳು, ಜನ ಸಮುದಾಯಗಳು, ಬೆಟ್ಟ-ಗುಡ್ಡ, ಸಸ್ಯ-ಸಂಪದ, ಹವಾಮಾನ ಇವುಗಳನ್ನು ಕಣ್ಣಿಗೆ ಕಟ್ಟುವಂತೆ ವಿವರಿಸಿದ್ದಾರೆ. ಮಾರ್ಗದಲ್ಲಿ ಕೆಲವು ಬಹಳಷ್ಟು ಹಿಂದುಳಿದ ಪ್ರದೇಶಗಳಲ್ಲಿ ಶೌಚಾಲಯವಿಲ್ಲದ ಹಳ್ಳಿಗಳಲ್ಲಿ, ಶಾಲಾ - ಕಟ್ಟಡಗಳಲ್ಲಿ, ಗುಡಿಸಲು, ಮಂಟಪಗಳಲ್ಲಿ, ಸತ್ಯಾಗ್ರಹಿಗಳು ತಂಗಿರುತ್ತಿದ್ದರು. ಆದರೂ ಅವರ ಉತ್ಸಾಹ, ಶ್ರದ್ಧೆ, ಆಸಕ್ತಿ ಎಂದಿಗೂ ಕುಂದಿರಲಿಲ್ಲ. ಯಾತ್ರೆಯ ಪ್ರತಿಯೊಂದು ದಿನದಲ್ಲೂ ಗಾಂಧೀಜಿಯವರು ಸ್ಥಳೀಯರನ್ನು ಸಂಭೋದಿಸಿ, ಭಾಷಣ ಮಾಡಿ, ಅವರಲ್ಲಿ ರಾಷ್ಟ್ರೀಯ ಪ್ರಜ್ಞೆ ಉದ್ದೀಪನಗೊಳ್ಳುವಂತೆ ಮಾಡುತ್ತಿದ್ದರು. ಹಳ್ಳಿ ಜನರಿಗೆ ಅರ್ಥವಾಗುವಂತೆ ಗ್ರಾಮೀಣ ಪರಿಭಾಷೆಯನ್ನು ಬಳಸಿ ಅವರ ಮನ ಒಲಿಸಲು ಪ್ರಯತ್ನಿಸಿದರು. ಮೋಕ್ಷವನ್ನು ಸಾಧಿಸಲು ಹಿಮಾಲಯಕ್ಕೆ ಹೋಗುವ ಬದಲು ಬ್ರಿಟಿಷರ ಪೈಶಾಚಿಕ ಸರ್ಕಾರವನ್ನು ಕಿತ್ತೊಗೆಯುವುದು ಹೆಚ್ಚಿನ ಧರ್ಮ ಕಾರ್ಯವೆಂದು ಅವರು ಒತ್ತಿ ಹೇಳಿದರು. ಕೋಮು ಸೌಹಾರ್ದ ಸಾಧಿಸುವವರೆವಿಗೂ ನಾವು ನಾಸ್ತಿಕರಾಗಿ ಇರುತ್ತೇವೆ ಎಂದು ಎಚ್ಚರಿಕೆ ನೀಡಿದರು. ದಂಡಿಯಾತ್ರೆಯ ದಾರಿಯುದ್ದಕ್ಕೂ ಸ್ಥಳೀಯ ಜನರು ಗಾಂಧೀಜಿಯವರಿಗೆ ಪೂರ್ಣವಾದ ನಿಷ್ಠೆಯನ್ನು, ಗೌರವವನ್ನು ಪ್ರದರ್ಶಿಸಿದರು. ಗೋಪಾಲದಾಸ್‌ರವರಂತ ಸಂಸ್ಥಾನಿಕರು, ಶ್ರೀಮಂತರೂ, ಬಡವರು ಗಾಂಧಿಯವರನ್ನು ಸಂಧಿಸಿ ಕೆಲವರು ನಿಧಿ ಸಮರ್ಪಿಸಿದರು. ಇತರರು ಗಾಂಧೀಜಿಯವರ ಅನುಯಾಯಿಗಳಾದರು. ಗ್ರಾಮಗಳ ಪಟೇಲರು ಇತರ ಅಧಿಕಾರಿಗಳು ರಾಜೀನಾಮೆ ನೀಡಿದರು. ಅನೇಕ ಕಡೆ ಗಾಂಧೀಜಿಯವರಿಗೆ ನಿಧಿ ಸಮರ್ಪಣೆ ಮಾಡಲಾಯಿತು. ಪ್ರಯಾಣದ ಕಾರ್ಯಕ್ರಮ ಅತ್ಯಂತ ಶಿಸ್ತು ಬದ್ಧವಾಗಿದ್ದು, ಎಲ್ಲೂ ದುಂದುವೆಚ್ಚ, ಅದ್ದೂರಿ, ಆಡಂಬರಗಳು ತಲೆದೋರದಂತೆ ನೋಡಿಕೊಳ್ಳಲಾಯಿತು.

ದಂಡಿಯಾತ್ರೆಯ ಸಂದರ್ಭದಲ್ಲಿ ಸ್ಥಳೀಯ ಜನರಿಗೆ ಗಾಂಧೀಜಿಯವರ ಮೇಲೆ ಅತೀವವಾದ ಭಕ್ತಿ ಗೌರವಗಳು ಎದ್ದು ಕಾಣುತ್ತಿದ್ದವು. ಕೆಲವು ಕಡೆ ಗಾಂಧೀಜಿಯವರ ಆಗಮನದಿಂದ ಊರಿನಲ್ಲಿ ಕೆರೆ ತುಂಬಿದ್ದು ಬಾವಿಯಲ್ಲಿ ನೀರು ಬಂದದ್ದು ಮೊದಲಾದ ಪವಾಡಗಳು ನಡೆದುವೆಂದು ಜನರು ಭಾವಿಸಿದರು. ಆದರೆ ಗಾಂಧೀಜಿಯವರು ಈ ಅತಿ ರಂಜನೀಯ ಸುದ್ದಿಗಳನ್ನು ಅಲ್ಲಗಳೆದು ತಾವು ಪವಾಡ ಮಾಡುವವರಲ್ಲ ಎಂಬುದನ್ನು ಸ್ಪಷ್ಟಪಡಿಸಿದರು. ಸತ್ಯಾಗ್ರಹಿಗಳ ತಂಡವು ದಂಡಿಯನ್ನು ಸಮೀಪಿಸಿದಾಗ ಅನೇಕ ಸಮಸ್ಯೆಗಳು ತಲೆದೋರಿದವು. ದಂಡಿಯು ಒಂದು ಕುಗ್ರಾಮವಾಗಿದ್ದು ಅಲ್ಲಿಗೆ ಸುಮಾರು 16 ಕಿ.ಮೀ. ಕಚ್ಚಾ ರಸ್ತೆಯಲ್ಲಿ ನಡೆದ ಹೋಗಬೇಕಾಗಿದ್ದಿತು. ನೀರು, ಆಹಾರ ಮುಂತಾದವು ದಂಡಿಯಲ್ಲಿ ಸಿಗುವುದಿಲ್ಲವೆಂದು ಸತ್ಯಾಗ್ರಹಿಗಳಿಗೆ ಸೂಚಿಸಲಾಗಿತ್ತು. ಗಾಂಧೀಜಿಯವರು ಏಪ್ರಿಲ್ 6 ರಂದು ಸಮುದ್ರ ತೀರದಲ್ಲಿ ಉಪ್ಪನ್ನು ತಯಾರಿಸಿ ಕಾನೂನು ಭಂಗವನ್ನು ಮಾಡಿ ಒಂದು ಮಹತ್ವದ ಸಾಧನೆಯನ್ನು ಮಾಡಿದರು. ಅಮೆರಿಕಕ್ಕೆ ನೀಡಿದ ಒಂದು ಸಂದೇಶದಲ್ಲಿ ಗಾಂಧೀಜಿಯವರು ಇದು ದೈತ್ಯ ಶಕ್ತಿಯ ವಿರುದ್ಧ ನ್ಯಾಯಕ್ಕೆ ದೊರೆತ ಜಯ. ಇದಕ್ಕೆ ಜಗತ್ತಿನ ಬೆಂಬಲ ಸಿಗಬೇಕಾಗಿದೆ ಎಂದು ಅವರು ತಿಳಿಸಿದರು. ಇದು ಅಹಿಂಸಾ ಮಾರ್ಗವಾಗಿ ಭಾರತವು ಸ್ವಾತಂತ್ರ್ಯಗಳಿಸಲು ಸನ್ನದ್ಧವಾಗಿದೆ ಎಂಬುದರ ಸಂಕೇತವಾಗಿದೆ ಎಂಬುದೇ ಅದು ವಿಶ್ವಕ್ಕೆ ನೀಡುವ ಸಂದೇಶವಾಗಿದೆ ಎಂದು ತಿಳಿಸಿದರು. ದಂಡಿ ನಮಗೆಲ್ಲಾ ಒಂದು ಪವಿತ್ರ ತಾಣವಾಗಬೇಕು. ಯಾರೂ ಅಸತ್ಯ ನುಡಿಯಬಾರದು, ವಾಮಕಾರ್ಯವೆಸಗಬಾರದು ಎಂದು ದೃಢ ನಿರ್ಧಾರ ಕೈಗೊಳ್ಳಬೇಕೆಂದು ತಿಳಿಸಿದರು. ಉಪ್ಪಿನ ಸತ್ಯಾಗ್ರಹದ ಸಂದರ್ಭದಲ್ಲಿ ಪೊಲೀಸರು ಅಧಿಕ



ಸಂಖ್ಯೆಯ ಸತ್ಯಾಗ್ರಹಿಗಳನ್ನು ಬಂಧಿಸಿದರು. ಹಲವಾರು ಸತ್ಯಾಗ್ರಹಿಗಳು ಅಪಾರ ಹಿಂಸೆ, ನಷ್ಟವನ್ನು ಅನುಭವಿಸಬೇಕಾಯಿತು. ಇದರಿಂದ ಮನನೊಂದ ಗಾಂಧೀಜಿ ತಾವು ಏನನ್ನಾದರೂ ತ್ಯಾಗ ಮಾಡಬೇಕೆಂದು ನಿರ್ಧರಿಸಿದರು. ಅದರಂತೆ, ಆಶ್ರಮದ ಆಸ್ತಿ-ಪಾಸ್ತಿಗಳನ್ನು ಸರ್ಕಾರಕ್ಕೆ ಹಿಂದಿರುಗಿಸಿದರು.

ಥಾಮಸ್ ವೆಬರ್ ಭಾರತೀಯ ಸತ್ಯಾಗ್ರಹಿಗಳ ಜೊತೆಯಲ್ಲಿ ಈ ಯಾತ್ರೆಯಲ್ಲಿ ಪಾಲ್ಗೊಂಡು ಅವರ ಕಷ್ಟ-ಸುಖಗಳಲ್ಲಿ ಭಾಗಿಯಾಗಿದ್ದರು. ಚಳಿ, ಮಳೆ ಗಾಳಿಗಳೆನ್ನದೆ ಹೋದ ಕಡೆಯಲ್ಲಿ ಸಾಮಾನ್ಯರಂತೆ, ಅಸಾಮಾನ್ಯ ಪರಿಸರದಲ್ಲಿ ಯಾತ್ರೆ ನಡೆಸಿ ಭಾರತದ ಈ ಮಹೋನ್ನತ ಚಳುವಳಿಯ ಅನುಭವ, ತಮ್ಮ ಈ ಗ್ರಂಥದಲ್ಲಿ ದಾಖಲಿಸಿದ್ದಾರೆ. ಯಾತ್ರೆಯ ಅನೇಕ ಕಡೆಗಳಲ್ಲಿ ಅವರು ಸಭೆ ಸಮಾರಂಭಗಳಲ್ಲಿ ಭಾಷಣ ಮಾಡಿದರು. ಸ್ಥಳೀಯ ಜನರನ್ನು ಸಂಧಿಸಿ ಅವರ ಅಭಿಪ್ರಾಯಗಳನ್ನು ಸಂಗ್ರಹಿಸಿದರು. ಅವರ ಆರ್ಥಿಕ, ಸಾಮಾಜಿಕ ಜೀವನದ ಸಮಗ್ರ ಚಿತ್ರಣವನ್ನು ತಮ್ಮ ಗ್ರಂಥದಲ್ಲಿ ನಿರೂಪಿಸಿದ್ದಾರೆ. ಮತ್ತೊಂದು ಸ್ವಾರಸ್ಯದ ಸಂಗತಿ ಎಂದರೆ ದಂಡಿಯಾತ್ರೆಯು ನಡೆದ 50 ವರ್ಷಗಳ ನಂತರ ಅದೇ ಸ್ಥಳಕ್ಕೆ ಭೇಟಿ ನೀಡಿ ಅದರಲ್ಲಿ ಭಾಗವಹಿಸಲು ನಾಯಕರನ್ನು ಸಂಧಿಸಿ ಅವರ ಅನುಭವಗಳನ್ನು ದಾಖಲಿಸಿರುವುದು ಈ ಗ್ರಂಥದ ವೈಶಿಷ್ಟ್ಯ. ಈ ಭೇಟಿಯಲ್ಲಿ ಅವರು ಸ್ಥಳೀಯರ ಮೇಲೆ ಈ ಸತ್ಯಾಗ್ರಹ ಎಂತಹ ಪ್ರಭಾವ ಬೀರಿದ್ದಿತು ಎಂಬುದನ್ನು ದಾಖಲಿಸಿದ್ದಾರೆ. ಇಂತಹ ಸುದೀರ್ಘ ಅಧ್ಯಯನ ಅನುಭವಗಳ ಆಧಾರದ ಮೇಲೆ ವೆಬರ್ ಅವರ ಕೃತಿ ಮೂಡಿ ಬಂದಿದೆ. ಆಧುನಿಕ ಭಾರತದ ಇತಿಹಾಸದ ಅಭ್ಯಾಸಕ್ಕೆ ಇದೊಂದು ಆಕರ ಗ್ರಂಥವಾಗಿದೆ. ○





# ಗಾಂಧೀಜಿಯವರ ಆರ್ಥಿಕ ಚಿಂತನೆ

ಡಾ. ಸಿ. ಕೆ. ರೇಣುಕಾರ್ಯ

ಮಹಾತ್ಮ ಗಾಂಧೀಜಿಯುವರು ವಾಸ್ತವವಾಗಿ ಅರ್ಥಶಾಸ್ತ್ರಜ್ಞರಾಗಿರಲಿಲ್ಲ. ಆದುದರಿಂದ ಅವರ ಆರ್ಥಿಕ ಚಿಂತನೆ ಎನ್ನುವುದು ಪ್ರಸ್ತುತವೇ ಎನ್ನುವುದನ್ನು ಅರ್ಥಶಾಸ್ತ್ರಜ್ಞರು ವಿಮರ್ಶಿಸಬೇಕಾಗಿಲ್ಲ ಎನ್ನುವುದು ಸಾಮಾನ್ಯವಾದ ನಂಬಿಕೆ. ಗಾಂಧೀಜಿಯುವರು ಅರ್ಥಶಾಸ್ತ್ರಜ್ಞರಾಗಿರಲಿಲ್ಲ ಎನ್ನುವುದು ನಿಜ. ಅವರು ಅರ್ಥಶಾಸ್ತ್ರದ ಭಾಷೆಯನ್ನು ಬಳಸಿ ಬರವಣಿಗೆಯನ್ನು ನಡೆಸಿಲ್ಲ ಎನ್ನುವುದೂ ನಿಜ. ಆದರೆ ಅವರ ಚಿಂತನೆ ಗಾಢವಾದುದು ಮತ್ತು ಆರ್ಥಿಕ ಬದ್ಧತೆಯನ್ನು ಉಳಿಸಿಕೊಂಡಿರುವಂತಹುದು. ಅತ್ಯಂತ ವಿಸ್ಮಯಕಾರಿಯಾದ ವಿಷಯವೆಂದರೆ ಯಾವುದೇ ಆರ್ಥಿಕ ಚಿಂತನೆಯ ಶಾಲೆಯಲ್ಲಿ ಕಂಡುಬರುವ ಚಿಂತನೆಯನ್ನು ನಡೆಸಿದರೂ ಕೂಡ ಕೊನೆಗೆ ಮನುಷ್ಯ ನೆಮ್ಮದಿಯ ಬಾಳನ್ನು ಬಾಳಬೇಕಾದರೆ ಗಾಂಧೀಜಿಯವರ ಚಿಂತನೆಗೆ ಶರಣು ಹೋಗಬೇಕಾಗುತ್ತದೆ ಎನ್ನುವುದು.

ನಾನು ಈಗ ತಿಳಿಸಲಿಚ್ಚಿಸುವುದು ಉದಾರೀಕರಣ ನೀತಿ, ಜಾಗತೀಕರಣ ನೀತಿ ಎಂಬ ಬಿರುಗಾಳಿಗಳ ಹಿನ್ನಲೆಯಲ್ಲಿ ಗಾಂಧೀಜಿಯವರ ಚಿಂತನೆ ಎಷ್ಟು ಪ್ರಸ್ತುತವಾದುದು ಎನ್ನುವುದನ್ನು ಕುರಿತು.

ಆರ್ಥಿಕ ಚಿಂತನೆಯ ಪಿತಾಮಹನಾದ ಆಡಮ್ ಸ್ಮಿತ್ 1776ರಷ್ಟು ಹಿಂದೆಯೇ ಅವನ ಉದ್ಗ್ರಂಥವಾದ "An Enquiry in to the nature and causes of wealth of Nations" ನಲ್ಲಿ ಒಂದು ರಾಷ್ಟ್ರ ಸಾಧ್ಯವಾದಷ್ಟು ಸಂಪತ್ತನ್ನು ಗಳಿಸಬೇಕೆಂದು ವಾದಿಸಿದ್ದ. ಇದನ್ನು ಮುಕ್ತ, ವಾಣಿಜ್ಯ ಮತ್ತು ಖಾಸಗಿ ಬಂಡವಾಳಗಳ ಹೂಡಿಕೆ ಹಾಗೂ ಸರ್ಕಾರದ ಮಧ್ಯ ಪ್ರವೇಶಿಸುವಿಕೆ ಇಲ್ಲದ ಅರ್ಥ ವ್ಯವಸ್ಥೆಯ ಮೂಲಕ ಸಾಧಿಸಬೇಕೆಂದು ವಾದಿಸಿದ್ದ. ಅವನ ಚಿಂತನೆಯ ನಂತರ ಅನೇಕ ಚಿಂತಕರು ಒಂದು ಅರ್ಥ ವ್ಯವಸ್ಥೆ ಹೇಗಿರಬೇಕು ಎಂಬುದರ ಬಗ್ಗೆ ತಾತ್ವಿಕ ಸಿದ್ಧಾಂತಗಳನ್ನು ಮಂಡಿಸಿದ್ದರೂ ಸಹ ನಾವು ಅಡಮ್ ಸ್ಮಿತ್‌ನ ಚಿಂತನೆಗೆ ಮೊರೆ ಹೋಗಬೇಕಾಗಿ ಬಂದಿದೆ. ಜಾಗತೀಕರಣ ಎನ್ನುವುದು ಸಹ ಅವನ ಚಿಂತನೆಯ ವ್ಯಾಪ್ತಿಯಲ್ಲೆಯೇ ಬರುವ ಒಂದು ವಿಷಯ. ಸೋವಿಯತ್ ರಷ್ಯಾ ಮತ್ತು ಭಾರತದಂತಹ ದೇಶಗಳು ಅನುಕ್ರಮವಾಗಿ ಸಮಾಜವಾದ ಮತ್ತು ಮಿಶ್ರ ಅರ್ಥ ವ್ಯವಸ್ಥೆಗಳನ್ನು ಪರಿಪಾಲಿಸಿದ್ದರೂ ಜಾಗತೀಕರಣದ ಎದುರು ಈ ವ್ಯವಸ್ಥೆಗಳು ಇಂದು ಸಪ್ಪೆಯಾಗಿ ಕಾಣುತ್ತಿವೆ.

ಕಳೆದ ಮೂರು ಶತಮಾನಗಳಲ್ಲಿ ನಾವು ನೋಡುತ್ತಿರುವುದೆಂದರೆ ಕೆಲವು ಅಭಿವೃದ್ಧಿಶೀಲ ರಾಷ್ಟ್ರಗಳು ಬಂಡವಾಳಶಾಹಿ ಅರ್ಥ ವ್ಯವಸ್ಥೆಯನ್ನು ಆರಿಸಿಕೊಂಡು ತಮ್ಮ ಬೆಳವಣಿಗೆಯ ವೇಗವನ್ನು ವೃದ್ಧಿಗೊಳಿಸಿಕೊಂಡಿದ್ದು, ಆದರೆ ತಮ್ಮ ರಾಷ್ಟ್ರಗಳ ವ್ಯವಸ್ಥೆಯು ಬಲಹೀನತೆಯಿಂದಾಗಿ ಆರ್ಥಿಕ ಬೆಳವಣಿಗೆಯನ್ನು ಮುಂದುವರಿಸಿಕೊಂಡು ಹೋಗಲಾಗದೆ ನಿಶ್ಯಕ್ತವಾಗಿರುವುದು.

ಅಮೆರಿಕ ಸಂಯುಕ್ತ ಸಂಸ್ಥಾನ, ಗ್ರೇಟ್ ಬ್ರಿಟನ್, ಗ್ರೀಸ್, ಪೋಲ್ಯಾಂಡ್, ಸ್ಪೇನ್, ಇಟಲಿ ಇದಕ್ಕೆ ಉದಾಹರಣೆಗಳು. ಈ ರಾಷ್ಟ್ರಗಳಲ್ಲಿ ಇಂದು ಭಯಂಕರವಾದ ನಿರುದ್ಯೋಗವಿದೆ. ತಾವು ಮಾಡಿರುವ ಬಾಹ್ಯ ಸಾಲದಿಂದಾಗಿ ಆರ್ಥಿಕ ವ್ಯವಸ್ಥೆಗಳು ಕುಸಿಯುತ್ತಿವೆ. ಬಂಡವಾಳಶಾಹಿ ವ್ಯವಸ್ಥೆ, ಆರ್ಥಿಕ ಅಸಮಾನತೆ ಹೆಚ್ಚಾಗಿ ವಿಸ್ತಾರಗೊಳ್ಳುವುದಕ್ಕೆ ಕಾರಣವಾಗಿದೆ. ಉದಾಹರಣೆಗೆ ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ಶೇ. 1ರಷ್ಟು ಜನ ಆ ರಾಷ್ಟ್ರದ ಒಟ್ಟು ಆದಾಯದ ಶೇ. 90 ರಷ್ಟರ ಮೇಲೆ ಪ್ರಭುತ್ವವನ್ನು ಹೊಂದಿದ್ದಾರೆ. 1991 ರಲ್ಲಿ ಜಾರಿಗೆ ಬಂದ ಜಾಗತೀಕರಣ ನೀತಿ ಇಂದು ಎಲ್ಲಾ ರಾಷ್ಟ್ರಗಳ ಮೇಲೆ ಪ್ರಭಾವ ಬೀರುತ್ತಿವೆ. ಜಾಗತೀಕರಣದಿಂದ ಶ್ರೀಮಂತರು ಹೆಚ್ಚು ಶ್ರೀಮಂತರಾಗುತ್ತಿದ್ದಾರೆ. ಬಡವರ ಸಂಖ್ಯೆ ಹೆಚ್ಚಾಗುತ್ತಿವೆ. ಜಾಗತೀಕರಣ ನೀತಿಯ ಅನುಸಾರವಾಗಿ ಉತ್ಪಾದನೆ, ವಿತರಣೆ ಬಂಡವಾಳಶಾಹಿಗಳ ಸ್ವತ್ತಾಗುತ್ತಿದ್ದು, ಕೆಲವೇ



ಅಂತರ ರಾಷ್ಟ್ರೀಯ ಕಂಪನಿಗಳು ಸರಕುಗಳ ಉತ್ಪಾದನೆ ಮತ್ತು ವಿತರಣೆಯ ಮೇಲೆ ಸಂಪೂರ್ಣವಾದ ಹತೋಟಿ ಸಾಧಿಸುತ್ತಿವೆ. ಸಾಮಾನ್ಯ ಜನರು ತಾವು ಕೊಳ್ಳಬೇಕಾದ ಸರಕುಗಳಿಗೆ ಅಂತರ ರಾಷ್ಟ್ರೀಯ ಕಂಪನಿಗಳ, ಅಂಗಡಿಗಳ ಮುಖ ನೋಡಬೇಕಾಗಿದೆ. ನಮ್ಮಂತಹ ಅಭಿವೃದ್ಧಿಶೀಲ ರಾಷ್ಟ್ರದಲ್ಲಿ ಸಣ್ಣ ವ್ಯಾಪಾರಸ್ಥರು, ಸಣ್ಣ ರೈತರು, ಕೂಲಿ ಕಾರ್ಮಿಕರು ನಿರ್ನಾಮವಾಗುತ್ತಿದ್ದಾರೆ. ಇವೆಲ್ಲಾ ಜಾಗತೀಕರಣದ ಫಲ. ಆಶ್ಚರ್ಯವೆಂದರೆ ಶ್ರೀಮಂತ ರಾಷ್ಟ್ರಗಳು ಕೂಡ ಅತ್ತ ಸುಖವಾಗಿಲ್ಲ. ಅಲ್ಲಿ ನಿರುದ್ಯೋಗ ತಾಂಡವವಾಡುತ್ತಿದೆ. ಬಡ ರಾಷ್ಟ್ರಗಳೂ ನೆಮ್ಮದಿಯಿಂದಿಲ್ಲ. ಇಲ್ಲಿ ಬಡವರು ಎಲ್ಲಾ ವಿಷಯಗಳಲ್ಲೂ ಕಂಗಾಲಾಗುತ್ತಿದ್ದಾರೆ.

ಈ ಹಿನ್ನಲೆಯಲ್ಲಿ ನಾವು ಗಾಂಧೀಜಿಯವರ ಚಿಂತನೆಯನ್ನು ಗುರುತಿಸುವುದು ಅಗತ್ಯ. ಅವರ ಜೀವನ ನಿಯಮಗಳು ಬಹಳ ಸರಳವಾದುದು. ತಾಂತ್ರಿಕ ಪ್ರಗತಿಯಿಂದ ಮನುಷ್ಯನ ಸುಖ ಹೆಚ್ಚುತ್ತದೆ ಎನ್ನುವುದರಲ್ಲಿ ಅವರಿಗೆ ನಂಬಿಕೆ ಇರಲಿಲ್ಲ. ಇದು ಸತ್ಯವೂ ಕೂಡ. ತಾಂತ್ರಿಕತೆ ಹೆಚ್ಚಾಗುತ್ತಿದ್ದಂತೆ ಮನುಷ್ಯನ ಐಶಾರಾಮಿ ಜೀವನ ಸಾಧ್ಯವಾದರೂ ಅವನು ತಾಂತ್ರಿಕತೆಗೆ ಗುಲಾಮನಾಗುತ್ತಾನೆ. ದೊಡ್ಡ ದೊಡ್ಡ ಕಂಪನಿಗಳಲ್ಲಿ ದಾಸನಾಗಿ ದುಡಿಯಬೇಕಾದ ಪ್ರಮೇಯ ಉಂಟಾಗುತ್ತದೆ. ಅಧಿಕ ಉತ್ಪಾದನೆಯಿಂದ ಮನುಷ್ಯನ ನೆಮ್ಮದಿ ಹಾಳಾಗುತ್ತಿದೆ. ಆದ್ದರಿಂದ ಉತ್ಪಾದನೆ ಮತ್ತು ವಿತರಣೆ ಸರಳ ಸ್ವರೂಪದ್ದಾಗಿರಬೇಕು. ಸ್ವಾವಲಂಬಿ ಗ್ರಾಮಗಳು ಉದಯವಾಗಬೇಕು.

ಜಾಗತೀಕರಣದ ಪರಿಣಾಮವಾಗಿ ಜನರು ಇಂದು ಹೆಚ್ಚು ಹೆಚ್ಚು ಸರಕು ಮತ್ತು ಸೇವೆಯನ್ನು ಬೇಡುತ್ತಿದ್ದಾರೆ. ಇಂತಹ ಬೇಡಿಕೆ ಜನರ ನಿಜವಾದ ಅಗತ್ಯತೆಗಳಿಂದ ಉಂಟಾದದ್ದಲ್ಲ. ಆದರೆ ಮಾಧ್ಯಮಗಳ ಜಾಹೀರಾತುಗಳಿಂದ ಉಂಟಾಗುವಂತಹದ್ದು. ಕೈಗಾರಿಕೆಗಳು ಅನುಭೋಗಿಗಳ ಬೇಡಿಕೆಗಳನ್ನು ಪೂರೈಸಲು ಹೆಚ್ಚು ಹೆಚ್ಚು ಉತ್ಪಾದಿಸುತ್ತಾ ಹೋದಂತೆ ಸಂಪನ್ಮೂಲಗಳ ಅಪವ್ಯಯ ಹೆಚ್ಚಾಗುತ್ತಿದೆ. ಭೂಮಿ ನಿಕ್ಷೇಪಗಳು ಬರಿದಾಗುತ್ತಿವೆ. ಒಂದು ದೇಶದ ಭೂಮಿಯನ್ನು ಅಗೆದು ಅದರಲ್ಲಿರುವ ಗಣಿ ಸಂಪತ್ತನ್ನು ಬೇರೆ ರಾಷ್ಟ್ರಗಳಿಗೆ ರಫ್ತು ಮಾಡುವ ಮೂಲಕ ಶ್ರೀಮಂತರಾಗುವ ಬಯಕೆ ಹೆಚ್ಚಾಗುತ್ತಿದೆ. ಇಂದಿನ ಸಮಸ್ಯೆ ಎಂದರೆ ಉತ್ಪಾದನೆ ಅಲ್ಲ. ಬದಲಿಗೆ ಉದ್ಯೋಗ ಸೃಷ್ಟಿ. ಏಕೆಂದರೆ ಜಾಗತೀಕರಣ ಹೆಚ್ಚಾಗುತ್ತಿದ್ದಂತೆ ನಿರುದ್ಯೋಗ ಹೆಚ್ಚಾಗುತ್ತಿದೆ.

ಈ ಸಮಸ್ಯೆಗಳ ಚರ್ಚೆ ಬಂದಾಗಲೇ ಗಾಂಧೀಜಿಯವರ ಚಿಂತನೆ ಉಪಯುಕ್ತವಾಗುವುದು. ಗಾಂಧೀಜಿಯವರು ಅತ್ಯಂತ ಶ್ರೀಮಂತವಾದ ಅರ್ಥ ವ್ಯವಸ್ಥೆಯನ್ನಾಗಲೀ ಅಥವಾ ಅತ್ಯಂತ ಬಡ ಅರ್ಥ ವ್ಯವಸ್ಥೆಯನ್ನಾಗಲೀ ಪ್ರತಿಪಾದಿಸಲಿಲ್ಲ. ಅವರು ಪ್ರತಿಪಾದಿಸಿದ್ದು ಸ್ವಯಂ ತೃಪ್ತಿ ಪಡೆದಿರುವ ಸ್ವಾವಲಂಬನೆಯಾದ ಆರ್ಥಿಕತೆಯನ್ನು, ಮನುಷ್ಯನೇ ಕೇಂದ್ರವಾದ, ಅವನ ಕೈಗಳೇ ಪ್ರಮುಖವಾದ ಅರ್ಥ ವ್ಯವಸ್ಥೆಯನ್ನು.

ಜಾಗತೀಕರಣ ಮನುಷ್ಯನನ್ನೇ ಮರೆತು ಬಿಡುವುದು ಅದರ ದೌರ್ಭಾಗ್ಯ. ಗಾಂಧೀಜಿಯವರು ಪ್ರತಿಪಾದಿಸಿದ ಒಂದು ಪ್ರಮುಖ ತತ್ವವೆಂದರೆ ಉತ್ಪಾದನೆಯನ್ನು ವಿತರಣೆಯೊಂದಿಗೆ ಸಂಯೋಜಿಸಬೇಕು ಎನ್ನುವುದು. ಅವರು ಪ್ರತಿಪಾದಿಸಿದುದು ನ್ಯಾಯಸಮ್ಮತವಾಗಿ ವಿತರಣೆಯಾಗಬೇಕೆಂದು. ಟಾಲ್ ಸ್ಟಾಯ್ ಮತ್ತು ರಸ್ಕಿನ್‌ರವರ ಸರಳ ಸಮಾಜ ತತ್ವವನ್ನು ಅವರು ನಂಬಿದ್ದರು ಮತ್ತು ಪ್ರತಿಪಾದಿಸುತ್ತಿದ್ದರು. ಅವರ ಪ್ರಮುಖ ಸರ್ವಕಾಲಿಕವಾದ ಚಿಂತನೆ ಎಂದರೆ "ಭೂಮಿಯು ಪ್ರತಿಯೊಬ್ಬ ವ್ಯಕ್ತಿಯ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಬೇಕಾದಷ್ಟನ್ನು ನೀಡಬಲ್ಲದು. ಆದರೆ ಅವನ ದುರಾಸೆಯನ್ನು ಪೂರೈಸುವಷ್ಟನ್ನು ನೀಡಲಾರದು. "Earth provides enough to satisfy everyman's need but not for every man's greed". ಜಾಗತೀಕರಣ ವ್ಯವಸ್ಥೆಯು ಉತ್ಪಾದನೆ ಮತ್ತು ವಿತರಣೆ ವಿಷಯದಲ್ಲಿ ಸಾಮಾನ್ಯ ವ್ಯಕ್ತಿಯನ್ನು ಸಂಪೂರ್ಣವಾಗಿ ಅಸಹಾಯಕನನ್ನಾಗಿ ಮಾಡಿಬಿಡುತ್ತದೆ. ಇದು ನಮಗೆಲ್ಲರಿಗೂ ತಿಳಿದಿರುವ ವಿಷಯ. ದೊಡ್ಡ ದೊಡ್ಡ ಕಂಪನಿಗಳು, ಕೈಗಾರಿಕೆಗಳು, ಮಾಲ್‌ಗಳು, ಇರುವ ಅರ್ಥ ವ್ಯವಸ್ಥೆಯಲ್ಲಿ ಒಬ್ಬ ವ್ಯಕ್ತಿ ತುಂಬಾ ಅಸಹಾಯಕ. ಆದರೆ ಗಾಂಧೀಜಿ ಇಂತಹ ಸಮಸ್ಯೆಗಳನ್ನು

ಬಗೆಹರಿಸಲು ಸಣ್ಣ ಪ್ರಮಾಣದ ಉತ್ಪಾದನೆ ಮತ್ತು ಸ್ವರಾಜ್ ಅರ್ಥ ವ್ಯವಸ್ಥೆಯನ್ನು ಪ್ರತಿಪಾದಿಸಿದರು. ಅಭಿವೃದ್ಧಿಶೀಲ ರಾಷ್ಟ್ರಗಳು ಪಾಶ್ಚಿಮಾತ್ಯ ರಾಷ್ಟ್ರಗಳನ್ನು ಉತ್ಪಾದನೆ ಮತ್ತು ವಿತರಣೆ ವಿಷಯದಲ್ಲಿ ಅನುಸರಿಸಬಾರದು. ಬದಲಿಗೆ ತಮ್ಮದೇ ಆದ ಮಾನವ ಕೇಂದ್ರೀಕೃತ ಅರ್ಥ ವ್ಯವಸ್ಥೆಯನ್ನು ರೂಪಿಸಿಕೊಳ್ಳಬೇಕು. ಏಕೆಂದರೆ ಪಾಶ್ಚಿಮಾತ್ಯ ಉತ್ಪಾದನೆ ಮತ್ತು ವಿತರಣೆ ವ್ಯವಸ್ಥೆಯಲ್ಲಿ ಅಸಾಧಾರಣ ಪ್ರಮಾಣದ ಆರ್ಥಿಕ ಅಸಮಾನತೆ ಇದೆ. ಆದುದರಿಂದ ಅದು ಅನುಕರಣೀಯ ಯೋಗ್ಯವಲ್ಲ. ಬದಲಿಗೆ ಬಲಿಷ್ಠವಾದ ಗ್ರಾಮೀಣ ಕೇಂದ್ರಿತ ಅರ್ಥ ವ್ಯವಸ್ಥೆ ನಮ್ಮಂತಹ ದೇಶಕ್ಕೆ ಅಗತ್ಯ. ಪ್ರಾಥಮಿಕ ವಲಯವಾದ ಕೃಷಿ ದ್ವಿತೀಯ ವಲಯವಾದ ಕೈಗಾರಿಕೆ ಇವೆರಡರ ನಡುವೆ ಸಮತೋಲನ ಸಾಧಿಸುವುದು ತುಂಬಾ ಅಗತ್ಯ. ಕೈಗಾರಿಕಾ ಕ್ಷೇತ್ರದಲ್ಲಿ ಅಪಾರ ಪ್ರಮಾಣದ ಉತ್ಪಾದನೆಯನ್ನು ನಡೆಸಿ ಕೃಷಿ ಕ್ಷೇತ್ರದಲ್ಲಿ ಉತ್ಪಾದನೆ ನಡೆಯದೇ ಹೋದರೆ ಸಹಜವಾಗಿಯೇ ಆರ್ಥಿಕ ಅಸಮಾನತೆ ಉಲ್ಬಣಗೊಳ್ಳುತ್ತದೆ.

**ಗಾಂಧೀಜಿಯವರ ಆರ್ಥಿಕತೆಯ ಪ್ರಮುಖ ಅಂಶಗಳನ್ನು ಕೆಳಗಿನ ಏಳು ವಿಷಯಗಳ ಮೂಲಕ ತಿಳಿಯಬಹುದು.**

1. ಬಡತನ ನಿರ್ಮೂಲನೆ ಮತ್ತು ಅಗಾಧ ಶ್ರೀಮಂತಿಕೆಯನ್ನು ಕನಿಷ್ಠಗೊಳಿಸುವುದು.

2. ಮಾನವನ ಮೂಲ ಅಗತ್ಯತೆಗಳನ್ನು ಸಂಪೂರ್ಣವಾಗಿ ಪೂರೈಸುವುದು.

3. ಮಾನವನ ಇತರ ಅಗತ್ಯತೆಗಳನ್ನು ಗುರುತಿಸುವುದು ಮತ್ತು ಪೂರೈಸುವುದು.

4. ಕೃಷಿ ಕೇಂದ್ರಿತ ಅರ್ಥ ವ್ಯವಸ್ಥೆಯನ್ನು ಬಲಪಡಿಸುವುದು.

5. ಸಣ್ಣ ಪ್ರಮಾಣದ ಕೈಗಾರಿಕೆಗಳ ಮೂಲಕ ಜನರಿಗೆ ಅಗತ್ಯವಾದ ಉತ್ಪಾದನೆಯನ್ನು ಕೈಗೊಳ್ಳುವುದು

6. ಪ್ರಮುಖ ವಸ್ತುಗಳು ಎಲ್ಲರಿಗೂ ದೊರೆಯುವಂತೆ ಮಾಡುವುದು

7. ಆರ್ಥಿಕ ಕೇಂದ್ರೀಕರಣವನ್ನು ತಪ್ಪಿಸುವುದು

ಗಾಂಧೀಜಿಯವರು ಬಲವಾಗಿ ನೈತಿಕತೆಯ ಆಧಾರದ ಮೇಲೆ ಅರ್ಥ ವ್ಯವಸ್ಥೆ ರೂಪಿಸುವುದು ಅಗತ್ಯವೆಂದು ಭಾವಿಸಿದ್ದರು. ಹೀಗಾಗಿ ಪ್ರತಿಯೊಬ್ಬ ವ್ಯಕ್ತಿಗೂ ಅವನಿಗೆ ಅಗತ್ಯವಾದ ಆಹಾರ ಮತ್ತು ಬಟ್ಟೆ ದೊರೆಯಬೇಕೆಂದು ವಾದಿಸಿದ್ದರು. ಇದಕ್ಕೆ ಅಗತ್ಯವಾದ ಕೆಲಸ ಪ್ರತಿಯೊಬ್ಬನಿಗೂ ದೊರೆಯಬೇಕೆಂದು ತಿಳಿದಿದ್ದರು. ಹೀಗಾಗಿ ಉತ್ಪಾದನೆ ಎಲ್ಲಾ ಜನರ ವಶದಲ್ಲಿರಬೇಕಾದುದು ಅಗತ್ಯ. ಇದು ಕೇವಲ ಕೆಲವು ಅಂತರರಾಷ್ಟ್ರೀಯ ಕಂಪನಿಗಳ ವಶದಲ್ಲಿರಬಾರದು.

ಶುದ್ಧ ಆರ್ಥಿಕ ತತ್ವಗಳ ಹಿನ್ನೆಲೆ ಗಾಂಧೀಜಿಯವರಿಗಿರಲಿಲ್ಲ. ಈ ದೃಷ್ಟಿಯಿಂದ ಅವರು ಅರ್ಥವಿಜ್ಞಾನಿಯಲ್ಲ ಅವರ ಮಾತುಗಳಲ್ಲೇ ಹೇಳುವುದಾದರೆ "ಸತ್ಯವಾಗಿ ಹೇಳುವುದಾದರೆ ನನಗೆ ಅರ್ಥವಿಜ್ಞಾನದ ಜ್ಞಾನ ಸ್ವಲ್ಪವೂ ಇಲ್ಲ. ಇದು ನಿಮಗೆಲ್ಲರಿಗೂ ಸಹ ತಿಳಿದ ವಿಷಯವೇ. ಈ ಬಗ್ಗೆ ಕೆಲವು ದಿನಗಳ ಹಿಂದೆ, ಸಂಜೆ ಊಟದವೇಳೆ, ಒಬ್ಬರು ನನ್ನ ಜೊತೆ ಮಾತಾಡುತ್ತಿದ್ದರು. ಅವರು ನನ್ನ ಬಗ್ಗೆ ಅನೇಕ ಪ್ರಶ್ನೆಗಳನ್ನು ಕೇಳುತ್ತಿದ್ದರು. ಅವರು ಕೇಳುತ್ತಿರುವ ಪ್ರಶ್ನೆಗಳಿಂದ, ಅರ್ಥಶಾಸ್ತ್ರದ ವಿಷಯದಲ್ಲಿ ನನ್ನ ಅಜ್ಞಾನದ ಬಗ್ಗೆ ಅರಿಯುವುದು ನನಗೆ ಕಷ್ಟವಾಗಲಿಲ್ಲ. ಏನೂ ಅರಿಯದವನ ಜೊತೆ ಮಾತನಾಡುತ್ತಿದ್ದೇನೆಂಬ ಖಚಿತ ಭಾವನೆ ನನ್ನೊಡನೆ ಮಾತನಾಡುತ್ತಿದ್ದವರಿಗೂ ತಿಳಿದಿತ್ತು. ಅರ್ಥಶಾಸ್ತ್ರದ ದಿಗ್ಗಜಗಳಾದ ಮಿಲ್ ಮಾರ್ಷಲ್, ಸ್ಮಿತ್‌ರವರ ಕೃತಿಗಳನ್ನೂ ನಾನೂ ಓದಿಲ್ಲ ಎನ್ನುವುದನ್ನು ತಿಳಿದು ನನ್ನ ಮಿತ್ರರಿಗೆ ಅಪಾರ ಸಿಟ್ಟು ಬಂತು. ಈ ಗ್ರಂಥಗಳನ್ನು ನಾನು ಓದಲೇಬೇಕು ಮತ್ತು ನಂತರ ನನ್ನ ಪ್ರಯೋಗಗಳಲ್ಲಿ ತೊಡಗಬೇಕೆಂದು ಅವರು ಸೂಚಿಸಿದರು. ನಮ್ಮ ಜೀವನದಲ್ಲಿ ಅನೇಕ ಕ್ಷಣಗಳಲ್ಲಿ ನಮಗೆ ಒಂದು ಅನುಭವವಾಗುತ್ತದೆ. ಅದೆಂದರೆ ಅನೇಕ ವಿಷಯಗಳಿಗೆ ನಮಗೆ ಇತರ ವಿಷಯಗಳ ಆಧಾರ ಬೇಕಾಗಿಲ್ಲ. ಒಂದು ಸಣ್ಣ ಧ್ವನಿ ನಮ್ಮಲ್ಲೇ ಹೇಳುತ್ತದೆ: ನೀನು ಸರಿಯಾದ ದಾರಿಯಲ್ಲಿ ನಡೆಯುತ್ತಿದ್ದೀಯೆ, ನೀನು ಎಡಕ್ಕೂ ತಿರುಗಬೇಡ, ಬಲಕ್ಕೂ ತಿರುಗಬೇಡ, ನೇರವಾಗಿ ನಡೆ. ಈ ಧ್ವನಿಯಂತೆ ನಡೆದರೆ ನಾವು ನಿಧಾನವಾಗಿಯಾದರೂ, ಖಚಿತವಾದ ಮತ್ತು ಸರಿಯಾದ ದಿಕ್ಕಿನಲ್ಲಿ ನಡೆಯುತ್ತೇವೆ.



ಅರ್ಥ ವಿಜ್ಞಾನ ಮತ್ತು ಜೀವನ ಮೌಲ್ಯ: ಗಾಂಧೀಜಿಯವರ ಆರ್ಥಿಕ ಚಿಂತನೆಗೆ ಬೆನ್ನೆಲುಬಾಗಿರುವುದು ಅವರ ಆಧ್ಯಾತ್ಮ ಚಿಂತನೆ, ಒಳಿತು ಕೆಡಕುಗಳ ವಿವೇಚನೆ ಮತ್ತು ವ್ಯಕ್ತಿ ಹಾಗೂ ಸಮಾಜದ ಉತ್ತಮ ಮೌಲ್ಯಗಳು. ಅವರ ಮಾತಿನಲ್ಲಿ ಹೇಳುವುದಾದರೆ "ನಿಜವಾದ ಅರ್ಥಶಾಸ್ತ್ರ ಸಾಮಾಜಿಕ ನ್ಯಾಯವನ್ನು ಪ್ರತಿ ಪಾದಿಸುತ್ತದೆ. ಅದು ಎಲ್ಲರ ಹಿತವನ್ನು ವೃದ್ಧಿಸುತ್ತದೆ". "ಒಬ್ಬ ವ್ಯಕ್ತಿಯ ಅಥವಾ ರಾಷ್ಟ್ರದ ನೈತಿಕ ಹಿತವನ್ನು ನೋಯಿಸುವ ಅರ್ಥಶಾಸ್ತ್ರ ಅನೈತಿಕವಾದದ್ದು ಮತ್ತು ಅದು ಪಾಪಕರ".

ಆಡಂಸ್ಮಿತ್‌ನನ್ನು ಒಳಗೊಂಡಂತೆ ಎಲ್ಲ ಅರ್ಥವಿಜ್ಞಾನಿಗಳೂ, ನೈತಿಕ ಅಂಶಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟಿದ್ದರು ಎಂಬುದು ನಿಜ. ನಾವು ಈ ಹಿಂದೆಯೇ ಗಮನಿಸಿರುವಂತೆ ಮಿಲ್ ಹೆಚ್ಚಿನ ಜನರ ಸುಖವನ್ನು ವೃದ್ಧಿಸಬೇಕೆಂದು ವಾದಿಸಿದ್ದ. ವಾಸ್ತವವಾಗಿ ಕ್ಲಾಸಿಲ್ ಪಂಥದ ಅರ್ಥ ವಿಜ್ಞಾನಿಗಳು ವೈಯಕ್ತಿಕ ಸ್ವಾತಂತ್ರ್ಯ, ಮುಕ್ತ ವಾಣಿಜ್ಯ, ಎಲ್ಲ ರಾಷ್ಟ್ರಗಳ ಶ್ರೇಯಸ್ಸನ್ನು ಹೇಗೆ ಸಾಧಿಸುತ್ತದೆ ಎಂಬುದನ್ನು ತಮ್ಮ ಸಿದ್ಧಾಂತಗಳ ಮೂಲಕ ವ್ಯಕ್ತಪಡಿಸಿದ್ದರು. ಆದರೆ ಈ ಎಲ್ಲ ಅರ್ಥವಿಜ್ಞಾನಿಗಳು ಮೂಲಭೂತವಾಗಿ ಅರ್ಥವಿಜ್ಞಾನವನ್ನು ಮಾನವನ ಅಪರಿಮಿತ ಬಯಕೆಗಳು ಮತ್ತು ಮಿತವಾದ ಸಂಪನ್ಮೂಲಗಳ ಹೊಂದಾಣಿಕೆ ವಿಶ್ಲೇಷಣೆಗೆ ಸಂಬಂಧಿಸಿದಂತೆ ವಿಶ್ಲೇಷಿಸಿದ್ದರು. ಇದರಿಂದಾಗಿ ಮಾನವ ಕಲ್ಯಾಣವನ್ನು ವೃದ್ಧಿಸುವುದಕ್ಕಾಗಿ ಉತ್ಪಾದನೆಯನ್ನು ಹೇಗೆ ಗರಿಷ್ಠಗೊಳಿಸಬೇಕು? ಎಂಬುದರ ವಿಶ್ಲೇಷಣೆಯೇ ಅರ್ಥವಿಜ್ಞಾನದ ಮೂಲಭೂತ ಸಮಸ್ಯೆಯಾಗಿ ಹೊರಹೊಮ್ಮಿತು.

ಮಾನವನ ಅಪರಿಮಿತವಾದ ಬಯಕೆಗಳನ್ನು, ಲಭ್ಯವಿರುವ ಸಂಪನ್ಮೂಲಗಳಿಂದ ತೃಪ್ತಿಪಡಿಸುವುದು ಕಷ್ಟವೆಂದಾದರೆ ಅನೇಕ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಗಾಂಧೀಜಿಯುವರು ಬಯಕೆಗಳನ್ನೇ ಕಡಿಮೆ ಮಾಡಿಕೊಳ್ಳುವುದು, ಮಾನವಕಲ್ಯಾಣವನ್ನು ವೃದ್ಧಿಸುವುದಕ್ಕೆ ಯುಕ್ತವಾದ ಮಾರ್ಗವೆಂದು ಅಭಿಪ್ರಾಯಪಟ್ಟಿದ್ದರು. ಆದ್ದರಿಂದ ಅವರ ಪ್ರಕಾರ, ಉತ್ಪಾದನೆಯುನ್ನು ವೃದ್ಧಿಸುವುದರ ಮೂಲಕ, ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಬಹುದು ಎನ್ನುವುದು ತುಂಬಾ ಸಡಿಲವಾದ ವಾದ. ಗಾಂಧೀಜಿಯವರ ಮೇಲಿನ ವಾದದಲ್ಲಿ ನೈತಿಕ ಅಂಶ ಅಡಗಿದೆ ಎನ್ನುವುದು ಗಮನಾರ್ಹ. ಬೃಹತ್ಪ್ರಮಾಣದ ಉತ್ಪಾದನೆಯ ಯುಗದಲ್ಲಿ ಬದುಕುತ್ತಿರುವ ನಾವು, ಗಾಂಧೀಜಿಯವರು ವಾದಿಸುವ "ಬಯಕೆಯನ್ನೇ ಕಡಿಮೆ ಮಾಡಿಕೊಳ್ಳಬೇಕು" ಎಂಬುದನ್ನು ಕಲ್ಪಿಸಿಕೊಳ್ಳುವುದು ಕಷ್ಟವೇ! ಆದರೆ ಭಾರತೀಯ ಆರ್ಥಿಕತೆ ಚೌಕಟ್ಟಿನಲ್ಲಿ ಗಾಂಧೀಜಿಯವರ ವಾದವನ್ನು ಅರ್ಥಮಾಡಿಕೊಳ್ಳುವುದು ಕಷ್ಟವಲ್ಲ. ಸ್ವಂತ ಇಚ್ಛೆಯಿಂದ ತಮ್ಮ ಇಚ್ಛೆಗಳನ್ನು ತ್ಯಜಿಸಿದ್ದ ಋಷಿವರ್ಯರು ಸರ್ವರ ಗೌರವಕ್ಕೆ ಪಾತ್ರರಾಗಿರುವ ಶ್ರೇಷ್ಠರು. ಬಯಕೆಗಳನ್ನೇ ಕಡಿಮೆ ಮಾಡಿಕೊಂಡರೆ, ಮಾನವನ ಕಲ್ಯಾಣ ವೃದ್ಧಿಸುತ್ತದೆ ಎಂಬ ಗಾಂಧೀಜಿಯವರ ನೈತಿಕ ವಾದವನ್ನು ಈ ಹಿನ್ನೆಲೆಯಲ್ಲಿ ತಳ್ಳಿಹಾಕುವುದು ಸುಲಭವೇನಲ್ಲ. ಗಾಂಧೀಜಿ ನೈತಿಕತೆ ಇಲ್ಲದ ಐಶ್ವರ್ಯವನ್ನು ತಿರಸ್ಕರಿಸಬೇಕು ಎಂಬುದಾಗಿ ಅಭಿಪ್ರಾಯಪಟ್ಟಿದ್ದರು. ನೈತಿಕತೆಯನ್ನು ಉಳಿಸಿಕೊಳ್ಳುವ ಅರ್ಥಿಕ ಚಟುವಟಿಕೆ ಸ್ವಾಗತಾರ್ಹ. ಇಂತಹ ಆರ್ಥಿಕ ಚಟುವಟಿಕೆ ಶ್ರಿಮಂತಿಕೆಯನ್ನು ವೃದ್ಧಿಸದಿದ್ದರೂ ಚಿಂತೆಯಿಲ್ಲ. ಆದ್ದರಿಂದ ಗಾಂಧೀಜಿಯವರ ಆರ್ಥಿಕ ಚಿಂತನೆಯಲ್ಲಿ ಅಂತರ್ಗತವಾಗಿರುವ ಅತಿಮುಖ್ಯ ವಿಷಯವೆಂದರೆ ನೈತಿಕತೆ. ಈ ಅಂಶವೇ ಅವರನ್ನು ಇತರ ಆರ್ಥಿಕ ಚಿಂತಕರಿಂದ ಭಿನ್ನವಾಗಿರುವಂತೆ ಮಾಡಿರುವುದು ಸಹ.

**ಉದ್ಯೋಗ ಮತ್ತು ಉತ್ಪಾದನೆ :** ಗಾಂಧೀಜಿಯವರ ಭಾರತದ ಅರ್ಥ ವ್ಯವಸ್ಥೆಗೆ ಸಂಬಂಧಿಸಿದಂತೆ ಉದ್ಯೋಗ ಮತ್ತು ಉತ್ಪಾದನೆಯನ್ನು ಕುರಿತು ತುಂಬಾ ವ್ಯಾಪಕವಾಗಿ ಚಿಂತಿಸಿದ್ದರು. ಈ ಬಗ್ಗೆ ಶುದ್ಧ ಅರ್ಥವಿಜ್ಞಾನಿಗಳು ಮಂಡಿಸಿರುವ ಉದ್ಯೋಗ ಮತ್ತು ಉತ್ಪಾದನ ಮೀಮಾಂಸೆಗಳನ್ನು ಅವರು ಅಭಿವೃದ್ಧಿಪಡಿಸಲಿಲ್ಲ. ಆದರೆ ಭಾರತದಂತಹ ವಿಶಾಲ ದೇಶದಲ್ಲಿ ಉದ್ಯೋಗ ಸೃಷ್ಟಿ ಹೇಗೆ ನಡೆಯಬೇಕು? ಉತ್ಪಾದನೆಯ ಸ್ವರೂಪ ಹೇಗಿರಬೇಕು? ಎಂಬುದರ ಬಗ್ಗೆ ತುಂಬಾ ವಾಸ್ತವವಾದ ನಿಲುವನ್ನು ಅವರು ತಳೆದಿದ್ದರು.

ಭಾರತ ಮೂಲಭೂತವಾಗಿ ಹಳ್ಳಿಗರ ನಾಡು. ಆದ್ದರಿಂದ ಈ ರಾಷ್ಟ್ರದ ಅಭಿವೃದ್ಧಿ ಹಳ್ಳಿಯನ್ನು ಚೈತನ್ಯಪೂರ್ಣವನ್ನಾಗಿ ಮಾಡುವುದರಲ್ಲಿ ಅಡಗಿದೆ.



ಆದ್ದರಿಂದ ವಿಪರೀತ ಜನಸಂಖ್ಯೆಯನ್ನುಳ್ಳ ಹಳ್ಳಿಗಳ ನಾಡಾದ ಭಾರತ ಪಾಶ್ಚಾತ್ಯ ಮಾದರಿಯ ಅಭಿವೃದ್ಧಿಯನ್ನು ಅನುಕರಣೆ ಮಾಡುವುದರಲ್ಲಿ ಸ್ವಲ್ಪವೂ ಅರ್ಥವಿಲ್ಲ. ನಮ್ಮ ದೇಶದಲ್ಲಿ ಎಲ್ಲ ಆರ್ಥಿಕ ಚಟುವಟಿಕೆಯ ಕೇಂದ್ರ ಬಿಂದು 'ಹಳ್ಳಿ' ಯಾಗಿರಬೇಕು.

ಹಳ್ಳಿಗಳಲ್ಲಿ ಅಪೂರ್ಣೋದ್ಯೋಗ ಮತ್ತು ನಿರುದ್ಯೋಗವಿದೆ. ಇದನ್ನು ಹೋಗಲಾಡಿಸಬೇಕು. ಇಂತಹ ಸಮಸ್ಯೆಗಳನ್ನು ಕೇವಲ ಖಾದಿ ಮತ್ತು ಗ್ರಾಮೀಣ ಉದ್ಯಮಗಳು ಹೋಗಲಾಡಿಸಬೇಕು. ಇಂತಹ ಸಮಸ್ಯೆಗಳನ್ನು ಕೇವಲ ಖಾದಿ ಮತ್ತು ಗ್ರಾಮೀಣ ಉದ್ಯಮಗಳು ಹೋಗಲಾಡಿಸಬಲ್ಲವು. ಗಾಂಧೀಜಿಯವರಿಗೆ ಇವೆರಡೂ ಆರ್ಥಿಕ ಸ್ವಾತಂತ್ರ್ಯದ ಕುರುಹುಗಳು. ಆದ್ದರಿಂದ ರಾಷ್ಟ್ರಾದ್ಯಂತ ಉತ್ಪಾದನೆಯ ವಿಕೇಂದ್ರೀಕರಣವಾಗಬೇಕು. ಗೃಹ ಕೈಗಾರಿಕೆಗಳು ಮನೆಯೊಳಗೇ ಉದ್ಯೋಗವನ್ನು ಸೃಷ್ಟಿಸುವ ಸಾಮರ್ಥ್ಯವನ್ನು ಹೊಂದಿವೆ. ಈ ಕೈಗಾರಿಕೆಗಳು ಗ್ರಾಮೀಣ ಪ್ರದೇಶಗಳಲ್ಲಿರುವ ಕರಕೌಶ್ಯಲದ ಶ್ರೀಮಂತಿಕೆಯನ್ನು ಬಳಸಿಕೊಳ್ಳುವ ಸಾಮರ್ಥ್ಯ ಹೊಂದಿದೆ ಎನ್ನುವುದನ್ನು ಮರೆಯಬಾರದು.

ಗಾಂಧೀಜಿಯವರು, ಎಲ್ಲ ಸಮರ್ಥ ಶರೀರಗಳಿಗೂ ಉದ್ಯೋಗ ದೊರಕಿಸಿ ಕೊಡಲೇಬೇಕೆಂದು ಭಾವಿಸಿದ್ದರು. ಗಾಂಧೀಜಿ ಇಂತಹ ಉದ್ಯೋಗ ಸೃಷ್ಟಿ, ಯಾಂತ್ರೀಕರಣದಿಂದ ಖಂಡಿತ ಸಾಧ್ಯವಿಲ್ಲವೆಂದು ನಂಬಿದ್ದರು. ವಿದ್ಯುಚ್ಛಕ್ತಿ ಅಥವಾ ಅಣುಶಕ್ತಿಯನ್ನು ಬಳಸಿ ಎಲ್ಲರಿಗೂ ಉದ್ಯೋಗ ದೊರೆಯುವ ಔದ್ಯೋಗೀಕರಣ ನಡೆಯುವುದಾದರೆ, ಅದಕ್ಕೆ ತಮ್ಮ ವಿರೋಧವಿಲ್ಲವೆಂದು ಅಭಿಪ್ರಾಯಪಟ್ಟಿದ್ದರು. ಆದರೆ ಇವುಗಳಿಂದ ಆ ಕಾರ್ಯ ಸಾಧ್ಯವಿಲ್ಲವೆನ್ನುವುದೂ ಅವರ ಖಚಿತ ಭಾವನೆಯಾಗಿತ್ತು. ಭಾರತದಲ್ಲಿ ವ್ಯಾಪಕ ಶ್ರಮ ಶಕ್ತಿ ಇರುವುದರಿಂದ ಮತ್ತು ಬಂಡವಾಳದ ಕೊರತೆಯಿರುವುದರಿಂದ, ಗ್ರಾಮೀಣ ಉದ್ಯಮ ಮತ್ತು ಖಾದಿ ಉದ್ಯಮದಿಂದ ಮಾತ್ರ ಉದ್ಯೋಗ ಸೃಷ್ಟಿ ಸಾಧ್ಯವೆನ್ನುವುದು ಅವರ ಭಾವನೆಯಾಗಿತ್ತು. ಅವರ ಮಾತುಗಳಲ್ಲೇ ಹೇಳುವುದಾದರೆ "ಖಾದಿ ಗ್ರಾಮೀಣ ಉದ್ಯಮ ಮತ್ತು ಖಾದಿ ಉದ್ಯಮದಿಂದ ಮಾತ್ರ ಉದ್ಯೋಗ ಸೃಷ್ಟಿ ಸಾಧ್ಯವೆನ್ನುವುದು ಅವರ ಭಾವನೆಯಾಗಿತ್ತು. ಅವರ ಮಾತುಗಳಲ್ಲೇ ಹೇಳುವುದಾದರೆ "ಖಾದಿ ಗ್ರಾಮೀಣ ಸೌರವ್ಯೂಹದ ಸೂರ್ಯನಿದ್ದಂತೆ. ಈ ಉದ್ಯಮದಿಂದ ಪಡೆಯುವ ಬೆಳಕು ಮತ್ತು ಇತರ ಸೌಲಭ್ಯಗಳಿಗೆ ಪ್ರತಿಯಾಗಿ ಖಾದಿ ಉದ್ಯಮಕ್ಕೆ ಬೆಂಬಲವಾಗಿ ನಿಂತಿರುವ ಇತರ ಗ್ರಾಮೀಣ ಉದ್ಯಮಗಳು ಈ ಸೌರವ್ಯೂಹದ ಉಪಗ್ರಹ ಬೆಂಬಲವಾಗಿ ನಿಂತಿರುವ ಇತರ ಗ್ರಾಮೀಣ ಉದ್ಯಮಗಳು ಈ ಸೌರವ್ಯೂಹದ ಉಪಗ್ರಹಗಳು" ಚರಕ ಗ್ರಾಮದ ಅತಿ ಬಡವರಿಗೆ ತರಬಹುದಾದ ಆರ್ಥಿಕ ಅನುಕೂಲದ ಬಗ್ಗೆ ಗಾಂಧೀಜಿಯವರಿಗೆ ಬಹಳ ಸಂತೋಷವಿತ್ತು. ಪ್ರಸಿದ್ಧ ಅರ್ಥವಿಜ್ಞಾನಿಯಾದ G.D.H ಕೋಲೆ ಇದರ ಬಗ್ಗೆ ಹೀಗೆ ಅಭಿಪ್ರಾಯಪಟ್ಟಿದ್ದರು: "ಮನೆ ಮನೆಯಲ್ಲೇ ತಯಾರಾಗುವ ಖಾದಿಯ ಬಗ್ಗೆ ಗಾಂಧೀಜಿಯವರ ಪ್ರಚಾರ, ರೋಮಾಂಚಕವಾದ ಹಳೆಯ ಯುಗವೊಂದನ್ನು ಪುನರುತ್ಥಾನಗೊಳಿಸುವ ಒಂದು ಕಾರ್ಯ ಚತುರತೆಯಲ್ಲ. ಆದರೆ, ಭಾರತದ ಗ್ರಾಮೀಣ ಪ್ರದೇಶಗಳಲ್ಲಿ ಬಡತನವನ್ನು ನಿರ್ಮೂಲನ ಮಾಡಿ ಗ್ರಾಮೀಣ ಜನರ ಜೀವನ ಮಟ್ಟವನ್ನು ಸುಧಾರಿಸುವ ಒಂದು ಅತ್ಯಂತ ವಾಸ್ತವಿಕವಾದ ಪ್ರಯತ್ನ.

ಮಹಾತ್ಮಾ ಗಾಂಧಿ, ಖಾದಿಯ ಬಗ್ಗೆ ಒಂದು ತೀವ್ರವಾದ ಅಭಿಪ್ರಾಯವನ್ನು ಸಹ ಹೊಂದಿದ್ದರು. ಅವರ ಈ ಮಾತುಗಳನ್ನು ನೋಡಿ: "ಜನರು ನೂಲೇ ಹಣವೆಂಬ ಒಂದು ಕ್ರಮವನ್ನು ಒಪ್ಪಿಕೊಂಡರೆ, ನೂಲು ಕೋಟ್ಯಂತರ ರೂಪಾಯಿಗಳ ಸರಕುಗಳನ್ನು ಕೊಳ್ಳುವ ಒಂದು ಸಾಧನವಾಗುತ್ತದೆ. ಭೌತಿಕ ಶ್ರಮ ಒಂದು ಸಂಪತ್ತಾಗಿ, ಇದು ಬಂಡವಾಳಸ್ಥರ ವಿರುದ್ಧ ಸುಲಭವಾಗಿ ಸ್ಪರ್ಧಿಸುತ್ತದೆ."

ಬೃಹತ್ಪ್ರಮಾಣದ ಉತ್ಪಾದನೆಯನ್ನು ಗಾಂಧೀಜಿ ತೀವ್ರವಾಗಿ ವಿರೋಧಿಸಿದ್ದರು. ಪ್ರಪಂಚದ ಎಲ್ಲ ರಾಷ್ಟ್ರಗಳೂ ಬೃಹತ್ಪ್ರಮಾಣದ ಉತ್ಪಾದನೆಯಲ್ಲಿ ತೊಡಗಿದರೆ, ಅವು ಉತ್ಪಾದಿಸುವ ಸರಕುಗಳಿಗೆ ಮಾರುಕಟ್ಟೆಯಾದರೂ ಎಲ್ಲಿರುತ್ತದೆ? ಎನ್ನುವುದು ಅವರ ಪ್ರಶ್ನೆಯಾಗಿತ್ತು. ವಿಶ್ವದ ಆರ್ಥಿಕ ಬಿಕ್ಕಟ್ಟಿಗೆ ಬೃಹತ್ಪ್ರಮಾಣದ ಉತ್ಪಾದನೆಯೇ ಕಾರಣವೆಂಬುದು ಅವರ ಅಭಿಪ್ರಾಯವಾಗಿತ್ತು. ಉತ್ಪಾದನೆ, ವಿತರಣೆ ಮತ್ತು



ಉದ್ಯಮವನ್ನು ಸ್ಥಾಪಿಸುವ ಸ್ಥಳಗಳ ನಡುವೆ ಅತ್ಯಂತ ಹೆಚ್ಚಿನ ಸಂಯೋಜನೆ ಅಗತ್ಯವೆನ್ನುವುದು ಗಾಂಧೀಜಿಯವರ ಅಭಿಪ್ರಾಯವಾಗಿತ್ತು. ಅವರ ಈ ಮಾತುಗಳನ್ನು ನೋಡಿ:

"ಏಕಕಾಲದಲ್ಲಿ ಬೃಹತ್ಪ್ರಮಾಣದ ವಿತರಣೆಯಿಲ್ಲದೆ ನಡೆಯುವ ಬೃಹತ್ಪ್ರಮಾಣದ ಉತ್ಪಾದನೆ, ನಿಜವಾಗಿಯೂ ವಿಶ್ವವನ್ನು ದುರಂತಕ್ಕೀಡು ಮಾಡುತ್ತದೆ. ಬೃಹತ್ಪ್ರಮಾಣದ ಉತ್ಪಾದನೆ, ಅನುಭೋಗಿಯ ನೈಜ ಅಗತ್ಯತೆಯನ್ನು ಗಣನೆಗೆ ತೆಗೆದುಕೊಳ್ಳುವುದೇ ಇಲ್ಲ. ಬೃಹತ್ಪ್ರಮಾಣದ ಉತ್ಪಾದನೆ, ತನ್ನ ಮಿತಿಗಳೊಡನೆಯೇ ಮುಂದುವರಿಯುತ್ತದೆ. ಎಲ್ಲ ಅಗತ್ಯಗಳನ್ನೂ ಪೂರೈಸುತ್ತದೆ ಎಂದು ಇಟ್ಟುಕೊಂಡರೂ; ಅವು ಉತ್ಪಾದನೆ ಕೆಲವು ನಿರ್ದಿಷ್ಟ ಸ್ಥಳಗಳಲ್ಲಿ ಕೇಂದ್ರೀಕೃತವಾಗುವಂತೆ ಮಾಡುತ್ತದೆ. ಆಗ ನಾವು ವಿತರಣೆಯನ್ನು ನಿಯಂತ್ರಿಸುವುದಕ್ಕಾಗಿ ಸುತ್ತು ಬಳಸು ಕ್ರಮಗಳನ್ನು ಅನುಸರಿಸಬೇಕಾಗುತ್ತದೆ. ಇದಕ್ಕೆ ಬದಲಾಗಿ ಉತ್ಪಾದನೆ ಮತ್ತು ಅನುಭೋಗ ಅವು ಅಗತ್ಯವಿರುವ ಸ್ಥಳಗಳಲ್ಲಿ ನಡೆದರೆ, ಅವು ಸ್ವಯಂ ಚಾಲಿತವಾಗಿ ನಿಯಂತ್ರಿತವಾಗುತ್ತವೆ. ಆಗ ಇತರ ಚಮತ್ಕಾರಗಳಿಗಾಗಲೀ, ಉತ್ಪಾದನೆ ಮತ್ತು ವಿತರಣೆಯ ಕ್ಷೇತ್ರದಲ್ಲಿ ಜೂಜಾಟಗಳಿಗಾಗಲೀ ಅವಕಾಶವೇ ಇರುವುದಿಲ್ಲ."

"ಹಾಗಾದರೆ, ಪಾಶ್ಚಾತ್ಯ ರಾಷ್ಟ್ರಗಳು ಸಾಧಿಸಿರುವ ಅಪಾರ ತಾಂತ್ರಿಕ ಪ್ರಗತಿಯ ಬಗ್ಗೆ ಗಾಂಧೀಜಿಯವರ ಅಭಿಪ್ರಾಯವೇನು? ಗಾಂಧೀಜಿಯವರ ಪ್ರಕಾರ, "ಗ್ರಾಮೀಣ ಪ್ರದೇಶದಲ್ಲಿ ಉತ್ಪಾದನೆ ಮತ್ತು ವಿತರಣೆಯ ವಾದದಿಂದ ಪಾಶ್ಚಾತ್ಯ ರಾಷ್ಟ್ರಗಳು ವಿಜ್ಞಾನ ಮತ್ತು ಕೈಗಾರಿಕಾ ವ್ಯವಸ್ಥೆಯಲ್ಲಿ ಸಾಧಿಸಿರುವ ಅಗಾಧ ಪ್ರಗತಿ ವಿಶ್ವಕ್ಕೆ ಅಗತ್ಯವಿಲ್ಲವೆಂದಲ್ಲ. ಆದರೆ, ಯಾರು ಕುಶಲತೆಯನ್ನು ಇನ್ನೂ ಅಭಿವೃದ್ಧಿ ಪಡಿಸಿಕೊಂಡಿಲ್ಲವೋ, ಅವರ ಪ್ರಗತಿಗಾಗಿ ಅದನ್ನು ಬಳಸಬೇಕು ಮತ್ತು ಈ ಕಾರ್ಯ ನೈತಿಕ ಆಧಾರವನ್ನು ಹೊಂದಿರಬೇಕು.

ಗಾಂಧೀಜಿಯವರು ಉತ್ಪಾದನೆಯಲ್ಲಿ ಬಯಸುತ್ತಿದ್ದ ಸುಧಾರಣೆಯೂ ಒಂದು ಸ್ವಾರಸ್ಯಕರವಾದ ಅಂಶವೇ. ಒಂದು ಕಾರ್ಖಾನೆಯಲ್ಲಿ ಶ್ರಮವನ್ನು ಉಳಿತಾಯ ಮಾಡಲು, ಅಳವಡಿಸಲಾಗುವ ಯಂತ್ರ, ಕಾರ್ಮಿಕರನ್ನು ಅನಗತ್ಯ ಮಾಡುತ್ತದೆ. ಕಾಲಕ್ರಮದಲ್ಲಿ ಉತ್ಪಾದನೆಗೆ ತುಂಬಾ ಕಡಿಮೆ ಶ್ರಮದ ಅಗತ್ಯ ಉಂಟಾಗುತ್ತದೆ. ಆದರೆ ಗಾಂಧೀಜಿಯವರಿಗೆ, ಶ್ರಮವನ್ನು ಉಳಿತಾಯ ಮಾಡುವುದು ಶ್ರಮಿಕನ ಜೀವನ ಮಟ್ಟವನ್ನು ಸುಧಾರಿಸುವುದಕ್ಕಾಗಿ ಉತ್ಪಾದನಾ ವಿಧಾನದಲ್ಲಿ ಸುಧಾರಣೆಯಾದರೆ, ಹೊಸ ರೀತಿಯ ಚರಕ ಒಂದನ್ನು ಅಳವಡಿಸಿದರೆ, ಆಗ ಹಿಂದೆ ನೂಲುತ್ತಿದ್ದಷ್ಟೇ ನೂಲನ್ನು ತೆಗೆದರೂ, ಶ್ರಮಿಕರಿಗೆ ಸಮಯದ ಉಳಿತಾಯದಿಂದಾಗಿ, ಇತರ ಅನೇಕ ಕಾರ್ಯಗಳಿಗೆ ಬಿಡುವು ದೊರೆತಂತಾಗುತ್ತದೆ. ಆದ್ದರಿಂದ ಈ ಕ್ರಮದಿಂದ ನಡೆಯುವ ಸುಧಾರಣೆಯಿಂದ ಉದ್ಯೋಗಕ್ಕೆ ಯಾವ ರೀತಿಯ ಧಕ್ಕೆಯೂ ಉಂಟಾಗುವುದಿಲ್ಲ. ಹಳ್ಳಿಯ ಜನರೆಲ್ಲರನ್ನೂ ನಿರುದ್ಯೋಗಸ್ಥರನ್ನಾಗಿ ಮಾಡುವ ಯಂತ್ರ ಪ್ರಧಾನವಾದ ಬಟ್ಟೆಯನ್ನು ಉತ್ಪಾದಿಸುವ ಕ್ರಮವನ್ನು ಆಯ್ಕೆ ಮಾಡಬೇಕೆ ಅಥವಾ ಎಲ್ಲರನ್ನೂ ಉದ್ಯೋಗದಲ್ಲಿ ಮುಂದುವರಿಸಿಕೊಂಡು ಹೋಗುವ ಉತ್ತಮ ಚರಕ ವ್ಯವಸ್ಥೆಯನ್ನು ಮುಂದುವರಿಸಿಕೊಂಡು ಹೋಗಬೇಕೆ?

ಗಾಂಧೀಜಿಯವರು ಎಲ್ಲ ವ್ಯಕ್ತಿಗಳಿಗೂ ಕೆಲಸ ಅತ್ಯಂತ ಅಗತ್ಯವೆಂದು ಭಾವಿಸಿದ್ದರು. ಕೆಲಸ ಕೇವಲ ನಿರುದ್ಯೋಗಸ್ಥರಿಗಷ್ಟೇ ಅಲ್ಲ. ವೈದ್ಯರು, ಅಧ್ಯಾಪಕರು, ನ್ಯಾಯವಾದಿಗಳು ಎಲ್ಲರೂ ತಮ್ಮ 'ಅನ್ನಕ್ಕಾಗಿ ಶ್ರಮ' ವನ್ನು ಪಡಲೇಬೇಕು. ಸಮಾಜಕ್ಕೆ ಅದು ಕರ್ತವ್ಯವಾಗಿ ಅಲ್ಲ. ಆದರೆ ಪ್ರತಿಯೊಬ್ಬರೂ ಎಚ್ಚೆತ್ತಿರುವುದಕ್ಕಾಗಿ ಇಂತಹ ಶ್ರಮ ಅಗತ್ಯ.

ಗಾಂಧೀಜಿಯವರು ಉತ್ಪಾದನೆಯಲ್ಲಿ ವಿಕೇಂದ್ರೀಕರಣ ಮತ್ತು ಸ್ವದೇಶದಲ್ಲಿ ಉತ್ಪಾದಿತ ವಸ್ತುಗಳ ಅನುಭೋಗದ ಬಗ್ಗೆ ಖಚಿತವಾದ ನಂಬಿಕೆಗಳನ್ನಿಟ್ಟು ಕೊಂಡಿದ್ದರು. ರಾಷ್ಟ್ರದ ಶ್ರಮವನ್ನು ಬಳಸಿಕೊಂಡು, ಗ್ರಾಮೀಣ ಪುನರುಜ್ಜೀವನವನ್ನು ಸಾಧಿಸಬೇಕೆಂಬುದು ಅವರ ಧ್ಯೇಯವಾಗಿತ್ತು.

**ಗ್ರಾಮೀಣ ಸ್ವಾವಲಂಬನೆ :** ಆಧುನಿಕ ಅರ್ಥಶಾಸ್ತ್ರಜ್ಞರಿಗೆ ತುಂಬಾ ವಿಚಿತ್ರವಾಗಿ ಕಾಣುವ ರೀತಿಯಲ್ಲಿ ಗ್ರಾಮೀಣ ಸ್ವಾವಲಂಬನೆಯ ವಿಚಾರವನ್ನು ಗಾಂಧೀಜಿ ಮಂಡಿಸಿದ್ದರು. ಈ ವಿಚಾರಗಳು ಯಾವುದೇ



ಪ್ರಚಾರಕ್ಕಾಗಿ ಮಾಡಿದಂಥವಲ್ಲ. ತಮ್ಮ ವಿಚಾರಗಳ ಆಚರಣೆಯಿಂದ ಗ್ರಾಮೀಣ ಜನರ ಜೀವನಮಟ್ಟ ಉತ್ತಮವಾಗುತ್ತದೆಂಬ ಖಚಿತವಾದ ನಿಲುವು ಗಾಂಧೀಜಿಯವರದ್ದಾಗಿತ್ತು.

ಯಾವುದೇ ವ್ಯವಸ್ಥೆಯಲ್ಲಿ ಶೋಷಣೆ ಇರಬಾರದು. ವ್ಯಕ್ತಿ ಗೌರವ ನಾಶವಾಗಬಾರದು. ಬೃಹತ್ಪ್ರಮಾಣದ ಕೈಗಾರಿಕೆಗಳು ಅನೇಕ ರೀತಿಯ ಶೋಷಣೆಗಳಿಗೆ ಎಡೆಮಾಡಿಕೊಡುತ್ತವೆ. ಒಬ್ಬರು ಮತ್ತೊಬ್ಬರನ್ನು ಶೋಷಿಸಲಾಗದಂಥ ಒಂದು ಗ್ರಾಮೀಣ ವ್ಯವಸ್ಥೆಯನ್ನು ಗಾಂಧೀಜಿ ಮನಗಂಡಿದ್ದರು. ಗ್ರಾಮೀಣ ವ್ಯವಸ್ಥೆ ವರ್ಗ ರಹಿತವಾಗಿರಬೇಕು. ಪ್ರತಿಯೊಂದು ಗ್ರಾಮವೂ ತನಗೆ ಬೇಕಾದುದೆಲ್ಲವನ್ನೂ ಉತ್ಪಾದಿಸಿಕೊಳ್ಳಬೇಕು. ಬೇರೆ ಗ್ರಾಮಗಳ ಮೇಲೆ ಅವಲಂಬಿಸಬೇಕಾದರೂ ಇದು ಸಾಧ್ಯವಾದಷ್ಟೂ ಕಡಿಮೆ ಇರಬೇಕು. ಪ್ರತಿಯೊಂದು ಗ್ರಾಮವೂ ತನ್ನ ಅಗತ್ಯವಾದ ಆಹಾರ, ಬಟ್ಟೆ ಮುಂತಾದ ಜೀವನಾವಶ್ಯಕಗಳನ್ನು ಉತ್ಪಾದಿಸಿಕೊಳ್ಳಬೇಕು. ಗಾಂಧಿಜೀಯವರು ನೆಲೆಸಿದ್ದ ಗ್ರಾಮ ಅತ್ಯಂತ ಸಣ್ಣದೂ ಅಲ್ಲ, ತಾಲ್ಲೂಕಿನಷ್ಟು ದೊಡ್ಡದೂ ಅಲ್ಲ. ಇವೆರಡರ ಮಧ್ಯದ್ದು. ಇಂತಹ ಗ್ರಾಮದಲ್ಲಿ ಸಾಕಷ್ಟು ಗೃಹ ಕೈಗಾರಿಕೆಗಳಿರಬೇಕು. ಈ ಗ್ರಾಮಕ್ಕೆ ಅಗತ್ಯವಾದ ಶಾಲೆ, ಸಭಾಭವನ, ಸಾಕಷ್ಟು ಗೋಸಂಪತ್ತು ಇರಬೇಕು. ಸಾಧ್ಯವಾದಷ್ಟು ಎಲ್ಲ ಆರ್ಥಿಕ ಚಟುವಟಿಕೆಗಳೂ ಸಹಕಾರ ವ್ಯವಸ್ಥೆಯಲ್ಲಿ ನಡೆಯಬೇಕು. ಜಾತಿಪದ್ಧತಿ, ಅಸ್ಪೃಶ್ಯತೆಗಳನ್ನು ಗ್ರಾಮ ಜೀವನದಿಂದ ತೊಡೆದು ಹಾಕಬೇಕು. ಒಂದು ಪಕ್ಷ ಗ್ರಾಮಕ್ಕೆ ಅಗತ್ಯವಿರುವುದಕ್ಕಿಂತಲೂ ಹೆಚ್ಚು ಕೃಷಿ ಜಮೀನು ಲಭ್ಯವಿದ್ದರೆ, ಅದರಲ್ಲಿ ಆದಾಯ ಬರುವ ಹಣದ ಬೆಳೆಗಳನ್ನು [cash crops] ಬೆಳೆಯಬಹುದು, ಆದರೆ ಗಾಂಜಾ, ಹೊಗೆಸೊಪ್ಪು ಅಥವಾ ಅಫೀಮಿನಂತಹ ಬೆಳೆಗಳನ್ನು ಖಂಡಿತ ಬೆಳೆಯಬಾರದು.

ಗ್ರಾಮದಲ್ಲಿ ಸಹಕಾರ ವ್ಯವಸ್ಥೆ ಹೇಗಿರಬೇಕು? ಸಹಕಾರ, ಗ್ರಾಮೀಣ ಸಮಾಜದ ಸೇವೆಗಾಗಿ ತಯಾರಾಗುವ "ಬುದ್ಧಿವಂತ" ಶ್ರಮದ ಒಂದು ಸಂಘಟನೆಯಾಗಿರಬೇಕೆಂಬುದು ಅವರ ಭಾವನೆಯಾಗಿತ್ತು. ಗ್ರಾಮದಲ್ಲಿ ಶ್ರಮಿಕರಿಗೆ ಕಚ್ಚಾಮಾಲನ್ನು ಒಟ್ಟು ಸಂಗ್ರಹದಿಂದ ಸರಬರಾಜು ಮಾಡಬಹುದು. ಸಹಕಾರ ತತ್ವದ ಆಧಾರದ ಮೇಲೆ, ಶ್ರಮವಿಭಜನೆ ಮುಂತಾದುವನ್ನು ಸಾಧಿಸಬಹುದು. ಆದರೆ ಖಾದಿ ಉದ್ಯಮ ಎಲ್ಲ ಉದ್ಯಮಗಳಿಗಿಂತಲೂ ಮುಖ್ಯ.

ತಮ್ಮ ಸಹಕಾರ ವಿಚಾರಕ್ಕೆ ಮೆರಗು ಕೊಡುವ ಒಂದು ಸಾಮಾಜಿಕ ಸಮತಾ ತತ್ವಗಳನ್ನು ಗಾಂಧೀಜಿ ರೂಪಿಸಿದ್ದರು. ಈ ಸಮತಾತತ್ವ ಸಹಕಾರ ಹಾಗೂ ಸಮಾಜ ಸೇವೆಯನ್ನು ಮುಖ್ಯವಾಗಿ ಒಳಗೊಂಡಿದ್ದವು. ಅವರ ಈ ಮಾತುಗಳನ್ನು ನೋಡಿ:

"ನಾವು ಸಹಕಾರಿ ಬೇಸಾಯವನ್ನು ಅಳವಡಿಸಿಕೊಳ್ಳದೆ, ಕೃಷಿಯ ಲಾಭವನ್ನು ಸಮಗ್ರವಾಗಿ ಪಡೆಯುವುದು ಸಾಧ್ಯವಿಲ್ಲವೆನ್ನುವುದು ನನ್ನ ಭಾವನೆ. ಗ್ರಾಮದ ನೂರಾರು ಕುಟುಂಬಗಳು ಒಟ್ಟಾಗಿ ಬೇಸಾಯ ಮಾಡುವುದು ಮತ್ತು ಆದರಿಂದ ಬರುವ ಆದಾಯವನ್ನು ಹಂಚಿಕೊಳ್ಳುವುದು, ಜಮೀನನ್ನು ನೂರು ಭಾಗಗಳಾಗಿ ಮಾಡಿ, ಬೇಸಾಯ ಮಾಡುವುದಕ್ಕಿಂತ ಉತ್ತಮವಾದುದಲ್ಲವೇ? ಜಮೀನಿಗೆ ಅನ್ವಯವಾಗುವ ಈ ಮಾತು ಬಂಡವಾಳಕ್ಕೂ ಸಹ ಅನ್ವಯವಾಗುತ್ತದೆ."

**ಇತರ ಕೆಲವು ವಿಚಾರಗಳು :** ಗಾಂಧೀಜಿ ರಾಷ್ಟ್ರ ಆಹಾರದ ಸ್ವಾವಲಂಬನೆಯ ದೃಷ್ಟಿಯಿಂದ ಲಭ್ಯವಿರುವ ಭೂಮಿಯನ್ನು ಮುಖ್ಯವಾಗಿ ಆಹಾರದ ಉತ್ಪಾದನೆಗಾಗಿ ಒಳಪಡಿಸಬೇಕೆಂದು ಅಭಿಪ್ರಾಯಪಟ್ಟಿದ್ದರು. 1945ರಲ್ಲಿ ಆಹಾರದ ಕೊರತೆ ಇದ್ದಾಗ ಅವರು, ವೈಸ್ ರೀಗಲ್‌ನ ಬಂಗಲೆಯ ತೋಟದ ಜಮೀನೂ ಸೇರಿದಂತೆ ರಾಷ್ಟ್ರದಲ್ಲಿ ಲಭ್ಯವಿರುವ ಜಮೀನಿನಲ್ಲೆಲ್ಲಾ ಆಹಾರ ಧಾನ್ಯವನ್ನು ಉತ್ಪಾದಿಸಬೇಕೆಂದು ಸೂಚಿಸಿದ್ದರು.

ಶ್ರಮಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಅಹಿಂಸಾತ್ಮಕ ರೀತಿಯಲ್ಲಿ ಬಗೆಹರಿಸಿಕೊಳ್ಳಬೇಕೆಂಬುದು ಅವರ ಭಾವನೆಯಾಗಿತ್ತು. ಅವರು ಅಹಮದಾಬಾದಿನ ಒಂದು ಕಾರ್ಮಿಕ ಸಂಸ್ಥೆಯ ಸಲಹೆಗಾರರಾಗಿದ್ದರೂ ಸಹ ಕಾರ್ಮಿಕರು ಹಾಗೂ ಬಂಡವಾಳದ ನಡುವಿನ ಘರ್ಷಣೆ ಹಿಂಸೆಯ ಸ್ವರೂಪವನ್ನು ಎಂದೂ ತಾಳಲಾರದೆಂಬುದು ಅವರ ಭಾವನೆಯಾಗಿತ್ತು. ಪ್ರತಿಯೊಬ್ಬ ಕಾರ್ಮಿಕನೂ ಏನಾದರೂ ಉಪಕಸಬನ್ನು ಮಾಡಬೇಕೆಂದು ಅವರು ಹೇಳುತ್ತಿದ್ದರು. ಇಂತಹ ಉಪಕಸುಬಿನಿಂದ ಮುಷ್ಕರದ



ಸಮಯದಲ್ಲಿ, ಕಾರ್ಮಿಕರಿಗೆ ಅನುಕೂಲವಾಗಿತ್ತದೆ. ಇಷ್ಟೇ ಅಲ್ಲದೆ ಕಾರ್ಮಿಕರು ಇಂತಹ ಕಸುಬಿನಿಂದ ತಮ್ಮ ಬಿಡುವಿನ ಸಮಯವನ್ನು ಉಪಯುಕ್ತವಾಗಿ ಕಳೆಯ ಬಹುದು ಎನ್ನುವುದು ಅವರ ಭಾವನೆಯಾಗಿತ್ತು. ಈ ದೃಷ್ಟಿಯಿಂದ ಸೋಪು, ಪೇಪರ್ ತಯಾರಿಕೆ, ಬಟ್ಟೆ ಹೊಲಿಯುವುದು ಮತ್ತು ಟೈಪಿಂಗ್ ಮುಂತಾದುವು ಮುಖ್ಯ ಉಪ ಕಸಬುಗಳು, ಮುಷ್ಕರಗಳನ್ನು ಸಾಧ್ಯವಾದಷ್ಟು ತಡೆಗಟ್ಟಬೇಕು. ಅದು ಕಾರ್ಮಿಕರ ಕೊನೆಯ ಅಸ್ತ್ರವಾಗಿರಬೇಕು.

**"ಸರ್ವೋದಯ"** ಗಾಂಧೀಜಿಯವರ ಜೀವನ ಮಂತ್ರ, ಮಿಲ್ ಮುಂತಾದ ಅರ್ಥವಿಜ್ಞಾನಿಗಳು ತಮ್ಮ ವಿಶ್ಲೇಷಣೆಯಲ್ಲಿ "ಸಮಾಜದ ಹೆಚ್ಚಿನ ಜನರ ಹೆಚ್ಚಿನ ಸುಖವನ್ನು" ಚರ್ಚಿಸಿದ್ದರು. ಆದರೆ ಗಾಂಧೀಜಿಯವರಿಗೆ ಸಮಾಜದ "ಎಲ್ಲ" ಜನರ ಏಳ್ಗೆ ಮುಖ್ಯ. ಸಮಾಜದಲ್ಲಿ ಕೆಲವರ ಏಳ್ಗೆ, ಮತ್ತೆ ಕೆಲವರ ಹಿತಕ್ಕೆ ಧಕ್ಕೆ ತರುವುದಾದರೆ, ಅಂಥ ವ್ಯವಸ್ಥೆಯಲ್ಲಿ ಗಾಂಧೀಜಿಯವರಿಗೆ ನಂಬಿಕೆ ಇಲ್ಲ. ಬಡವರಲ್ಲಿ ಬಡವರಾದವರ ಆದಾಯ ಸಹ ವೃದ್ಧಿಯಾಗಬೇಕೆನ್ನುವುದು ಅವರ ಭಾವನೆಯಾಗಿತ್ತು. ಈ ರೀತಿಯ ಆದಾಯಕ್ಕೆ, ಮುಖ್ಯವಾಗಿ ಗ್ರಾಮೀಣ ಪ್ರದೇಶದಲ್ಲಿ "ಚರಕ" ಆಧಾರವೆಂಬುದು ಅವರ ನಂಬಿಕೆಯಾಗಿತ್ತು.

ಆದಾಯ ವಿತರಣೆಯಲ್ಲಿ ಸಹ ಗಾಂಧೀಜಿಯವರ ವಾದ ಸಾಮಾನ್ಯ ಅರ್ಥ ವಿಜ್ಞಾನ ತತ್ವಕ್ಕಿಂತ ಭಿನ್ನವಾಗಿತ್ತು. ಅವರ ಕಲ್ಪನೆಯಲ್ಲಿ, ಎಲ್ಲ ಉದ್ಯೋಗವೂ ಒಂದೇ ಆದಾಯವನ್ನು ತರುವಂತಿರಬೇಕು. ಉದ್ಯೋಗಕ್ಕೆ ಪ್ರತಿಫಲ "ಅಗತ್ಯ"ದ ಆಧಾರದ ಮೇಲೇ ಹೊರತು, ಉತ್ಪಾದನೆಯ ಆಧಾರದ ಮೇಲಲ್ಲ. ಒಬ್ಬ ಕಮ್ಮಾರನಿಗೆ ಎಷ್ಟು ಆದಾಯವೋ, ಒಬ್ಬ ನಿಮಣ ವೈದ್ಯನಿಗೂ ಸಹ ಅಷ್ಟೇ ಆದಾಯ. ತಮ್ಮ ತಮ್ಮ ಕುಟುಂಬದ "ಅಗತ್ಯತೆ" ಗೆ ತಕ್ಕ ಆದಾಯವನ್ನು ಅವರು ಪಡೆಯಬೇಕು. ಪ್ರತಿಯೊಬ್ಬನೂ ನೈತಿಕತೆಯ ಆಧಾರದ ಮೇಲೆ ಇಡೀ ಸಮಾಜದ ಒಳಿತಿಗಾಗಿ ದುಡಿಯಬೇಕು.

**ಖಾಸಗಿ ಆಸ್ತಿ :** ಮಾನವನ ಪ್ರಗತಿಗೆ, ಖಾಸಗಿ ಆಸ್ತಿ ಹಕ್ಕು ಅಗತ್ಯವಿಲ್ಲ ಎನ್ನುವುದು ಗಾಂಧೀಜಿಯವರ ಭಾವನೆ. ಇದಕ್ಕಾಗಿ ಎಲ್ಲ ಖಾಸಗಿ ಆಸ್ತಿ ಹಕ್ಕನ್ನು ಮನ್ನಾ ಮಾಡಬೇಕೆಂಬುದು ಅವರ ಅಭಿಪ್ರಾಯ. ಆದರೆ ಇದು ಒಂದು ಆದರ್ಶವೇ ಹೊರತು ವಾಸ್ತವವಲ್ಲ ಎನ್ನುವುದು ಅವರಿಗೆ ತಿಳಿದಿತ್ತು. ಆದ್ದರಿಂದ, ಅವರು ಎಲ್ಲ ಖಾಸಗೀ ಆಸ್ತಿಯನ್ನೂ ಟ್ರಸ್ಟಿನ ಸುಪರ್ಧಿನಲ್ಲಿಡಬೇಕೆಂದು ಸೂಚಿಸಿದರು. ಆದರೆ ಟ್ರಸ್ಟಿಗಳು ಅತ್ಯಂತ ಹೆಚ್ಚಿನ ಆದಾಯವನ್ನು ಪಡೆಯುವಂತಿರಬಾರದು. ಹೆಚ್ಚೆಂದರೆ, ಅವನ ಆದಾಯ ಸಮಾಜದ ಕನಿಷ್ಠ ವ್ಯಕ್ತಿಯ ಆದಾಯಕ್ಕಿಂತ ಹತ್ತು ಪಟ್ಟು ಹೆಚ್ಚಿರಬಹುದು ಅಷ್ಟೆ ಯಾವ ಟ್ರಸ್ಟಿಯೇ ಆಗಲಿ ಟ್ರಸ್ಟನ್ನು ತನ್ನ ಮಕ್ಕಳಿಗೆ ಬಿಟ್ಟು ಹೋಗುವಂತಿರಬಾರದು. ಬದಲಿಗೆ ಮೊದಲನೆಯ ಟ್ರಸ್ಟಿ (ಮೊಟ್ಟ ಮೊದಲು ಯಾರು ಟ್ರಸ್ಟನ್ನು ಸ್ಥಾಪಿಸಿದರೋ ಅವರು) ಮತ್ತು ಸರ್ಕಾರ ಟ್ರಸ್ಟಿನ ಉತ್ತರಾಧಿಕಾರಿಗಳನ್ನು ನಿರ್ಣಯಿಸಬೇಕು. ಗಾಂಧೀಜಿಯವರ ಮಾತುಗಳಲ್ಲಿ "ಒಬ್ಬ ಟ್ರಸ್ಟಿಗೆ, ಸಾರ್ವಜನಿಕರಲ್ಲದೆ ಬೇರೆ ಉತ್ತರಾಧಿಕಾರಿ ಇಲ್ಲ." ಟ್ರಸ್ಟಿನ ಹಣ ಮಾತ್ರ ರಾಷ್ಟ್ರದ ಎಲ್ಲ ಜನರ ಹಿತಕ್ಕಾಗಿ ಬಳಕೆಯಾಗುತ್ತಾ ಹೋಗಬೇಕು.

**ಹಣದ ಸ್ಥಾನ:** ಗಾಂಧೀಜಿಯವರ ಅರ್ಥವ್ಯವಸ್ಥೆಯಲ್ಲಿ ಹಣಕ್ಕೆ ತುಂಬಾ ಗೌಣವಾದ ಸ್ಥಾನ. ಅವರ ದೃಷ್ಟಿಯಲ್ಲಿ ಶ್ರಮವೇ ಹಣ. ಶ್ರಮದಿಂದ ಉತ್ಪಾದಿತವಾಗುವ ವಸ್ತುವಿಗೆ ಪ್ರಮುಖ ಸ್ಥಾನ. ತನ್ನ ಅಗತ್ಯಕ್ಕಿಂತ ಹೆಚ್ಚು ಉತ್ಪಾದಿತವಾಗುವುದರಿಂದ ತನಗೆ ಅಗತ್ಯವಾದ ಇತರ ಸರಕುಗಳನ್ನು ಜನರು ವಿನಿಮಯಿಸಿಕೊಳ್ಳಬಹುದು. ಇದು ಸಾಟಿ ಪದ್ಧತಿಯೆಂದು ಕಾಣಿಸಬಹುದು. ಆದರೆ ಗಾಂಧೀಜಿಯವರ ಪ್ರಕಾರ "ಇಡೀ ಅಂತರರಾಷ್ಟ್ರೀಯ ವ್ಯಾಪಾರವೇ ಸಾಟಿ ಪದ್ಧತಿಯಲ್ಲದೆ ಮತ್ತೇನು?" ಹಣ ಗೌಣವಾದಾಗ ಸರಕು ಸರಕಿಗೆ ವಿನಿಯೋಗವಾದಾಗ, ವಿನಿಮಯದ ದೊಡ್ಡ ಜಾಲದ ವ್ಯವಹಾರ ಕಡಿಮೆಯಾಗುತ್ತದೆ. ಹಣದ ಅರ್ಥವ್ಯವಸ್ಥೆ ಉತ್ಪಾದಕ ಮತ್ತು ಅನುಭೋಗಿಯ ನಡುವೆ ದೊಡ್ಡ ಅಂತರ ಉಂಟಾಗುವಂತೆ ಮಾಡಿದೆ.

**ಪರಾಮರ್ಶೆ:** ಈ ಹಿಂದೆಯೇ ತಿಳಿಸಿರುವಂತೆ ಮಹಾತ್ಮ ಗಾಂಧೀಜಿಯವರದು ವ್ಯವಸ್ಥಿತವಾದ ಆರ್ಥಿಕ ಚಿಂತನೆಯಲ್ಲ. ಇವರು ಅರ್ಥ ವಿಜ್ಞಾನದ ಯಾವ ಪಂಥಕ್ಕೂ ಸೇರಿದವರಲ್ಲ. ಆದರೆ ಇವರದೇ ಒಂದು ಪಂಥವೆಂದರೂ ತಪ್ಪಾಗುವುದಿಲ್ಲ. ಭಾರತದ ಅರ್ಥ ವ್ಯವಸ್ಥೆಯ ಬಗ್ಗೆ ಅವರಿಗಿದ್ದಷ್ಟು ಕಾಳಜಿ ಬಹಳ ಸ್ವಲ್ಪ



ಜನಕ್ಕಿತ್ತೆಂದು ಹೇಳಿದರೆ ಅತಿಶಯೋಕ್ತಿಯಾಗುವುದಿಲ್ಲ. ಭಾರತದ ಎಲ್ಲ ಜನರೂ ಸುಖ-ಸಂತೋಷದಿಂದಿರ ಬೇಕೆಂಬುದು ಅವರ ಭಾವನೆಯಾಗಿತ್ತು. ಬಡತನದ ನಿರ್ಮೂಲನೆ ಅವರ ಪರಮ ಧ್ಯೇಯವಾಗಿತ್ತು. ಗಾಂಧೀಜಿಯವರಿಗೆ ಖಾದಿ ಮತ್ತು ಗೃಹ ಉದ್ಯಮ ಭಾರತದ ಆರ್ಥಿಕ ಸ್ವಾತಂತ್ರ್ಯದ ಮತ್ತು ಸಮಾನತೆಯ ಕುರುಹುಗಳಾಗಿದ್ದವು. ಭಾರತದಂತಹ ವಿಶಾಲ ದೇಶಕ್ಕೆ, ಜನಸಂಖ್ಯೆಯ ಬಾಹುಳ್ಯವುಳ್ಳ ರಾಷ್ಟ್ರಕ್ಕೆ ಗ್ರಾಮೀಣ ಸ್ವಯಂ ತೃಪ್ತತೆಯಿಲ್ಲದೆ ಮುಕ್ತಿಯಿಲ್ಲ ಎನ್ನುವುದು ಗಾಂಧೀಜಿಯವರ ಖಚಿತ ನಂಬಿಕೆಯಾಗಿತ್ತು. ವಿಕೇಂದ್ರೀಕೃತ ಉತ್ಪಾದನ ವ್ಯವಸ್ಥೆ, ತಮ್ಮ ಬಯಕೆಗಳನ್ನೇ ಮಿತಗೊಳಿಸಿಕೊಂಡಿರುವ ಜನಸ್ತೋಮ, ಸಂಪೂರ್ಣವಾಗಿ ನೈತಿಕ ಹಾಗೂ ಆಧ್ಯಾತ್ಮದ ಮೇಲೆ ಆಧಾರವಾಗಿರುವ ಗ್ರಾಮೀಣ ಜೀವನ ಗಾಂಧೀಜಿಯವರ ಕನಸಾಗಿತ್ತು. ಎಲ್ಲ ಜನರೂ ಸಹಕಾರದಿಂದ, ಸ್ವಯಂತೃಪ್ತತೆಯಿಂದ ಸರಳ ಜೀವನ ನಡೆಸುವುದು ರಾಷ್ಟ್ರದ ಎಲ್ಲ ಜನರ ಹಿತವನ್ನು ಅಭಿವೃದ್ಧಿಪಡಿಸಬಲ್ಲದು ಎಂಬುದು ಅವರ ಭಾವನೆಯಾಗಿತ್ತು. ಹೆಚ್ಚು-ಹೆಚ್ಚು ಉತ್ಪಾದನೆ, ವೈಯಕ್ತಿಕ ಆಸ್ತಿ ಸಂಗ್ರಹಣೆ, ಸ್ವಾರ್ಥಕ್ಕಾಗಿ ದುಡಿತ ಗಾಂಧೀಜಿಯವರ ಶತ್ರುಗಳು. ಈ ದೃಷ್ಟಿಯಿಂದಲೇ ಶ್ರಮದ ಉತ್ಪಾದನೆಯನ್ನು ವೃದ್ಧಿಸಿಕೊಳ್ಳುವುದರ ಅಗತ್ಯವಿಲ್ಲ. ಯಂತ್ರಗಳು ಮನುಷ್ಯರಿಗಿಂತ ಹೆಚ್ಚು-ಹೆಚ್ಚನ್ನು ಉತ್ಪಾದಿಸಬಹುದು. ಆದರೆ, ಮನುಷ್ಯನನ್ನು ಅನಗತ್ಯ ಮಾಡುವ ಯಾಂತ್ರಿಕ ಉತ್ಪಾದನೆಯಿಂದ ಏನು ಲಾಭ?

ಗಾಂಧೀಜಿಯವರ ಚಿಂತನೆ ಎಷ್ಟು ವಾಸ್ತವಿಕವಾದದ್ದು ಎನ್ನುವ ಪ್ರಶ್ನೆ ಏಳುವುದು ಸಹಜವೇ. ಈ ಪ್ರಶ್ನೆಗೆ ಉತ್ತರಿಸುವುದು ಬಹಳ ಕಷ್ಟ. ಅನೇಕ ವರ್ಷಗಳ ಅನುಭವದ ನಂತರವೂ ಗಾಂಧೀಜಿಯವರ ಚಿಂತನೆ ತುಂಬಾ ವಾಸ್ತವವಾದದ್ದು ಮತ್ತು ಶ್ರೇಷ್ಠವಾದದ್ದು ಎನ್ನುವ ಗುಂಪೂ ಇದೆ. ಅವರ ಚಿಂತನೆ ತುಂಬಾ ಆದರ್ಶ ವಾದದ್ದು, ವಾಸ್ತವಿಕತೆಗೆ ಸ್ವಲ್ಪವೂ ಸಂಬಂಧವಿಲ್ಲದ್ದು ಎನ್ನುವುದರ ಗುಂಪೂ ಇದೆ.

ಗಾಂಧೀಜಿಯವರ ಅನೇಕ ಭಾವನೆಗಳು ಆದರ್ಶಯುತವಾದವು. ಬಯಕೆಗಳನ್ನು ನಾವು ಮಿತಗೊಳಿಸಿಕೊಳ್ಳಬೇಕು ಎನ್ನುವುದು ಅಷ್ಟು ವಾಸ್ತವವಾದ ವಾದವಲ್ಲ. ಎಲ್ಲ ಆರ್ಥಿಕ ಚಟುವಟಿಕೆಗಳು ನೈತಿಕತೆ, ಆಧ್ಯಾತ್ಮಿಕತೆಯ ಆಧಾರದ ಮೇಲೆ ನಡೆಯಬೇಕು ಎನ್ನುವುದ ಸಹ ತುಂಬಾ ಒಪ್ಪಿಗೆಗೆ ಅರ್ಹವಾಗಿಲ್ಲ. ಅವರ ಆದರ್ಶ ಗ್ರಾಮ, ಸರ್ವೋದಯ ಪರಿಭಾವನೆಗಳು ವಾಸ್ತವಿಕತೆಯಿಂದ ತುಂಬಾ ದೂರವಾಗಿರುವಂಥವು.

ಗಾಂಧೀಜಿಯವರ ಅರ್ಥವ್ಯವಸ್ಥೆಯಲ್ಲಿ, ಬಂಡವಾಳದ ಸಂಚಯಕ್ಕೆ ಆಸ್ಪದವಿಲ್ಲ. ಇಡೀ ವ್ಯವಸ್ಥೆ ಕಡಿಮೆ ಶ್ರಮ ಉತ್ಪಾದಕತೆಗೆ ಸಂಬಂಧಿಸಿದುದು. ಭೌತಿಕ ಸರಕಿನ ಸಂಚಯಕ್ಕೆ ವ್ಯಕ್ತಿಗಳು ಆಸೆಯನ್ನಿಟ್ಟು ಕೊಳ್ಳಬಾರದು ಎನ್ನುವುದು ಸಾಧಿತವಾಗವುದು ಕಷ್ಟ. ಭಾರತದಂತಹ ಅರ್ಥವ್ಯವಸ್ಥೆಯಲ್ಲಿ ಕಡಿಮೆ ಉತ್ಪಾದಕತೆ ಮತ್ತು ಕಡಿಮೆ ಬಂಡವಾಳ ಸಂಚಯದ ಮೂಲಕ ಗ್ರಾಮೀಣ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುವುದು ಹೇಗೆ ಎನ್ನುವುದು ಯಕ್ಷಪ್ರಶ್ನೆಯಾಗಿ ಉಳಿಯುತ್ತದೆ. ಹೆಚ್ಚು-ಹೆಚ್ಚನ್ನು ಉತ್ಪಾದಿಸದೆ ಬಂಡವಾಳದ ಸಂಚಯ ಅಸಾಧ್ಯ. ನಮ್ಮ ದೇಶದಲ್ಲಿ ಬಲವಾದ ಕೃಷಿ ಕ್ಷೇತ್ರವನ್ನು ಸೃಷ್ಟಿಸದೆ ಮತ್ತು ಅದಕ್ಕೆ ಪೂರಕವಾದ ಕೈಗಾರಿಕಾ ಕ್ಷೇತ್ರವನ್ನು ಅಭಿವೃದ್ಧಿಪಡಿಸದೆ, ಗ್ರಾಮೀಣ ಪುನರುಜ್ಜೀವನ ಅಸಾಧ್ಯವೆಂದು ಹೆಚ್ಚಿನ ಅರ್ಥವಿಜ್ಞಾನಿಗಳ ಅಭಿಮತ.

ಆಧುನಿಕ ಅರ್ಥವ್ಯವಸ್ಥೆಯಲ್ಲಿ ಪ್ರತಿಯೊಂದು ರಾಷ್ಟ್ರವೂ ಆರ್ಥಿಕವಾಗಿ ತುಂಬಾ ಬಲಿಷ್ಠವಾಗಿರಬೇಕು. ಇದು ತುಂಬಾ ಶಕ್ತಿಯುತವಾದ ಕೈಗಾರಿಕಾ ಕ್ಷೇತ್ರದ ಅಭಿವೃದ್ಧಿಯಿಂದ ಮಾತ್ರ ಸಾಧ್ಯ. ಹೆಚ್ಚು-ಹೆಚ್ಚನ್ನು ಉತ್ಪಾದಿಸಿ, ವಿದೇಶಗಳಿಗೆ ರಫ್ತು ಮಾಡಿ ಬಲವಾದ ರಾಷ್ಟ್ರೀಯ ಅರ್ಥವ್ಯವಸ್ಥೆಯನ್ನು ರೂಪಿಸಬೇಕೆಂಬುದು ಆಧುನಿಕ ಅರ್ಥಶಾಸ್ತ್ರಜ್ಞರ ಚಿಂತನೆ. ಈ ದೃಷ್ಟಿಯಿಂದ ನೋಡಿದಾಗ ಗಾಂಧೀಜಿಯವರ ಗ್ರಾಮೀಣ ಅರ್ಥವ್ಯವಸ್ಥೆ, ಕೈಗಾರಿಕೆಗಳ ವಿಕೇಂದ್ರೀಕರಣ ತುಂಬಾ ಟೊಳ್ಳಾದ ಆರ್ಥಿಕ ಸ್ವರೂಪಗಳೆಂದು ಗೋಚರವಾಗುತ್ತವೆ.

ಆದರೆ ಗಾಂಧೀಜಿಯವರ ಆಲೋಚನೆಗಳನ್ನು ಗೌರವಿಸುವ ಚಿಂತಕರಿಗೇನೂ ಕಡಿಮೆಯಿಲ್ಲ. ನೋಬೆಲ್ ಪ್ರಶಸ್ತಿ ವಿಜೇತ ಅರ್ಥವಿಜ್ಞಾನಿ ಮಿರ್‌ಡಾಲ್‌ನ ಈ ಮಾತುಗಳನ್ನು ಗಮನಿಸಿ:



'ಪಾಶ್ಚಾತ್ಯ ರಾಷ್ಟ್ರಗಳ ಆರ್ಥಿಕ ಸಿದ್ಧಾಂತಗಳ ಹೆಚ್ಚಿನ ಭಾಗ ಅಭಿವೃದ್ಧಿಶೀಲ ರಾಷ್ಟ್ರಗಳ ಆಸಕ್ತಿಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಈ ರಾಷ್ಟ್ರಗಳು ಪಾಶ್ಚಾತ್ಯ ಆರ್ಥಿಕ ಚಿಂತಕರ ಅರ್ಥಹೀನ ತತ್ವಗಳನ್ನು ಬಿಸಾಡಬೇಕು. ಬದಲಿಗೆ ತಮ್ಮ ರಾಷ್ಟ್ರದ ಅಗತ್ಯತೆಗೆ ತಕ್ಕ ಅರ್ಥಪೂರ್ಣವಾದ ಹೊಸ ತತ್ವಗಳನ್ನು ರೂಪಿಸಿಕೊಳ್ಳಬೇಕು. ಸಹಜವಾಗಿಯೇ ಇದು ಪಾಶ್ಚಾತ್ಯ ಅರ್ಥವಿಜ್ಞಾನದ ಹಳೆಯ ತತ್ವಗಳನ್ನು ಬದಿಗೊತ್ತುತ್ತವೆ."

ಜಿ.ಡಿ.ಎಚ್. ಕೋಲೆಯವರ ಪ್ರಕಾರ "ಭಾರತವನ್ನು ತೀವ್ರವಾದ ಬಂಡವಾಳ ಹೂಡಿಕೆಯ ಮೂಲಕ ಕೈಗಾರಿಕಾ ಪ್ರಧಾನ ರಾಷ್ಟ್ರಗಳ ಮಟ್ಟಕ್ಕೆ ಏರಿಸಬಹುದೆಂಬ ಭಾವನೆ ನೈಜವಾದುದಲ್ಲ. ಇಂಥ ಪ್ರಗತಿಯನ್ನು ಅದು, ಶೀಘ್ರವಾಗಿ ಬೆಳೆಯುತ್ತಿರುವ ಜನಸಂಖ್ಯೆ ಅನುಭೋಗದ ಬಗ್ಗೆ ಸಮತೆಯನ್ನು ಸಾಧಿಸುವುದರ ಮೂಲಕ ಮಾಡಬಹುದು. ನಾನು ಭಾರತದ ಅಭಿವೃದ್ಧಿಗೆ ಬಂಡವಾಳ ಬೇಕಿಲ್ಲವೆಂದು ಹೇಳುತ್ತಿಲ್ಲ. ಆದರೆ ಸದ್ಯದಲ್ಲಿ ಮತ್ತು ಇನ್ನೂ ಸ್ವಲ್ಪ ಕಾಲದವರೆಗೆ, ಇಂತಹ ಬಂಡವಾಳ ಭಾರತದ ಮೇಲೆ ಯಾವ ಪ್ರಭಾವವನ್ನೂ ಬೀರಲಾರದು. ಬಂಡವಾಳವನ್ನು, ಗ್ರಾಮೀಣ ಕೈಗಾರಿಕಾಭಿವೃದ್ಧಿಯೊಡನೆ ಸಂಯೋಜಿಸಿ ಲಭ್ಯವಿರುವ ಅಪಾರ ಸಂಪನ್ಮೂಲಗಳನ್ನು, ಶ್ರಮ ಶಕ್ತಿಯನ್ನು ಬಳಸಿ ಅಭಿವೃದ್ಧಿಪಡಿಸಬೇಕು. ಯಂತ್ರ ಪ್ರಾಧಾನ್ಯತೆಗಿಂತಲೂ ಶ್ರಮಪ್ರಧಾನವಾದ ಕೈಗಾರಿಕೆಗಳು ಭಾರತದ ಅಭಿವೃದ್ಧಿಯ ಮೂಲ."

ರಿಚರ್ಡ್ ಬಿ. ಗ್ರೇಗ್‌ರವರ ಮಾತುಗಳಲ್ಲಿ ಹೇಳುವುದಾದರೆ "ಭಾರತ ಹಾಗೂ ವಿಶ್ವ ಹೇಗೆ ಮುಂದಿನ ಹೆಜ್ಜೆಗಳನ್ನಿಡಬೇಕು ಎಂಬುದನ್ನು ತೋರಿಸಿದ ಜಾಣ ವ್ಯಕ್ತಿ ಗಾಂಧೀಜಿ. ಆತ ಆರ್ಥಿಕ, ನೈತಿಕ ಹಾಗೂ ರಾಜಕೀಯ ವಿಚಾರಗಳಲ್ಲಿ, ಬುದ್ಧಿವಂತನಾಗಿದ್ದ. ಆತ ದೊಡ್ಡ ಅರ್ಥವಿಜ್ಞಾನಿ, ವ್ಯಾಪಾರಿ ಮತ್ತು ರಾಜಕೀಯಪಟು ನೀವು ನಿಜವಾಗಲೂ ಆತನ ಬುದ್ಧಿಶಕ್ತಿಯನ್ನು ಮತ್ತು ಕಾರ್ಯ ವಿಧಾನಗಳನ್ನು ಅರಿತುಕೊಂಡಿದ್ದೀರಾ ? ನೀವು ಆತನ ಜೀವನವನ್ನು ಓದಲು ಮತ್ತು ಅದರ ಬಗ್ಗೆ ವಿಚಾರ ಮಾಡಲು ಸಮಯವನ್ನು ವಿನಿಯೋಗಿಸಿದ್ದೀರಾ? ಆತ ಹೆಚ್ಚಾಗಿ ಭಾರತಕ್ಕೆ ಸೇರುತ್ತಾನೆ. ಆದರೆ, ವಾಸ್ತವವಾಗಿ ಭಾರತದ ಹೊರಗೆ ಆತನನ್ನು ಹೆಚ್ಚು ಅರ್ಥಮಾಡಿಕೊಳ್ಳುವ, ಆತನ ಜಾಣ್ಮೆಯನ್ನು ಹೊಗಳುವ ಬೆಳವಣಿಗೆಗಳು ನಡೆಯುತ್ತಿವೆ. ಅದರಲ್ಲೂ ಮುಖ್ಯವಾಗಿ ಅಮೇರಿಕ ಸಂಯುಕ್ತ ಸಂಸ್ಥಾನದಲ್ಲಿ, ಆತನ ವಿಚಾರಗಳಿಗೆ ವಿರೋಧವಾಗಿ ನಡೆದಿರುವ ಅಮೆರಿಕಾದಲ್ಲಿ ! ಬಹುಶಃ ಇದಕ್ಕೆ ಕಾರಣ, ಆ ರಾಷ್ಟ್ರದಲ್ಲಿ ಅವ್ಯಾಹತವಾಗಿ ನಡೆದಿರುವ ಔದ್ಯೋಗೀಕರಣ, ಆ ರಾಷ್ಟ್ರದ ಕುರುಡಾಗಿ ಮರಳಗಾಡಿನೆಡೆಗೆ ನಡೆಯುವಂತೆ ಮಾಡಿ ಎನ್ನುವುದರಿಂದ."

ಅನೇಕ ಆಧುನಿಕ ಅರ್ಥಶಾಸ್ತ್ರಜ್ಞರೂ ಸಹ ಗಾಂಧೀಜಿಯವರ ವಿಚಾರಗಳ ಹತ್ತಿರ-ಹತ್ತಿರಕ್ಕೆ ಬರುತ್ತಾರೆ. 1973ರಲ್ಲಿ ಷುಮಾಷರ್ ಪ್ರಕಟಿಸಿದ. "ಸಣ್ಣದೇ ಸುಂದರವಾದದ್ದು (Small is Beautiful) ಗ್ರಂಥ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಮಧ್ಯಮ ಪ್ರಮಾಣದ ಶ್ರಮ ಪ್ರಧಾನವಾದ ಕೈಗಾರಿಕೆ ಎಷ್ಟು ಅನುಕೂಲಕರವಾದದ್ದು ಎನ್ನುವುದನ್ನು ಜಗತ್ತಿಗೇ ಸಾರಿದೆ. 70ರ ದಶಕದಲ್ಲಿ ತುಂಬಾ ಜನರ ಗಮನವನ್ನು ಸೆಳೆದಿರುವ ಗ್ರಂಥ ಇದು. ಇದರಲ್ಲಿ ಗಾಂಧೀಜಿಯವರಷ್ಟು ಆದರ್ಶ ಪ್ರಾಯವಾದ ವಾದಗಳಿಲ್ಲದಿದ್ದರೂ, ಕೈಗಾರಿಕೆಗಳಿಗೆ ಸಂಬಂಧಿಸಿದಂತೆ ಅವರ ಚಿಂತನೆಗೆ ಸಾಮ್ಯವಾದ ವಿಚಾರಗಳಿವೆ. ಮತ್ತೆ ಗಾಂಧೀಜಿಯವರು ಯಾವಾಗಲೂ ಹೇಳುತ್ತಿದ್ದ ಜನರು ಪ್ರಧಾನವೇ ಹೊರತು. ವಸ್ತುಗಳಲ್ಲ ಎಂಬ ವಾದವನ್ನು ಸಹ ಷುಮಾಷರ್ ಎತ್ತಿ ಹಿಡಿಯುತ್ತಾರೆ. ಹಾಗೆ ನೋಡಿದರೆ, ಗಾಂಧೀಜಿಯವರು ಬಿಡಿ ಬಿಡಿಯಾಗಿ ಅಲ್ಲಲ್ಲಿ ವ್ಯಕ್ತಪಡಿಸಿರುವ ಆರ್ಥಿಕ ವಿಚಾರಗಳನ್ನು ಷುಮಾಷರ್ ಗ್ರಂಥ ಒಂದೆಡೆಗೆ ವ್ಯವಸ್ಥಿತವಾಗಿ ತಂದಿದೆ ಎಂದು ಹೇಳಬಹುದು.

1979ರಲ್ಲಿ ಮಾರ್ಕ್ ಎ.ಲುಟ್ಜ್ ಮತ್ತು ಕೆನೆತ್‌ಲಕ್ಸ್ ಪ್ರಕಟಿಸಿರುವ "ದಿ ಚಾಲೆಂಜ್ ಆಫ್ ಹ್ಯೂಮನಿಷ್ಟಿಕ್ ಎಕನಾಮಿಕ್ಸ್" ಗಾಂಧೀಜಿಯವರು ಯಾವಾಗಲೂ ಹೇಳುತ್ತಿದ್ದ, ಮಾನವ ಪ್ರಧಾನ ಆರ್ಥಿಕ ಅಭಿವೃದ್ಧಿಯನ್ನು ಎತ್ತಿ ಹಿಡಿಯುತ್ತದೆ. ಒಂದು ಅರ್ಥವ್ಯವಸ್ಥೆಯಲ್ಲಿ ಉತ್ಪಾದನೆಗಿಂತಲೂ ಜನರು ಮುಖ್ಯರಾದವರು ಎನ್ನುವ ಅಂಶವನ್ನು ಈ ಗ್ರಂಥ ಎತ್ತಿ ಹಿಡಿಯುತ್ತದೆ.

ವಾಸ್ತವವಾಗಿ ಪ್ರಪಂಚದ ಅನೇಕ ರಾಷ್ಟ್ರಗಳ ಬಡತನ ಇಂದು ಅಭಿವೃದ್ಧಿ ಅರ್ಥಶಾಸ್ತ್ರಜ್ಞರನ್ನು ಮರು



ವಿಚಾರ ಮಾಡುವಂತೆ ಮಾಡಿದೆ. ಉತ್ಪಾದನೆಯೇ ಮುಖ್ಯವಾದದ್ದು, ಯಾವ ಮಾರ್ಗದಿಂದಲೂ ಸರಿ, ರಾಷ್ಟ್ರದ ನೈಜ ಆದಾಯವನ್ನು ವೃದ್ಧಿಪಡಿಸಿಕೊಳ್ಳುತ್ತಾ ಹೋಗಬೇಕು ಎನ್ನುವ ವಿಚಾರ ಈಗ ಸಡಿಲಗೊಂಡಿದೆ. ಮನುಷ್ಯ ಮುಖ್ಯ, ರಾಷ್ಟ್ರದ ಎಲ್ಲ ಜನರ ಅಗತ್ಯಗಳೂ ಸ್ವಲ್ಪವಲ್ಲ. ಸ್ವಲ್ಪ ಪೂರೈಕೆಯಾಗಬೇಕು ಎನ್ನುವ ವಿಚಾರ ಈಗ ಮುಖ್ಯವಾಗಿ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಮೂಡುತ್ತಿದೆ. ಅಂದರೆ ನಾವು ಗಾಂಧೀಜಿಯವರನ್ನು ಮತ್ತೆ ಸ್ಮರಿಸುವಂತಾಗಿದೆ. ಈಗ ರಾಜಕೀಯ ಸ್ವಾತಂತ್ರ್ಯಕ್ಕಾಗಿಯಲ್ಲ. ಆದರೆ ಆರ್ಥಿಕ ಸ್ವಾತಂತ್ರ್ಯ ಮತ್ತು ಸರ್ವೋದಯಕ್ಕಾಗಿ!

ಆಸ್ತಿ ಸಂಚಯವಾಗುತ್ತದೆಂಬ ಕಾರಣದಿಂದ ಖಾಸಗೀ ಆಸ್ತಿ ಹಕ್ಕನ್ನು ರದ್ದು ಮಾಡುವುದು ಊರ್ಜಿತವಲ್ಲ. ಆದರೆ ಇದೇ ಕಾರಣಕ್ಕಾಗಿ, ಸ್ವಂತದ ದುರಾಸೆಯಿಂದ ಆಸ್ತಿಯನ್ನು ಗಳಿಸುತ್ತಾ ಹೋಗಬಾರದು. ಗಾಂಧೀಜಿಯವರ ಪ್ರಕಾರ ಖಾಸಗಿ ಆಸ್ತಿ "ಸಾರ್ವಜನಿಕ ದತ್ತಿ" ಆದ್ದರಿಂದ ಆಸ್ತಿ ಇರುವವರು, ಅದನ್ನು ಸಾರ್ವಜನಿಕರ ಒಳಿತಿಗಾಗಿ ಬಳಸಬೇಕು. ಬೇರೆಯವರನ್ನು ಶೋಷಿಸಿ, ಆಸ್ತಿಯನ್ನು ಗಳಿಸಬಾರದು. ಅಥವಾ ಹೀಗೆ ಗಳಿಸಿದ ಆಸ್ತಿಯನ್ನು ಏನೋ ದಾನಿಯಂತೆ, ಇತರರಿಗೆ ದಾನ ಮಾಡಬಾರದು. ಆದರೆ ತಮ್ಮ ಆಸ್ತಿಯನ್ನು ಶೋಷಣೆಯುಂಟಾಗದಂತೆ ಬಳಸಬೇಕು. ಸಮಾಜದ ಹಿತಕ್ಕಾಗಿ ಅದರ ವಿನಿಯೋಗವಾಗಬೇಕು. ಬೃಹತ್ಪ್ರಮಾಣದ ಉತ್ಪಾದನೆಯಿಂದಾಗಿಯೇ, ಆಸ್ತಿ ಸಂಚಯವಾಗುವ ಸಾಧ್ಯತೆಗಳಿರುವುದರಿಂದ, ಉತ್ಪಾದನೆ, ಗ್ರಾಮೀಣ ಪ್ರದೇಶಗಳಲ್ಲೇ ಕೇಂದ್ರೀಕೃತವಾಗುವುದು ಉಚಿತ. ಇಂತಹ ಉತ್ಪಾದನೆಯಲ್ಲಿ ಮಾಲಿಕ– ಕಾರ್ಮಿಕ, ಅನುಭೋಗಿಗಳಿಗೆ, ತಲತಲಾಂತರಗಳವರೆಗೆ ನಿಕಟ ಸಂಬಂಧವಿರುವುದರಿಂದ, ಶೋಷಣೆ ನಡೆಯದೆ, ಆಸ್ತಿ ಸಂಚಯವಾಗದೆ, ಉತ್ತಮ ಜೀವನ ಸಾಧ್ಯ. ಆದರೆ ಅತ್ಯಂತ ಅಗತ್ಯವಿರುವ ದೊಡ್ಡ ಕೈಗಾರಿಕೆಗಳನ್ನು ಸರ್ಕಾರ ನಡೆಸುವುದಕ್ಕೆ ಗಾಂಧೀಜಿಯವರ ಅಭ್ಯಂತರವಿಲ್ಲ.

ಸರಕುಗಳ ಬೆಲೆಗಳ ನಿರ್ಧಾರದ ಬಗ್ಗೆ ಸಹ ಗಾಂಧೀಜಿಯವರಿಗೆ, ಸಾಮಾನ್ಯ ಅರ್ಥಶಾಸ್ತ್ರಜ್ಞರಿಗಿಂತ ತುಂಬಾ ಭಿನ್ನವಾದ ಭಾವನೆಯಿತ್ತು. ಗ್ರಾಮೀಣ ಅರ್ಥ ವ್ಯವಸ್ಥೆಯಲ್ಲಿ ಮಾರಾಟಗಾರರು ಮತ್ತು ಕೊಳ್ಳುವವರನ್ನು ಮುಖತಃ ಭೇಟಿ ಮಾಡುವಂತೆ ಮಾಡುವುದರಿಂದ ಬೆಲೆ ನಿರ್ಧಾರ ಅತ್ಯಂತ ಸರಳವಾಗಿ ಏರ್ಪಡುತ್ತದೆ ಎನ್ನುವುದು ಅವರ ಭಾವನೆಯಾಗಿತ್ತು. ಕೊಡಲಾದ ನಿರ್ದಿಷ್ಟ ದಿನಗಳಲ್ಲಿ ಇಂತಹ ಮುಖಭೇಟಿ ಏರ್ಪಡಬಹುದು ಮಾರಾಟ ಮಾಡುವವರು ತಾವು ಕೇಳುತ್ತಿರುವ ಬೆಲೆ ಯಾವ ಕಾರಣಕ್ಕಾಗಿ ಎನ್ನುವುದನ್ನು ವಿವರಿಸಬೇಕು. ಕೊಳ್ಳುವವರು ತಮ್ಮ ಅಗತ್ಯ, ತಮ್ಮ ಆದಾಯಮಟ್ಟ ಮತ್ತು ಕೊಡಲು ಇರುವ ಶಕ್ತಿಯನ್ನು ವಿವರಿಸಬೇಕು. ಉತ್ಪಾದಕರು ಮತ್ತು ಅನುಭೋಗಿಗಳಿಗೆ ನಿಕಟ ಸಂಬಂಧವಿರುವುದರಿಂದ ಮತ್ತು ಅನುಭೋಗಿಗಳೆಲ್ಲರು, ಉತ್ಪಾದಕರಾಗಿರುವುದರಿಂದ ಅವರಿಗೆ ಪರಸ್ಪರರ ಅರಿವು ಚೆನ್ನಾಗಿರುತ್ತದೆ. ಇದು ಯುಕ್ತ ಬೆಲೆ ನಿರ್ಧಾರವನ್ನು ಸರಳಗೊಳಿಸುತ್ತದೆ. ಈ ಕ್ರಮದಿಂದ ಸರಕುಗಳಿಗೆ "ಗ್ರಾಮೀಣ ಬೆಲೆ" ನಿರ್ಧಾರವಾಗುತ್ತದೆ ಸಹ.

**ಅನ್ನಕ್ಕಾಗಿ ಶ್ರಮದ ಪರಿಭಾವನೆ:** ಗಾಂಧೀಜಿ ಭಾರತೀಯ ಅರ್ಥವ್ಯವಸ್ಥೆಯಲ್ಲಿ ಶ್ರಮಕ್ಕೆ ಅತ್ಯಂತ ಹೆಚ್ಚಿನ ಪ್ರಾಧ್ಯಾನತೆಯನ್ನು ನೀಡಿದ್ದರು. ಪ್ರತಿಯೊಬ್ಬ ವ್ಯಕ್ತಿಯೂ ಶ್ರಮದ ಕೆಲಸವನ್ನು ಮಾಡಲೇಬೇಕು. ಅದು ಕೃಷಿಯಾಗಬಹುದು, ನೂಲುವುದಾಗಬಹುದು ಅಥವಾ ಇನ್ನಾವುದೇ ರೀತಿಯ ಶ್ರಮದ ಕೆಲಸವಾಗಬಹುದು. ಈ ರೀತಿ ಪ್ರತಿಯೊಬ್ಬನೂ ಶ್ರಮದ ಕೆಲಸವನ್ನು ಕೈಗೊಂಡರೆ, ಅರ್ಥ ವ್ಯವಸ್ಥೆಯಲ್ಲಿ ಸಮಾನತೆ ತನಗೇ ತಾನೇ ಏರ್ಪಡುತ್ತದೆ. ಶ್ರಮ ಗಾಂಧೀಜಿಯವರ ಪ್ರಕಾರ, ಎಲ್ಲ ವ್ಯಕ್ತಿಗಳಲ್ಲಿ ಒಗ್ಗಟ್ಟನ್ನು ಮೂಡಿಸುವ, ಎಲ್ಲ ಜನರ ಹಸಿವೆಯನ್ನು ಇಂಗಿಸುವ ಅತ್ಯಂತ ಪ್ರಬಲ ಸಾಧನ. ಎಲ್ಲ ವ್ಯಕ್ತಿಗಳೂ ಒಂದಲ್ಲ ಒಂದು ಶ್ರಮದ ಕಾರ್ಯವನ್ನು ಕೈಗೆತ್ತಿಕೊಂಡರೆ, ಹಿರಿಯ ಕಿರಿಯ ಎಂಬ ಭಾವನೆ ಸಂಪೂರ್ಣವಾಗಿ ನಶಿಸುತ್ತದೆ.

**ರಾಷ್ಟ್ರೀಯ ಯೋಜನೆ:** ಗಾಂಧೀಜಿಯವರು ನಾವು ಈಗ ಆಚರಿಸುತ್ತಿರುವ ಯೋಜನಾ ವಿಧಾನಕ್ಕೆ ಎಂದೂ ಒಪ್ಪಿಗೆ ನೀಡಿರಲಿಲ್ಲ. ಅವರ ಪ್ರಕಾರ, "ಯೋಜನೆಯ ಬಗ್ಗೆ ನನ್ನ ಭಾವನೆ, ಪ್ರಸ್ತುತದಲ್ಲಿ ಪ್ರಚಲಿತದಲ್ಲಿರುವ ಭಾವನೆಗಳಿಗಿಂತ ತುಂಬಾ ಭಿನ್ನವಾದುದಾಗಿದೆ,



ಯೋಜನೆ, ಔದ್ಯೋಗೀಕರಣದ ಹಾದಿಯುಲ್ಲಿ ಮುಂದುವರಿಯುವುದು ನನಗೆ ಇಷ್ಟವಿಲ್ಲ. ನಮ್ಮ ಗ್ರಾಮುಗಳು ಔದ್ಯೋಗೀಕರಣದ ಸೋಂಕನ್ನು ಹೊಂದುವುದರಿಂದ ತಡೆಗಟ್ಟುವುದು ನನ್ನ ಉದ್ದೇಶ."

"ಪಂಡಿತ ನೆಹರೂರವರು, ಕೈಗಾರಿಕೆಗಳನ್ನು ಸಾಮಾಜೀಕರಣ ಮಾಡುವುದರಿಂದ, ಕೈಗಾರಿಕೀಕರಣದ ಅನಿಷ್ಟಗಳನ್ನು ತೊಲಗಿಸಬಹುದೆಂದು ಭಾವಿಸಿದ್ದಾರೆ. ಆದರೆ ನನ್ನ ಅಭಿಪ್ರಾಯಗಳೇ ಬೇರೆ. ಕೈಗಾರಿಕೀಕರಣದ ಅಂತರ್ಯದಲ್ಲೇ ಅನಿಷ್ಟಗಳಿವೆ. ಆದ್ದರಿಂದ ಯಾವುದೇ ಪ್ರಮಾಣದ ಸಾಮಾಜೀಕರಣ ಈ ಅನಿಷ್ಟಗಳನ್ನು ತೊಲಗಿಸಲಾರವು."

ಕೈಗಾರಿಕೀಕರಣ ದೊಡ್ಡ ಪ್ರಮಾಣದ ಶೋಷಣೆಗೆ ಎಡೆಮಾಡಿ ಕೊಡುತ್ತದೆನ್ನುವುದು ಗಾಂಧೀಜಿಯವರ ಅಭಿಪ್ರಾಯವಾಗಿತ್ತು. ಅವರ ಪ್ರಕಾರ "ಬೃಹತ್ಪ್ರಮಾಣದ ಔದ್ಯೋಗಿಕರಣದ ಚುರುಕಾಗಿ ಅಥವಾ ಮಂದವಾಗಿ ಹಳ್ಳಿಗರನ್ನು ಶೋಷಿಸುತ್ತದೆ. ಏಕೆಂದರೆ ಔದ್ಯೋಗೀಕರಣ ಸ್ಪರ್ಧೆ ಮತ್ತು ಮಾರುಕಟ್ಟೆ ಸಮಸ್ಯೆಗಳನ್ನು ತನ್ನ ಜೊತೆಯಲ್ಲೇ ತರುತ್ತದೆ. ಆದ್ದರಿಂದ ಹಳ್ಳಿಗಳು ಸ್ವಯಂ ತೃಪ್ತ ಉತ್ಪಾದನೆ ವಿಧಾನವನ್ನು ಹೊಂದುವಂತೆ ಮಾಡಬೇಕು. ಗ್ರಾಮೀಣ ಉದ್ಯೋಗಗಳ ಸ್ವರೂಪವನ್ನು ಉಳಿಸಿಕೊಳ್ಳುವಂತಹ ಔದ್ಯೋಗೀಕರಣಕ್ಕೆ ಆಕ್ಷೇಪಣೆ ಏನೂ ಇಲ್ಲ. ಇವು ಆತ್ಯಾಧುನಿಕ ಯಂತ್ರಗಳನ್ನು ಬಳಸಿದರೂ ಅಡ್ಡಿಯಿಲ್ಲ. ಆದರೆ ಇವು ಎಂದೂ, ಶೋಷಣೆಯ ಸಾಧನವಾಗಬಾರದು."



# ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಸುವರ್ಣ ಮಹೋತ್ಸವ ಅಂಗವಾಗಿ ಎಲ್ಲಾ ಜಿಲ್ಲಾ ಹಾಗೂ ತಾಲ್ಲೂಕು ಕೇಂದ್ರಗಳಲ್ಲಿ 2010-11ನೇ ಸಾಲಿನಲ್ಲಿ ನಡೆಸಿದ ಕಾರ್ಯಕ್ರಮಗಳ ವರದಿ

ದಿನಾಂಕ 2-10-2010 ರಂದು ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಮಹಾತ್ಮಗಾಂಧೀಜಿಯವರ 141ನೇ ಜಯಂತಿಯನ್ನು ಹಾಗೂ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆ ಉದ್ಘಾಟನಾ ಸಮಾರಂಭವನ್ನು ಹಾಗೂ ನಿಧಿಯ ಅಧ್ಯಕ್ಷರಾಗಿ 25 ವರ್ಷಗಳು ಸತತ ಸೇವೆಸಲ್ಲಿಸಿದ ಡಾ: ಹೊ ಶ್ರೀನಿವಾಸಯ್ಯನವರ ಬೆಳ್ಳಿಹಬ್ಬವನ್ನು ಗಾಂಧೀ ಭವನದಲ್ಲಿ ಹಮ್ಮಿಕೊಳ್ಳಲಾಗಿತ್ತು ಈ ಕಾರ್ಯಕ್ರಮಕ್ಕೆ ಗಾಂಧೀ ಶಾಂತಿ ಪ್ರತಿಷ್ಠಾನ, ಕರ್ನಾಟಕ ಖಾದಿ ಗ್ರಾಮೋದ್ಯೋಗ ಸಂಯುಕ್ತ ಸಂಘ, ಕರ್ನಾಟಕ ಮದ್ಯಪಾನ ಸಂಯಮ ಮಂಡಳಿ ಹಾಗೂ ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ಹುಬ್ಬಳ್ಳಿ ಭಾರತ ಸೇವಾದಳ , ಜಮನಾಲಾಲ್ ಬಜಾಜ್ ಸೇವಾ ಟ್ರಸ್ಟ್ ನೆಹರು ಯುವಕ ಕೇಂದ್ರ, ಗಾಂಧೀಯಾನ ಪಬ್ಲಿಷಿಂಗ್ ಹೌಸ್ ಸಹಕಾರ ನೀಡಿದ್ದವು.

ಈ ಕಾರ್ಯಕ್ರಮದ ಅಂಗವಾಗಿ ಖಾದಿ ವಸ್ತ್ರ ಪ್ರದರ್ಶನ ಮತ್ತು ಮಾರಾಟ ಹಾಗೂ ಗಾಂಧೀ ಭಾವ ಚಿತ್ರ ಪ್ರದರ್ಶನ ಹಾಗೂ ಗಾಂಧೀ ಸಾಹಿತ್ಯ ಪ್ರದರ್ಶನವನ್ನು ಆಯೋಜಿಸಲಾಗಿತ್ತು. ಈ ಪ್ರದರ್ಶನವನ್ನು ಕರ್ನಾಟಕದ ಘನತೆವೆತ್ತ ರಾಜ್ಯಪಾಲರಾದ ಡಾ॥ ಹಂಸರಾಜ್ ಭರದ್ವಾಜ್ ಅವರು ಉದ್ಘಾಟಿಸಿದರು. ಬೆಳಿಗ್ಗೆ 9-30ಕ್ಕೆ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀಯತ ಯಡಿಯೂರಪ್ಪ ಅಗಮಿಸಿ, ನಿಧಿಯ ಅಧ್ಯಕ್ಷರನ್ನು ಸನ್ಮಾನಿಸಿದರು. ಈ ಸುವರ್ಣ ಮಹೋತ್ಸವವನ್ನು ರಾಜ್ಯದಾದ್ಯಂತ ನಡೆಸಲು ಹಾಗೂ ಸುವರ್ಣ ಮಹೋತ್ಸವ ನೆನಪಿನಲ್ಲಿ ಒಂದು ಭವನವನ್ನು ನಿರ್ಮಿಸಲು ಅನುದಾನ ಕೋರಿ ಮನವಿ ಅರ್ಪಿಸಲಾಯಿತು. ಈ ಮನವಿಗೆ ಸ್ಪಂದಿಸಿದ ಮುಖ್ಯಮುಂತ್ರಿಗಳು 3 ಕೋಟಿಗಳನ್ನು ಗಾಂಧೀ ಭವನದಲ್ಲಿ ಸುವರ್ಣ ಮಹೋತ್ಸವ ನೆನಪಿನ ಭವನ ನಿರ್ಮಾಣಕ್ಕೆ ಹಾಗೂ 1 ಕೋಟಿ ಅನುದಾನವನ್ನು ಸುವರ್ಣ ಮಹೋತ್ಸವ ಕಾರ್ಯಕ್ರಮಕ್ಕಾಗಿ ಘೋಷಿಸಿದರು. ಈ ಕಾರ್ಯಕ್ರಮದ ಅಂಗವಾಗಿ ಜಯಶ್ರೀ ದತ್ತಿ ಪುರಸ್ಕಾರವನ್ನು ಶ್ರೀಮತಿ ಲೀಲಾ ಅಪ್ಪಾಜಿ ಅವರಿಗೆ ಪ್ರದಾನಮಾಡಲಾಯಿತು. ಮತ್ತು ಗಾಂಧೀ ಶಾಂತಿ ಪ್ರತಿಷ್ಠಾನ ಏರ್ಪಡಿಸಿದ್ದ ಗಾಂಧೀ ಜೀವನ ಸಂದೇಶ ಪರೀಕ್ಷೆ ತೆಗೆದು ಕೊಂಡ ವಿದ್ಯಾರ್ಥಿಗಳಿಗೆ ಪ್ರಶಸ್ತಿ ಪತ್ರವನ್ನು ಘನತೆವೆತ್ತ ರಾಜ್ಯಪಾಲರು ವಿತರಿಸಿದರು. ಈ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಶ್ರೀಯುತ ಡಾ: ಜಿ ಎಸ್ ಪಾಟೀಲರು ಕುಲಪತಿಗಳು ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ಹುಬ್ಬಳ್ಳಿ, ಶ್ರೀಯುತ ಸಚ್ಚಿದಾನಂದ ಹೆಗಡೆ ಅವರು ಅಧ್ಯಕ್ಷರು, ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಹಾಗೂ ಶ್ರೀಯತ ನಾರಾಯಣಗೌಡ, ನೆಹರು ಯುವ ಕೇಂದ್ರ ಆಗಮಿಸಿದ್ದರು. ಈ ಎಲ್ಲಾ ಕಾರ್ಯಕ್ರಮದ ಅಧ್ಯಕ್ಷತೆಯನ್ನು ನಾಡೋಜ ಪಾಟೀಲ ಪುಟ್ಟಪ್ಪ ಅವರು ವಹಿಸಿದ್ದರು. ಈ ಎಲ್ಲಾ ಕಾರ್ಯಕ್ರಮವನ್ನು ನಿಧಿಯ ಕಾರ್ಯದರ್ಶಿ ಪ್ರೊ ಹೆಚ್ ಆರ್ ದಾಸೇಗೌಡ ಪ್ರಾಸ್ತಾವಿಕ ಮಾತುಗಳೊಂದಿಗೆ ಕಾರ್ಯಕ್ರಮ ನಿರೂಪಿಸಿದರು. ನಿಧಿಯ ಅಧ್ಯಕ್ಷರಾದ ಡಾ: ಹೊ ಶ್ರೀನಿವಾಸಯ್ಯನವರು ವಂದಿಸಿದರು. ಈ ಕಾರ್ಯಕ್ರಮದ ಅಂಗವಾಗಿ ಮೂರು ದಿನಗಳ ಗಾಂಧೀ ಸಾಹಿತ್ಯ ಪ್ರದರ್ಶನ ಮತ್ತು ಮಾರಾಟ ಮತ್ತು ಖಾದಿವಸ್ತ್ರಗಳ ಮಾರಾಟ ಮತ್ತು ಭಾರತ ಸರ್ಕಾರದ ಫಿಲಿಂ ಡಿವಿಶನ್ ಅವರಿಂದ ಗಾಂಧೀ ಸಾಕ್ಷ್ಯಚಿತ್ರ ಪ್ರದರ್ಶನ ಹಾಗೂ ಗಾಂಧೀಜಿಯವರ ಅಪರೂಪದ ಛಾಯಾಚಿತ್ರ ಪ್ರದರ್ಶನ ಮತ್ತು ಗಾಂಧೀಜಿಯವರ ಕಥಾಶ್ರವಣ ಕಾರ್ಯಕ್ರಮ ಆಯೋಜಿಸಲಾಗಿತ್ತು.

**ಸುವರ್ಣ ಮಹೋತ್ಸವ ಕಾರ್ಯಕ್ರಮಗಳು**

ದಿನಾಂಕ 23-10-2010 ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಸುವರ್ಣ ಮಹೋತ್ಸವ ವರ್ಷಾಚರಣೆ ಕಾರ್ಯಕ್ರಮ ವಿಶೇಷ ಉಪನ್ಯಾಸ ಮಾಲೆ 1 ಕಾರ್ಯಕ್ರಮ ಬೆಳಿಗ್ಗೆ 11-00 ಗಂಟೆಗೆ ಮಧುಗಿರಿಯ ಟಿ ವಿ ವಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಜರುಗಿತು. ಈ ಕಾರ್ಯಕ್ರಮದಲ್ಲಿ ಗಾಂಧೀ ತತ್ವಾದರ್ಶದ ಬಗೆಗೆ ಶ್ರೀಯುತ ಆರ್.



ಗುರುಪ್ರಸಾದ್ ಅವರು ಉಪನ್ಯಾಸ ನೀಡಿದರು. ಅಧ್ಯಕ್ಷತೆಯನ್ನು ಶ್ರೀ ಆರ್ ಸಿ ವಿಜಯಕುಮಾರ್ ಜೈನ್ ಕಾರ್ಯದರ್ಶಿ ಮಧುಗಿರಿ ಶಿಕ್ಷಣ ಸಂಸ್ಥೆ ಇವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಎಂ ಎಸ್ ಧರ್ಮವೀರ ಖಜಾಂಚಿಗಳು ಮಧುಗಿರಿ ಶಿಕ್ಷಣ ಸಂಸ್ಥೆ ಇವರು ಉಪಸ್ಥಿತರಿದ್ದರು. ಪ್ರೊ ಹೆಚ್ ಆರ್ ದಾಸೇಗೌಡ ಅವರು ಪ್ರಾಸ್ತಾವಿಕ ಮಾತುಗಳನ್ನಾಡಿದರು. ಡಿ ಕೆ ಕೋದಂಡರಾಮು ಹಾಗೂ ಪ್ರಾಂಶುಪಾಲರು ಉಪಸ್ಥಿತರಿದ್ದರು.

ದಿನಾಂಕ 3-11-2010 ರಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸುವರ್ಣ ಮಹೋತ್ಸವ ವಿಶೇಷ ಉಪನ್ಯಾಸ ಮಾಲೆ 2 ವಿವೇಕಾನಂದ ಕಾನೂನು ಕಾಲೇಜಿನ ಸಹಕಾರದಿಂದ ಬೆಳಿಗ್ಗೆ 11-00 ಗಂಟೆಗೆ ಜರುಗಿತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜನತಾ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾದ ಶ್ರೀಯುತ ರಘುರಾಮ್ ಅವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಡಾ: ಎಚ್ ಎಸ್ ದೊರೆಸ್ವಾಮಿ ಹಿರಿಯ ಸ್ವಾತಂತ್ರ್ಯ ಹೋರಾಟಗಾರರು, ನಿಧಿಯ ಅಧ್ಯಕ್ಷರಾದ ಡಾ; ಹೊ ಶ್ರೀನಿವಾಸಯ್ಯನವರು, ಕರ್ನಾಟಕ ಸರ್ವೋದಯ ಮಂಡಲದ ಕಾರ್ಯದರ್ಶಿ ಶ್ರೀಯುತ ಲ ನರಸಿಂಹಯ್ಯನವರು ಆಗಮಿಸಿದ್ದರು. ಅತಿಥಿಗಳಾಗಿ ಶ್ರೀಯುತ ಎಸ್ ಟಿ ನಾರಾಯಣಗೌಡ ಉಪಾಧ್ಯಕ್ಷರು ಜನತಾ ಶಿಕ್ಷಣ ಸಂಸ್ಥೆ ಬೆಂಗಳೂರು, ಶ್ರೀಯುತ ಸಿ ಎನ್ ಮಂಜೇಗೌಡ, ಗೌ॥ ಕಾರ್ಯದರ್ಶಿ ಜನತಾ ಶಿಕ್ಷಣ ಸಂಸ್ಥೆ ಉಪಸ್ಥಿತರಿದ್ದರು. ಡಾ॥ ಎಚ್ ದೊರೆಸ್ವಾಮಿ ಹಿರಿಯ ಗಾಂಧೀವಾದಿಗಳು 21ನೇ ಶತಮಾನದ ಯುವಕ ಯುವತಿಯರಿಗೆ ಮಹಾತ್ಮ ಗಾಂಧೀಜಿಯವರ ತತ್ವಗಳ ಪ್ರಸ್ತುತತೆ. ಎಂಬ ವಿಷಯದ ಬಗ್ಗೆ ಮಾತನಾಡಿದರು. ನಿಧಿಯ ಕಾರ್ಯದರ್ಶಿ ಪ್ರೊ ಹೆಚ್ ಆರ್ ದಾಸೇಗೌಡ ಪ್ರಾಸ್ತಾವಿಕ ಮಾತನ್ನಾಡಿದರು. ವಿವೇಕಾನಂದ ಕಾನೂನು ಕಾಲೇಜಿನ ಪ್ರಾಂಶುಪಾಲರಾದ ಪ್ರೊ॥ ಕೆಂಪೇಗೌಡ ಹಾಗೂ ಉಪನ್ಯಾಸಕ ವೃಂದ ಹಾಗೂ ವಿದ್ಯಾರ್ಥಿಗಳು ಉಪಸ್ಥಿತರಿದ್ದರು.

ದಿನಾಂಕ 10-11-2010 ಬುದವಾರ ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಸುವರ್ಣ ಮಹೋತ್ಸವ ವಿಶೇಷ ಉಪನ್ಯಾಸ ಮಾಲೆ 3 ಮಂಡ್ಯ ನಗರದ ಪಿ ಇ ಎಸ್ ಕಾನೂನು ಕಾಲೇಜಿನ ಸಹಕಾರದಿಂದ ಕಾಲೇಜಿನ ಸಭಾಂಗಣದಲ್ಲಿ ಜರುಗಿತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಜಿ ಮಾದೇಗೌಡ ಮಾಜಿ ಸಂಸದರು ಹಾಗೂ ಅಧ್ಯಕ್ಷರು ಗಾಂಧೀ ಭವನ ಮಂಡ್ಯ ಇವರು ನೆರವೇರಿಸಿದರು. ಅಧ್ಯಕ್ಷತೆಯನ್ನು ಶ್ರೀ ಹೆಚ್. ಡಿ. ಚೌಡಯ್ಯ, ಜನತಾ ಶಿಕ್ಷಣ ಸಂಸ್ಥೆ ಅಧ್ಯಕ್ಷರು ಇವರು ವಹಿಸಿದ್ದರು. ಪ್ರಾಸ್ತಾವಿಕ ನುಡಿಯನ್ನು ನಿಧಿಯ ಕಾರ್ಯದರ್ಶಿ ಪ್ರೊ ಹೆಚ್ ಆರ್ ದಾಸೇಗೌಡ ಅವರು ನಡೆಸಿಕೊಟ್ಟರು. ಶ್ರೀಯುತ ಸುರೇಂದ್ರ ಕೌಲಗಿಯವರು ಗಾಂಧೀಜಿ ಮತ್ತು ಸರ್ವೋದಯದ ಬಗ್ಗೆ ಉಪನ್ಯಾಸ ನೀಡಿದರು. ಮುಖ್ಯ ಅತಿಥಿಗಳಾಗಿ ಶ್ರೀಯುತ ಕೆ ಟಿ ಚಂದ್ರು ಅವರು ಉಪಸ್ಥಿತರಿದ್ದರು. ನಿಧಿಯ ಸಹ ಕಾರ್ಯದರ್ಶಿ ಹಾಗೂ ಕಾಲೇಜಿನ ಪ್ರಾಂಶುಪಾಲರು ಹಾಗೂ ವಿದ್ಯಾರ್ಥಿ ವೃಂದ ಉಪಸ್ಥಿತರಿದ್ದರು.

ದಿನಾಂಕ 11-11-2010 ರಂದು ಸುವರ್ಣ ಮಹೋತ್ಸವ ವರ್ಷಾಚರಣೆ ಕಾರ್ಯಕ್ರಮ ವಿಶೇಷ ಉಪನ್ಯಾಸ ಮಾಲೆ 4 ಮೈಸೂರಿನ ವಿದ್ಯಾವರ್ಧಕ ಕಾನೂನು ಕಾಲೇಜಿನಲ್ಲಿ ಜರುಗಿತು. ಈ ಕಾರ್ಯಕ್ರಮದ ಅದ್ಯಕ್ಷತೆಯನ್ನು ಶ್ರೀ ಗುಂಡಪ್ಪಗೌಡರು ಅಧ್ಯಕ್ಷರು ವಿದ್ಯಾವರ್ಧಕ ಸಂಘ ಇವರು ವಹಿಸಿದ್ದರು. ಶ್ರೀಯುತ ಲ ನರಸಿಂಹಯ್ಯನವರು ಉಪನ್ಯಾಸವನ್ನು ನಡೆಸಿಕೊಟ್ಟರು. ಮುಖ್ಯ ಅತಿಥಿಗಳಾಗಿ ಶ್ರೀ ಪಿ ವಿಶ್ವನಾಥ್ ಅವರು ಕಾರ್ಯದರ್ಶಿಗಳು ವಿದ್ಯಾವರ್ಧಕ ಸಂಘ ಇವರು ಉಪಸ್ಥಿತರಿದ್ದರು.ನಿಧಿಯ ಸಹ ಕಾರ್ಯದರ್ಶಿ ಡಿ ಕೆ ಕೋದಂಡರಾಮು ಪ್ರಾಸ್ತಾವಿಕ ನುಡಿಗಳನ್ನಾಡಿದರು. ಈ ಕಾರ್ಯಕ್ರಮದ ಅಂಗವಾಗಿ ಗಾಂಧೀ ಸಾಹಿತ್ಯ ಹಾಗೂ ಖಾದಿ ವಸ್ತ್ರ ಪ್ರದರ್ಶನ ಮಾರಾಟ ಆಯೋಜಿಸಲಾಗಿತ್ತು.

ದಿನಾಂಕ 13-11-2010 ರಂದು ಗುಲಬರ್ಗಾನಗರದಲ್ಲಿ ಗಾಂಧೀ ಸ್ಮಾರಕ ನಿಧಿ ಸುವರ್ಣ ಮಹೋತ್ಸವ ಕಾರ್ಯಕ್ರಮ ಹಾಗೂ ವಿಶೇಷ ಉಪನ್ಯಾಸ ಮಾಲೆ 5 ವೀರಮ್ಮ ಗಂಗಮ್ಮಶ್ರೀ ಮಹಿಳಾ ಮಹಾ ವಿದ್ಯಾಲಯಲ್ಲಿದಲ್ಲಿ ಜರುಗಿತು. ಪೂಜ್ಯಶ್ರೀ ಬಸವರಾಜಪ್ಪ ಅಪ್ಪಅವರು ಸಾನಿಧ್ಯ ವಹಿಸಿದ್ದರು. ಉದ್ಘಾಟನೆಯನ್ನು ನಾಡೋಜ ಪಾಟೀಲ ಪುಟ್ಟಪ್ಪನವರು ನೆರವೇರಿಸಿದರು. ಉತ್ತಮ ಸೇವೆ ಮಾಡಿದ ಕೆಲವು ಸಾಧಕರಿಗೆ ಸನ್ಮಾನಿಸಲಾಯಿತು. ನಿಧಿಯ ಸಹ ಕಾರ್ಯದರ್ಶಿ ಡಿ ಕೆ ಕೋದಂಡರಾಮು ಅವರು ಪ್ರಾಸ್ತಾವಿಕ



ಮಾತುಗಳನ್ನಾಡಿದರು. ಈ ಕಾರ್ಯಕ್ರಮವನ್ನು ಸುವರ್ಣಮಹೋತ್ಸವ ಸಮಿತಿಸ ಸದಸ್ಯರಾದ ಎ ಬಿ ಬಿರಾದಾರ್ ಅವರು ಆಯೋಜಿಸಿದ್ದರು.

ದಿನಾಂಕ 14-11-2010 ರಿಂದ 19-11-2010 ರವರಗೆ ಗಾಂಧೀ ಮಕ್ಕಳ ನಾಟಕೋತ್ಸವನ್ನು ಗಾಂಧಿ ಭವನದಲ್ಲಿ ಆಯೋಜಿಸಲಾಗಿತ್ತು. ಈ ಕಾರ್ಯಕ್ರಮವನ್ನು ಹೆಸರಾಂತ ರಂಗ ತಜ್ಞರಾದ ಮಾ: ಹಿರಣ್ಣಯ್ಯನವರು ಉದ್ಘಾಟಿಸಿದರು. ನಿಧಿಯ ಅಧ್ಯಕ್ಷರಾದ ಡಾ:; ಹೊ ಶ್ರೀನಿವಾಸಯ್ಯನವರು ಅಧ್ಯಕ್ಷತೆ ವಹಿಸಿದ್ದರು. ನಿಧಿಯ ಕಾರ್ಯದರ್ಶಿ ಪ್ರಾಸ್ತಾವಿಕ ಮಾತುಗಳೊಂದಿಗೆ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಈ ಕಾರ್ಯಕ್ರಮದ ಮೇಲ್ವಿಚಾರಣೆಯನ್ನು ಶ್ರೀಯುತ ಚಿದಾನಂದ ಕುಲಕರ್ಣಿಯವರು ವಹಿಸಿ ಮೂರು ನಾಟಕವನ್ನು ನಿರ್ದೇಶಿಸಿದರು. ಒಟ್ಟು 6 ನಾಟಕಗಳು ನಡೆದವು. ವಿವರಗಳನ್ನು ಮುಂದಿನ ಪುಟದಲ್ಲಿ ನೀಡಿದೆ.

| | | |
|---|---|---|
| ಭಾರತ ಸೇವಾದಳ | ಶ್ರವಣ ಕುಮಾರ ಮತ್ತು ಗಾಂಧೀ | ಶ್ರೀ ಗೋವಿಂದರಾಜ್ |
| ಶೇಷಾದ್ರಿಪುರಂ ಶಿಕ್ಷಣ ದತ್ತಿ ಪ್ರೌಡಶಾಲೆ | ಬಿರುಗಾಳಿಯಿಂದ ಬಿರುಗಾಳಿಗೆ/ ದಡುಂ ದುಡುಂ ದಕ್ಷಿಣ ಆಫ್ರಿಕಾ | ಶ್ರೀ ಯೋಗಾರ್ಜುನ |
| ಶೇಷಾದ್ರಿಪುರಸ್ತ್ರೀ ಸಮಾಜ ಶಾಲೆ ಜೈನ್ ಹೆರಿಟೇಜ್ ಸ್ಕೂಲ್ | ನಾನು ಕಾಪಿ ಮಾಡಲಾರೆ ಹಾಗೂ ಮೂಕಾಭಿನಯ | ಶ್ರೀ ಶಿವಣ್ಣ |
| ತುಮಕೂರು ತಂಡ | ಗಾಂಧಿ ಅಲ್ಲ- ಗಾಂಧೀಮಾರ್ಗ | ಲ ನರಸಿಂಹಯ್ಯ |
| ಬಿ ಇ ಎಸ್ ಶಾಲೆ ಮಲ್ಲೇಶ್ವರಂ ಶ್ರೀಮತಿ ರಜನಿ ಎನ್ | ಅಸಹಕಾರ ಚಳುವಳ | ಶ್ರೀಮತಿ ಕುಂದಾ ಜಿ ಅನಗಂಡಿ |
| . | ಪುಣ್ಯಕೋಟಿ ಗೋವಿನ ಹಾಡು ನೃತ್ಯರೂಪಕ | ಶ್ರೀ ಚಿದಾನಂದ ಕುಲಕರ್ಣಿ |

ಸಮಾರೋಪ ಸಮಾರಂಭ ದಿನಾಂಕ 19-11-2010 ರಂದು ನಡೆಯತು ಸಮಾರೋಪ ಕಾರ್ಯಕ್ರಮವನ್ನು ಶ್ರೀನಿವಾಸ ಜಿ ಕಪ್ಪಣ್ಣ ನಡೆಸಿಕೊಟ್ಟರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷರಾದ ಡಾ॥ ವೂಡೆ ಪಿ ಕೃಷ್ಣ ಅವರು ವಹಿಸಿದ್ದರು. ನಿಧಿಯ ಕಾರ್ಯದರ್ಶಿ ಪ್ರಾಸ್ತಾವಿಕ ಮಾತುಗಳನ್ನಾಡಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಶ್ರೀಮತಿ ಅನುಪಮ ಕಾರ್ಯಕ್ರಮ ನಿರ್ವಹಿಸಿದರು. ಭಾಗವಹಿಸಿದ ತಂಡಗಳಿಗೆ ಪ್ರಶಸ್ತಿ ಪತ್ರ ಹಾಗೂ ನೆನಪಿನ ಕಾಣಿಕೆ ನೀಡಲಾಯಿತು.

ದಿನಾಂಕ 29-11-2010 ರಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸುವರ್ಣ ಮಹೋತ್ಸವ ವಿಶೇಷ ಉಪನ್ಯಾಸ ಮಾಲೆ 6 ಕಾರ್ಯಕ್ರಮ ತುಮಕೂರಿನ ವಿದ್ಯೋದಯ ಕಾನೂನು ಕಾಲೇಜಿನಲ್ಲಿಜರುಗಿತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಡಾ; ಜೆ ಎಸ್ ಪಾಟೀಲ ಕುಲಪತಿಗಳು ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ಹುಬ್ಬಳ್ಳಿ ಇವರು ನೆರವೇರಿಸಿದರು. ಅಧ್ಯಕ್ಷತೆಯನ್ನು ವಿದ್ಯಾವರ್ಧಕ ಕಾಲೇಜಿನ ವ್ಯವಸ್ಥಾಪಕ ನಿರ್ದೇಶಕರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಡಾ: ಎಚ್ ಎಸ್ ದೊರೆಸ್ವಾಮಿ ಹಿರಿಯ ಗಾಂಧೀವಾದಿಗಳು ಹಾಗೂ ನಿಧಿಯ ಅಧ್ಯಕ್ಷರು ಭಾಗವಹಿಸಿದ್ದರು. ಪ್ರಾಸ್ತಾವಿಕ ನುಡಿಯನ್ನು ಪ್ರೊ ಹೆಚ್ ಆರ್ ದಾಸೇಗೌಡ ನುಡಿಯುವದರ ಮೂಲಕ ಕಾರ್ಯಕ್ರಮಕ್ಕೆ ಚಾಲನೆನೀಡಿದರು. ಕಾರ್ಯಕ್ರಮದಲ್ಲಿ ಆಡಳಿತ ವರ್ಗ ಹಾಗೂ ಪ್ರಾಂಶುಪಾಲರು ಹಾಗೂ ವಿದ್ಯಾರ್ಥಿಗಳು ಉಪಸ್ಥಿತರಿದ್ದರು

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಮತ್ತು ಶ್ರೀ ರಂಗನಾಥ ವಿದ್ಯಾ ಸಂಸ್ಥೆ (ರಿ)ಕಟಾವೀರನಹಳ್ಳಿ ,ಶ್ರೀ ಮಲ್ಲಣ್ಣ ಮೆಮೋರಿಯಲ್ ಪದವಿ ಪೂರ್ವ ಕಾಲೇಜು ದೊಡ್ಡ ಆಲದ ಮರ ಗೇಟ್ ಕಳ್ಳಂಬೆಳ್ಳ ಹೋಬಳಿ ಶಿರಾ ತಾಲ್ಲೂಕು ತುಮಕೂರು ಜಿಲ್ಲೆ ಇಲ್ಲಿ ದಿನಾಂಕ 7-01-2011 ರಂದು ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವದ ಅಂಗವಾಗಿ ವಿಶೇಷ ಉಪನ್ಯಾಸ ಮಾಲೆ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಬೆಳಿಗ್ಗೆ 11-00 ಗಂಟೆಗೆ ಶ್ರೀ ಮಲ್ಲಣ್ಣ ಮೆಮೋರಿಯಲ್ ಪದವಿ ಪೂರ್ವ ಕಾಲೇಜಿನಲ್ಲಿ



ಗಾಂಧೀಜಿಯವರ ತತ್ವಗಳ ಬಗ್ಗೆ ಉಪನ್ಯಾಸ ಕಾರ್ಯಕ್ರಮ ನಡೆಯಿತು. ಪ್ರೊ ಕೆ ಚಂದ್ರಣ್ಣ ಅವರು ಸ್ವಾಗತಿಸಿದರು. ನಿಧಿಯ ಕಾರ್ಯದರ್ಶಿಯವರಾದ ಪ್ರೊ.ಹೆಚ್.ಆರ್‌ದಾಸೇಗೌಡ ಅವರು ಕಾರ್ಯಕ್ರಮದ ಬಗ್ಗೆ ಹಾಗೂ ಕಾರ್ಯಕ್ರಮದ ಔಚಿತ್ಯದ ಬಗ್ಗೆ ಪ್ರಾಸ್ತಾವಿಕ ನುಡಿಗಳನ್ನಾಡಿದರು. ಶ್ರೀಯುತ ಗುರುಪ್ರಸಾದ್ ಅವರು ಮಹಾತ್ಮಗಾಂಧೀಜಿಯವರ ತತ್ವ ಆದರ್ಶದ ಬಗ್ಗೆ ಸುದೀರ್ಘ ಭಾಷಣ ಮಾಡಿದರು. ಶ್ರೀಯುತ ಲ ನರಸಿಂಹಯ್ಯನವರು ಸಭೆಯಲ್ಲಿ ಉಪಸ್ಥಿತರಿದ್ದರು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಬಾಪೂಜಿ ವಿದ್ಯಾಸಂಸ್ಥೆ ತುಮಕೂರು ಇದರ ಕಾರ್ಯದರ್ಶಿಯಾಗಿರುವ ಶ್ರೀಯುತ ಎಂ ಬಸವಯ್ಯನವರು ವಹಿಸಿದ್ದರು. ಈ ಕಾರ್ಯಕ್ರಮಕ್ಕೆ ಕರ್ನಾಟಕ ಕಾನೂನು ವಿಶ್ವವಿದ್ಯಾಲಯ ಹಾಗೂ ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಸಹಯೋಗ ನೀಡಿದ್ದವು.

ಇದೇ ದಿನ 1-30ಕ್ಕೆ ಕಟಾವೀರನ ಹಳ್ಳಿಯಲ್ಲಿರುವ ಶ್ರೀ ರಂಗನಾಥ ವಿದ್ಯಾಸಂಸ್ಥೆಯಲ್ಲಿ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಉಪನ್ಯಾಸವನ್ನು ಏರ್ಪಡಿಸಲಾಗಿತ್ತು. ಹಾಗೂ ಪ್ರೌಡಶಾಲೆ ವಿದ್ಯಾರ್ಥಿಗಳಿಗೆ ಮದ್ಯಪಾನದ ದುಷ್ಪರಿಣಾಮಗಳ ಬಗ್ಗೆ ಪ್ರಬಂಧ ಸ್ಪರ್ದೆ ಏರ್ಪಡಿಸಲಾಗಿತ್ತು. ಕಾರ್ಯಕ್ರಮದ ಬಗ್ಗೆ ನಿಧಿಯ ಕಾರ್ಯದರ್ಶಿಯವರಾದ ಪ್ರೊ॥ ಹೆಚ್. ಆರ್. ದಾಸೇಗೌಡ ಅವರು ಪ್ರಾಸ್ತಾವಿಕ ಮಾತುಗಳನ್ನಾಡಿದರು. ಶ್ರೀಯುತ ಗುರುಪ್ರಸಾದ್ ಅವರು ಮಹಾತ್ಮಗಾಂಧೀಜಿಯವರ ತತ್ವಗಳ ಬಗ್ಗೆ ಉಪನ್ಯಾನ ನೀಡಿದರು. ನಂತರ ಪ್ರಬಂಧ ಸ್ಪರ್ಧೆ ವಿಜೇತ ವಿದ್ಯಾರ್ಥಿಗಳಿಗೆ ನಿಧಿಯ ಕಾರ್ಯದರ್ಶಿ ಅವರು ಬಹುಮಾನಗಳನ್ನು ಹಾಗೂ ಸ್ಮರಣಿಕೆ ನೀಡಿದರು. ಸಮಾರಂಭದಲ್ಲಿ ಮಹಾತ್ಮರ ಕುರಿತಂತೆ ಮತ್ತು ಸ್ವಾತಂತ್ರ್ಯ ಹೋರಾಟ ಕುರಿತ ಕಿರುಚಿತ್ರವನ್ನು ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ವತಿಯಿಂದ ಪ್ರದರ್ಶಿಸಲಾಯಿತು.

ದಿನಾಂಕ 12-1-20011 ಸಂಜೆ 4-30ಕ್ಕೆ ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಗಾಂಧೀ ಭವನದಲ್ಲಿ ವಿವೇಕಾನಂದ ಜಯಂತಿಯನ್ನು ಆಚರಿಸಿತು. ಈ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಹಲಸೂರು ರಾಮಕೃಷ್ಣಾಶ್ರಮದ ಶ್ರೀ ತ್ಯಾಗೀಶ್ವರಾನಂದ ಜೀ ಮಹಾರಾಜ್ ಅವರು ಆಗಮಿಸಿ, ವಿವೇಕಾನಂದರ ಆದರ್ಶಗಳು ಅವರ ಸಾಧನೆ ಬಗಗೆ ಉಪನ್ಯಾಸ ನೀಡಿದರು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ನಿಧಿಯ ಅಧ್ಯಕ್ಷರಾದ ಡಾ॥ ಹೊ. ಶ್ರೀನಿವಾಸಯ್ಯನವರು ವಹಿಸಿದ್ದರು. ಪ್ರೊ॥ ಹೆಚ್. ಆರ್. ದಾಸೇಗೌಡರು ಕಾರ್ಯದರ್ಶಿಗಳು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಪ್ರಾಸ್ತಾವಿಕ ಮಾತುಗಳನ್ನಾಡಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಸುವರ್ಣ ಮಹೋತ್ಸವ ವಿಶೇಷ ಉಪನ್ಯಾಸ 8 ಕಾರ್ಯಕ್ರಮ ಜೆ ಎಸ್ ಎಸ್ ಮಹಾ ವಿದ್ಯಾಪೀಠ ಮೈಸೂರು ಇವುಗಳ ಸಂಯುಕ್ತ ಆಶ್ರಯದಲ್ಲಿ ದಿನಾಂಕ 21-1-2011 ರಂದು ಮಧ್ಯಾಹ್ನ 2-30 ಗಂಟೆಗೆ ಸುತ್ತೂರು ಶ್ರೀಕ್ಷೇತ್ರದ ಜೆ ಎಸ್ ಎಸ್ ಶಿಕ್ಷಣ ಸಂಸ್ಥೆಗಳ ಸಮುಚ್ಚಯದಲ್ಲಿ ಜರುಗಿತು. ನಿಧಿಯ ಸಹ ಕಾರ್ಯದರ್ಶಿ ಶ್ರೀಯುತ ಡಿ ಕೆ ಕೋದಂಡರಾಮು ಅವರು ಸುವರ್ಣ ಮಹೋತ್ಸವದ ಔಚಿತ್ಯ ಹಾಗೂ ಗಾಂಧೀ ಸ್ಮಾರಕ ನಿಧಿಯ ಧ್ಯೇಯೋದ್ದೇಶಗಳು ಹಾಗೂ ನಿಧಿಯ ಕಾರ್ಯಗಳ ಬಗ್ಗೆ ವಿಷದವಾಗಿ ತಿಳಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಎಸ್. ಟಿ. ಉದಯಶಂಕರ ಅವರ ಅನುಪಸ್ಥಿತಿಯಲ್ಲಿ ಜೆ. ಎಸ್. ಎಸ್. ಶಿಕ್ಷಣ ಸಂಸ್ಥೆಯ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರು ಅಧ್ಯಕ್ಷತೆಯನ್ನು ವಹಿಸಿದ್ದರು. ಕರ್ನಾಟಕ ಸರ್ವೋದಯ ಮಂಡಲದ ಕಾರ್ಯದರ್ಶಿಯಾದ ಶ್ರೀ ಲ. ನರಸಿಂಹಯ್ಯನವರು ಮಕ್ಕಳಿಗೆ ಗಾಂಧೀಜಿಯವರ ರಚನಾತ್ಮಕ ಕಾರ್ಯಗಳ ಬಗ್ಗೆ ಉಪನ್ಯಾಸ ನೀಡಿದರು. ಸುಮಾರು 2500 ಬಾಲಕರು ಹಾಗೂ ಅಧ್ಯಾಪಕ ವೃಂದದವರು ಉಪಸ್ಥಿತರಿದ್ದರು. ಈ ಕಾರ್ಯಕ್ರಮದ ನಂತರ ಗಾಂಧೀಜಿಯವರ ಜೀವನ ಹಾಗೂ ಹೋರಾಟ ಸ್ವಾತಂತ್ರ್ಯ ಚಳುವಳಿಯ ಕುರಿತ ಕಿರು ಸಾಕ್ಷ್ಯಚಿತ್ರವನ್ನು ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ವತಿಯಿಂದ ಪ್ರದರ್ಶಿಸಲಾಯಿತು.

ಇದೇ ಕಾರ್ಯಕ್ರಮವನ್ನು ಇದೇ ಶಿಕ್ಷಣ ಸಂಸ್ಥೆಯ ಬಾಲಕಿಯರಿಗೂ ಏರ್ಪಡಿಸಲಾಗಿತ್ತು ಕರ್ನಾಟಕ ಸರ್ವೋದಯ ಮಂಡಲದ ಕಾರ್ಯದರ್ಶಿಯಾದ ಶ್ರೀಯುತ ಲ ನರಸಿಂಹಯ್ಯನವರು ಬಾಲಕಿಯರಿಗೆ ಗಾಂಧೀ ಹಾಗೂ ಕಸ್ತೂರಬಾ ಅವರ ಒಡನಾಟದ ಬಗ್ಗೆ ಹಾಗೂ ಅವರ ಆದರ್ಶದ ಬಗ್ಗೆ ತಿಳಿಸಿದರು ಸುಮಾರು 2500 ಬಾಲಕಿಯರು ಉಪಸ್ಥಿತರಿದ್ದರು. ಇವರಿಗೂ ಸಹ



ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ವತಿಯಿಂದ ಗಾಂಧೀಜಿಯವರ ಜೀವನ ಮತ್ತು ಹೋರಾಟದ ಹಾಗೂ ಸ್ವಾತಂತ್ರ್ಯ ಚಳವಳಿಯ ಕುರಿತ ಕಿರು ಸಾಕ್ಷ್ಯಚಿತ್ರ ಪ್ರದರ್ಶಿಸಲಾಯಿತು. ಈ ಕಾರ್ಯಕ್ರಮದ ಅಂಗವಾಗಿ ಸಿ. ವಿ. ಜಿ. ಇಂಡಿಯಾ ಸಂಸ್ಥೆಯವರ ಜೊತೆಗೂಡಿ ಗಾಂಧೀಜಿಯವರ ಸಾಹಿತ್ಯ ಪ್ರದರ್ಶನ ಮತ್ತು ಮಾರಾಟವನ್ನು ಏರ್ಪಡಿಸಲಾಗಿತ್ತು. ಸುಮಾರು 5,000ಕ್ಕೂ ಹೆಚ್ಚು ಸಾಹಿತ್ಯ ಮಾರಾಟವಾಯಿತು.

ದಿನಾಂಕ 26-1-2010 ಬುಧವಾರ ಬೆಳಿಗ್ಗೆ 9-00 ಗಂಟೆಗೆ ಗಣರಾಜ್ಯೋತ್ಸವ ಕಾರ್ಯಕ್ರಮವನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಗಾಂಧಿ ಶಾಂತಿ ಪ್ರತಿಷ್ಠಾನ ಸಂಸ್ಥೆಗಳು ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದವು. ರಾಷ್ಟ್ರ ಧ್ವಜಾರೋಹಣವನ್ನು ನಿಧಿಯ ಅಧ್ಯಕ್ಷರಾದ ಡಾ: ಹೊ ಶ್ರೀನಿವಾಸಯ್ಯನವರು ನೆರವೇರಿಸಿದರು. ಈ ಕಾರ್ಯಕ್ರಮದ ಅಂಗವಾಗಿ ಪ್ರೊ|| ಎಸ್. ಆರ್. ರೋಹಿಡೇಕರ್ ಅವರ ಕೃತಿ 'ಶ್ರೇಷ್ಠ ಸಾಹಿತಿಗಳ ಸಂಪರ್ಕ'ದಲ್ಲಿ ಕೃತಿಯುನ್ನು ಲೋಕಾರ್ಪಣೆ ಗೊಳಿಸಲಾಯಿತು. ಈ ಕೃತಿಯನ್ನು ಕುರಿತು ಹೆಚ್ ಎಸ್ ದೊರೆಸ್ವಾಮಿ ಅವರು ಮಾತನಾಡಿದರು. ಪ್ರೊ ಹೆಚ್ ಆರ್ ದಾಸೇಗೌಡ ಕಾರ್ಯದರ್ಶಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಇವರು ಪ್ರಾಸ್ತಾವಿಕ ಮಾತುಗಳನ್ನಾಡಿದರು.

ದಿನಾಂಕ 31-1-2011 ರಂದು ಮಧ್ಯಾಹ್ನ 2-00 ಗಂಟೆಗೆ ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಹಾಗೂ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಚಿಕ್ಕಬಳ್ಳಾಪುರ ಹಾಗೂ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಚಿಕ್ಕಬಳ್ಳಾಪುರ ಸಂಯುಕ್ತ ಆಶ್ರಯದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ಕಾರ್ಯಕ್ರಮ ವಿಶೇಷ ಉಪನ್ಯಾಸ 10 ರ ಕಾರ್ಯಕ್ರಮವನ್ನು ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಚಿಕ್ಕಬಳ್ಳಾಪುರ ಇಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀಯುತ ಎಸ್. ವಿ. ನಾಗರಾಜರಾವ್ ಅವರು ವಹಿಸಿದ್ದರು, ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಕಾರ್ಯದರ್ಶಿ ಪ್ರೊ ಹೆಚ್ ಆರ್ ದಾಸೇಗೌಡ ಅವರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ಶ್ರೀಯುತ ಎಲ್ ನರಸಿಂಹಯ್ಯನವರು ಕಾರ್ಯದರ್ಶಿಗಳು ಕರ್ನಾಟಕ ಸರ್ವೋದಯ ಮಂಡಲ ಇವರು ಹಾಗೂ ಶ್ರೀಯುತ ಕೆಂಪಣ್ಣನವರು, ಸಹ ಶಿಕ್ಷಕರು, ಶಾರದ ಬಾಲಕರ ಪ್ರೌಢಶಾಲೆ ಇವರು ಆಗಮಿಸಿ ಮಹಾತ್ಮ ಗಾಂಧೀಜಿಯವರ ಜೀವನ, ಸಾಧನೆ ಹಾಗೂ ಸ್ವಾತಂತ್ರ್ಯ ಹೋರಾಟದ ಬಗ್ಗೆ ಉಪನ್ಯಾಸ ನೀಡಿದರು. ಶ್ರೀಯುತ ಬಿ ವಿ ಕೃಷ್ಣ ಹಾಗೂ ನಿವೃತ್ತ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಶ್ರೀ ಸಿ. ಬಿ. ಹನುಮಂತಪ್ಪ ಅವರು ಆಶಯ ನುಡಿಗಳನ್ನು ನುಡಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಬೆಂಗಳೂರು ಶ್ರೀ ಕೊಂಗಾಡಿಯಪ್ಪ ಕಾಲೇಜು, ದೊಡ್ಡಬಳ್ಳಾಪುರ ಇವುಗಳ ಸಂಯುಕ್ತ ಆಶ್ರಯದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆ 2010-2011 ದೊಡ್ಡಬಳ್ಳಾಪುರ ಜಿಲ್ಲಾ ಸಮಾವೇಶ ವಿಶೇಷ ಉಪನ್ಯಾಸಮಾಲೆ-11 ರ ಕಾರ್ಯಕ್ರಮವನ್ನು ದಿನಾಂಕ: 3-2-2011ನೇ ಬೆಳಿಗ್ಗೆ 11-00 ಗಂಟೆಗೆ ಶ್ರೀ ಕೊಂಗಾಡಿಯಪ್ಪ ಕಾಲೇಜು, ದೊಡ್ಡಬಳ್ಳಾಪುರ ಇಲ್ಲಿ ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಪ್ರೊ|| ಎಸ್. ವಿ. ಸುಬ್ರಮಣ್ಯಂ, ಪ್ರಾಂಶುಪಾಲರು, ಶ್ರೀ ಕೊಂಗಾಡಿಯಪ್ಪ ಕಾಲೇಜು, ದೊಡ್ಡಬಳ್ಳಾಪುರ ಇವರು ವಹಿಸಿದ್ದರು. ಈ ಕಾರ್ಯಕ್ರಮದ ಅಂಗವಾಗಿ ಸರ್ವೋದಯ ಯುಗಮಂತ್ರ ಎಂಬ ವಿಷಯ ಕುರಿತು ಡಾ|| ಹೆಚ್. ಎಸ್. ದೊರೆಸ್ವಾಮಿ ಅವರು ಹಿರಿಯ ಸ್ವಾತಂತ್ರ್ಯ ಹೋರಾಟಗಾರರು ಉಪನ್ಯಾಸ ನೀಡಿದರು. ಎಸ್. ನಾರಾಯಣನ್ ಅವರು ಮುಖ್ಯಸ್ಥರು, ಇಂಗ್ಲೀಷ್ ವಿಭಾಗ, ಕೊಂಗಾಡಿಯಪ್ಪ ಕಾಲೇಜು, ದೊಡ್ಡಬಳ್ಳಾಪುರ ಇವರು ಮಾತನಾಡಿದರು. ಮುಖ್ಯ ಅತಿಥಿಗಳಾಗಿ ಡಾ: ಹೊ ಶ್ರೀನಿವಾಸಯ್ಯನವರು ಅಧ್ಯಕ್ಷರು, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಇವರು ಉಪಸ್ಥಿತರಿದ್ದರು. ಪ್ರೊ ಹೆಚ್ ಆರ್ ದಾಸೇಗೌಡ ಅವರು ಕಾರ್ಯದರ್ಶಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಪ್ರಾಸ್ತಾವಿಕ ಮಾತುಗಳನ್ನಾಡಿದರು. ಈ ಸಮಾರಂಭದಲ್ಲಿ ಅಧ್ಯಕ್ಷರು ಕನ್ನಡ ಸಾಹಿತ್ಯ ಪರಿಷತ್ತು ಶ್ರೀ ಕೊಂಗಾಡಿಯಪ್ಪ ಕಾಲೇಜು ಉಪನ್ಯಾಸಕ ವೃಂದ ಹಾಗೂ ಆಡಳಿತ ಮಂಡಳಿ ಸದಸ್ಯರು ಉಪಸ್ಥಿತರಿದ್ದರು. ಶ್ರೀ ಡಿ. ಕೆ. ಕೋದಂಡರಾಮು ಜಂಟಿ ಕಾರ್ಯದರ್ಶಿ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಇವರು ವಂದಿಸಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಬೆಂಗಳೂರು ಜೆ.ಎಸ್.ಎಸ್. ಪ್ರಥಮ ದರ್ಜೆ ಮಹಿಳಾ ಕಾಲೇಜು ಚಾಮರಾಜನಗರ ಇವುಗಳ ಸಂಯುಕ್ತ ಆಶ್ರಯದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆ 2010–2011 ಚಾಮರಾಜನಗರ ಜಿಲ್ಲಾ ಸಮಾವೇಶ ವಿಶೇಷ ಉಪನ್ಯಾಸಮಾಲೆ–12 ಕಾರ್ಯಕ್ರಮ ದಿನಾಂಕ: 11–02–2011ನೇ ಶುಕ್ರವಾರ ಬೆಳಿಗ್ಗೆ 10–30ಕ್ಕೆ ಜೆ.ಎಸ್.ಎಸ್. ಪ್ರಥಮ ದರ್ಜೆ ಕಾಲೇಜು ಚಾಮರಾಜನಗರ ಇಲ್ಲಿ ಜರುಗಿತು. ಅಧ್ಯಕ್ಷತೆಯನ್ನು ಪ್ರೊ. ಎಂ.ಡಿ. ಪುಷ್ಪಾವತಿ ಪ್ರಾಂಶುಪಾಲರು, ಜೆ.ಎಸ್.ಎಸ್.ಮಹಿಳಾ ಪ್ರಥಮ ದರ್ಜೆ ಕಾಲೇಜು ಇವರು ವಹಿಸಿದ್ದರು. ಸರ್ವೋದಯ ಯುಗಮಂತ್ರ ಕುರಿತು ಮಾನ್ಯಶ್ರೀ ಲ.ನರಸಿಂಹಯ್ಯ ಅವರು ಕಾರ್ಯದರ್ಶಿಗಳು, ಕರ್ನಾಟಕ ಸರ್ವೋದಯ ಮಂಡಲಿ ಹಾಗೂ ಸದಸ್ಯರು ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಇವರು ಉಪನ್ಯಾಸ ನೀಡಿದರು. ಮುಖ್ಯ ಅತಿಥಿಗಳಾಗಿ ಮಾನ್ಯಶ್ರೀ ಎ.ಜಿ.ಶಿವಕುಮಾರ್ ಅವರು ಪ್ರಾಧ್ಯಾಪಕರು, ಕನ್ನಡ ವಿಭಾಗದ ಮುಖ್ಯಸ್ಥರು, ಡಾ. ಚೌಡಯ್ಯ ಕಟನವಾಡಿ ಪ್ರಾಂಶುಪಾಲರು ಪದವಿ ಪೂರ್ವ ಕಾಲೇಜು ಶ್ರೀ. ಡಿ.ಕೆ.ಕೋದಂಡರಾಮು , ಸಹ ಕಾರ್ಯದರ್ಶಿ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಇವರು ಪ್ರಾಸ್ತಾವಿಕ ಮಾತುಗಳನ್ನಾಡಿದರು. ಟಿ.ಡಿ ಸುಬ್ಬಣ್ಣ ಕಾಲೇಜು ನಿರ್ದೇಶಕರು ಜೆ.ಎಸ್.ಎಸ್.ಕಾಲೇಜು, ಉಪನ್ಯಾಸಕರು ಹಾಗೂ ವಿದ್ಯಾರ್ಥಿವೃಂದ ಉಪಸ್ಥಿತರಿದ್ದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಬೆಂಗಳೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಕೊಡಗು, ಮೊರಾರ್ಜಿ ದೇಸಾಯಿ ವಸತಿ ಶಾಲೆ, ಬಸವನಹಳ್ಳಿ ಕುಶಾಲನಗರ, ಕೊಡಗು ಜಿಲ್ಲೆ ಇವುಗಳ ಸಂಯುಕ್ತ ಆಶ್ರಯದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆ 2010–2011. ವಿಶೇಷ ಉಪನ್ಯಾಸಮಾಲೆ–13ರ ಕಾರ್ಯಕ್ರಮ ದಿನಾಂಕ: 21–02–2011ನೇ ಸೋಮವಾರ ಬೆಳಿಗ್ಗೆ 10–30ಕ್ಕೆ ಮೊರಾರ್ಜಿ ದೇಸಾಯಿ ವಸತಿ ಶಾಲೆ, ಬಸವನಹಳ್ಳಿ ಕುಶಾಲನಗರ ಇಲ್ಲಿ ಜರುಗಿತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ. ಟಿ.ಪಿ.ರಮೇಶ್ ಅಧ್ಯಕ್ಷರು, ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಇವರು ನೆರವೇರಿಸಿದರು. ಅಧ್ಯಕ್ಷತೆಯನ್ನು ಶ್ರೀ ಕೆ .ವಿ. ಸುರೇಶ್ ಪ್ರಾಂಶುಪಾಲರು ಮೊರಾರ್ಜಿ ದೇಸಾಯಿ ವಸತಿ ಶಾಲೆ ಇವರು ವಹಿಸಿದ್ದರು. ಗಾಂಧೀಜಿಯವರ ರಚನಾತ್ಮಕ ಕಾರ್ಯಗಳು ಬಗ್ಗೆ ಡಾ. ರಮೇಶ್ ಚಂದ್ರ ದತ್ತ ಅವರು ಕನ್ನಡ ವಿಭಾಗದ ಮುಖ್ಯಸ್ಥರು ಸರ್ಕಾರಿ ಪ್ರಥಮದರ್ಜೆ ಕಾಲೇಜು ಬೆಂಗಳೂರು ಇವರು ಉಪನ್ಯಾಸ ನೀಡಿದರು. ಮುಖ್ಯ ಅತಿಥಿಗಳಾಗಿ ಶ್ರೀ. ಎನ್.ಕೆ.ಮೋಹನ್ ಅಧ್ಯಕ್ಷರು, ಕುಶಾಲನಗರ ಹೋಬಳಿ ಕನ್ನಡ ಸಾಹಿತ್ಯ ಪರಿಷತ್ತು ಇವರು ಆಗಮಿಸಿದ್ದರು. ಶ್ರೀ ಡಿ. ಕೆ. ಕೋದಂಡರಾಮು, ಸಹ ಕಾರ್ಯದರ್ಶಿ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಇವರು ಪ್ರಾಸ್ತಾವಿಕ ನುಡಿಗಳನ್ನಾಡಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಬೆಂಗಳೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಕೊಡಗು ಮೊರಾರ್ಜಿ ದೇಸಾಯಿ ವಸತಿ ಶಾಲೆ, ಆಲೂರು ಸಿದ್ಧಾಪುರ, ಸೋಮವಾರಪೇಟೆ ತಾಲ್ಲೂಕು ಇವುಗಳ ಸಂಯುಕ್ತ ಆಶ್ರಯದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆ 2010–2011 ವಿಶೇಷ ಉಪನ್ಯಾಸಮಾಲೆ–14ರ ಕಾರ್ಯಕ್ರಮ ದಿನಾಂಕ: 21–02–2011ನೇ ಸೋಮವಾರ ಬೆಳಿಗ್ಗೆ 1–30ಕ್ಕೆ ಮೊರಾರ್ಜಿ ದೇಸಾಯಿ ವಸತಿ ಶಾಲೆ, ಆಲೂರು ಸಿದ್ಧಾಪುರ ಇಲ್ಲಿ ನಡೆಯಿತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ. ಟಿ.ಪಿ.ರಮೇಶ್ [ಅಧ್ಯಕ್ಷರು, ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು] ಇವರು ನಡೆಸಿಕೊಟ್ಟರು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಕೆ. ವಿ. ಸುರೇಶ್ [ಪ್ರಾಂಶುಪಾಲರು, ಮೊರಾರ್ಜಿದೇಸಾಯಿ ವಸತಿ ಶಾಲೆ] ಇವರು ವಹಿಸಿದ್ದರು. ಗಾಂಧೀಜಿಯವರ ರಚನಾತ್ಮಕ ಕಾರ್ಯಗಳ ಬಗ್ಗೆ ಡಾ. ರಮೇಶ್ ಚಂದ್ರ ದತ್ತ ಅವರು [ಕನ್ನಡ ವಿಭಾಗದ ಮುಖ್ಯಸ್ಥರು, ಸರ್ಕಾರಿ ಪ್ರಥಮದರ್ಜೆ ಕಾಲೇಜು ಬೆಂಗಳೂರು ಇವರು ಉಪನ್ಯಾಸ ನೀಡಿದರು. ಮುಖ್ಯ ಅತಿಥಿಗಳಾಗಿ ಶ್ರೀ ಎನ್. ಕೆ. ಮೋಹನ್ [ಅಧ್ಯಕ್ಷರು ಕುಶಾಲನಗರ ಹೋಬಳಿ ಕನ್ನಡ ಸಾಹಿತ್ಯ ಪರಿಷತ್ತು ಆಗಮಿಸಿದ್ದರು. ಶ್ರೀ ಡಿ. ಕೆ. ಕೋದಂಡರಾಮು [ಸಹ ಕಾರ್ಯದರ್ಶಿ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ] ಪ್ರಾಸ್ತಾವಿಕ ನುಡಿಗಳನ್ನಾಡಿದರು. ಈ ಕಾರ್ಯಕ್ರಮದ



ಅಂಗವಾಗಿ ಗಾಂಧೀ ಸಾಹಿತ್ಯ ಮಾರಾಟ ಹಾಗೂ ಮಹಾತ್ಮಗಾಂಧೀ ಕುರಿತು ಕಿರುಚಿತ್ರ ಪ್ರದರ್ಶನ ಏರ್ಪಡಿಸಲಾಗಿತ್ತು. ಬಿ. ಎ. ಷಂಷುದ್ದೀನ್, ಭಾರತೀರಮೇಶ್ (ಗೌ॥ ಕಾರ್ಯದರ್ಶಿ) ಆಲೂರು ಸಿದ್ದಾಪುರ ಪಾಸ್ಕಲ್ ಡಿಸೋಜ (ಗೌ॥ ಕೋಶಾಧ್ಯಕ್ಷರು) ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಇವರು ಉಪಸ್ಥಿತರಿದ್ದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಗಾಂಧೀಭವನ, ಕುಮಾರಪಾರ್ಕ್ ಪೂರ್ವ, ಬೆಂಗಳೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಕೋಲಾರ ಜನತಾ ಪ್ರೌಢಶಾಲೆ, ಕೆಂಬೋಡಿ ಕೋಲಾರ ತಾಲ್ಲೂಕು ಇವುಗಳ ಸಂಯುಕ್ತ ಆಶ್ರಯದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆ 2010–2011 ವಿಶೇಷ ಉಪನ್ಯಾಸಮಾಲೆ–15ರ ಕಾರ್ಯಕ್ರಮ ದಿನಾಂಕ: 9–03–2011ನೇ ಬುಧವಾರ ಬೆಳಿಗ್ಗೆ 10–00ಕ್ಕೆ ಜನತಾ ಪ್ರೌಢಶಾಲೆ, ಕೆಂಬೋಡಿ ಕೋಲಾರ ಇಲ್ಲಿ ನಡೆಯಿತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಡಾ.ಹೊ.ಶ್ರೀನಿವಾಸಯ್ಯ ಅವರು (ಅಧ್ಯಕ್ಷರು, ಕರ್ನಾಟಕ ಗಾಂಧೀ ಸ್ಮಾರಕ ನಿಧಿ) ನೆರವೇರಿಸಿದರು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಬಿಸ್ತಪ್ಪ ಗೌಡ ಅವರು [ನ್ಯಾಯವಾದಿಗಳು, ಹಾಗೂ ನೋಟರಿ ಕೋಲಾರ ಇವರು ವಹಿಸಿದ್ದರು. "ಸರ್ವೋದಯ ಯುಗಮಂತ್ರ" ಎಂಬ ವಿಷಯ ಕುರಿತು ಡಾ; ಹೆಚ್.ಎಸ್. ದೊರೆಸ್ವಾಮಿ ಅವರು [ಹಿರಿಯ ಸ್ವಾತಂತ್ರ್ಯ ಹೋರಾಟಗಾರರು]ಇವರು ಮಾತನಾಡಿದರು. ಶ್ರೀ. ಪ್ರಹಲ್ಲಾದರಾವ್ [ಅಧ್ಯಕ್ಷರು, ಜಿಲ್ಲಾ ಸಾಹಿತ್ಯ ಪರಿಷತ್ತು, ಕೋಲಾರ] ಇವರು ಈ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಪ್ರೊ. ಹೆಚ್.ಆರ್.ದಾಸೇಗೌಡ [ಕಾರ್ಯದರ್ಶಿ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಇವರು ಪ್ರಾಸ್ತಾವಿಕ ನುಡಿಗಳನ್ನಾಡಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ,ಗಾಂಧೀಭವನ ಕುಮಾರಪಾರ್ಕ್ ಪೂರ್ವ ಬೆಂಗಳೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಉಡುಪಿ ಗಾಂಧೀ ಅಧ್ಯಯನ ಕೇಂದ್ರ ಎಂ ಜಿ ಎಂ ಕಾಲೇಜು ಉಡುಪಿ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ ಅಕಾಡೆಮಿ ಆಫ್ ಜನರಲ್ ಎಜುಕೇಷನ್ ಮಣಿಪಾಲ್ ಇವುಗಳ ಸಂಯುಕ್ತ ಆಶ್ರಯದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆ 2010–2011 ವಿಶೇಷ ಉಪನ್ಯಾಸಮಾಲೆ–16 ರ ಕಾರ್ಯಕ್ರಮ ದಿನಾಂಕ: 12–03–2011ನೇ ಶನಿವಾರ ಬೆಳಿಗ್ಗೆ 10–00ಕ್ಕೆ ಉಡುಪಿಯ ಎಂ ಜಿ ಎಂ ಕಾಲೇಜಿನ ರವೀಂದ್ರ ಮಂಟಪದಲ್ಲಿ ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮದ = ಉದ್ಘಾಟನೆಯನ್ನು ಡಾ. ಹೆಚ್. ಶಾಂತರಾಮು ಆಡಳಿತಾಧಿಕಾರಿಗಳು, ಅಕಾಡೆಮಿ ಆಫ್ ಜನರಲ್ ಎಜುಕೇಷನ್ ಮಣಿಪಾಲ್] ಇವರು ವಹಿಸಿದ್ದರು. ಅಧ್ಯಕ್ಷತೆಯನ್ನು ಶ್ರೀ ಸಚ್ಚಿದಾನಂದ ಹೆಗಡೆ ಅವರು [ಅಧ್ಯಕ್ಷರು, ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ] ಇವರು ವಹಿಸಿದ್ದರು. ಡಾ. ಜೆ. ಎಸ್. ಪಾಟೀಲ ಕುಲಪತಿಗಳು, ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ಹುಬ್ಬಳ್ಳಿ ಇವರು 21ನೇ ಶತಮಾನಕ್ಕೆ ಗಾಂಧೀಜಿಯವರ ಪ್ರಸ್ತುತತೆ ಕುರಿತು ಭಾಷಣ ಮಾಡಿದರು. ಮುಖ್ಯ ಅತಿಥಿಗಳಾಗಿ ಡಾ. ಹೊ. ಶ್ರೀನಿವಾಸಯ್ಯ, ಅಧ್ಯಕ್ಷರು, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಇವರು ಉಪಸ್ಥಿತರಿದ್ದರು ಪ್ರೊ. ಹೆಚ್. ಆರ್. ದಾಸೇಗೌಡ, ಕಾರ್ಯದರ್ಶಿ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಇವರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ಶ್ರೀ ವೆಂಕಟರಮಣ ಗೌಡ, ಶ್ರೀ ಹೆರಂಜೆ ಕೃಷ್ಣ ಭಟ್ಟ, ಶ್ರೀ ಅಂಬಿಕಾತನಯ ಮುದ್ರಾಡಿ, ಶ್ರೀ ಸತೀಶ್ ಯು ಪೈ, ಡಿ. ಕೆ. ಕೋದಂಡರಾಮು, ಸಹಕಾರ್ಯದರ್ಶಿ ಉಪಸ್ಥಿತರಿದ್ದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಗಾಂಧೀಭವನ, ಕುಮಾರಾ ಪಾರ್ಕ್ ಪೂರ್ವ, ಬೆಂಗಳೂರು–1ಹಾಗೂ ಜಿಲ್ಲಾಡಳಿತ ಚಿಕ್ಕಮಗಳೂರು, ಕರ್ನಾಟಕ ಸರ್ಕಾರ ಇವುಗಳ ಸಂಯುಕ್ತ ಆಶ್ರಯದಲ್ಲಿಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ಅಚರಣೆ 2010–2011 ಹಾಗೂ ಚಿಕ್ಕಮಗಳೂರು ಜಿಲ್ಲಾ ಸಮಾವೇಶ–19 ದಿನಾಂಕ: 28–3–2011ನೇ ಸೋಮವಾರ ಬೆಳಿಗ್ಗೆ 10–00ಕ್ಕೆ ಕುವೆಂಪು ಕಲಾ ಮಂದಿರ ಚಿಕ್ಕಮಗಳೂರು ನಗರ ಇಲ್ಲಿ ಜರುಗಿತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಸಿ ಟಿ ರವಿ ಅವರು ಶಾಸಕರು ಚಿಕ್ಕಮಗಳೂರು ವಿಧಾನ ಸಭಾಕ್ಷೇತ್ರ ನೆರವೇರಿಸಿದರು. ಶ್ರೀಮತಿ ಗಾಯಿತ್ರಿ ಶಾಂತೇಗೌಡ



ವಿಧಾನ ಪರಿಷತ್ ಸದಸ್ಯರು ಉಪಸ್ಥಿತಿರಿದ್ದರು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಡಾ. ಎನ್. ಎಸ್. ಚೆನ್ನಪ್ಪಗೌಡ, ಐ.ಎ.ಎಸ್. ಜಿಲ್ಲಾಧಿಕಾರಿಗಳು ಚಿಕ್ಕಮಗಳೂರು ಜಿಲ್ಲೆ ಇವರು ವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಡಾ: ಹೊ ಶ್ರೀನಿವಾಸಯ್ಯ ಅಧ್ಯಕ್ಷರು ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಮತ್ತು ಡಾ: ಎಚ್ ಎಸ್ ದೊರೆಸ್ವಾಮಿ ಹಿರಿಯ ಸ್ವಾತಂತ್ರ್ಯ ಹೋರಾಟಗಾರರು 21ನೇ ಶತಮಾನದಲ್ಲಿ ಮಹಾತ್ಮಗಾಂಧೀಜಿಯವರ ಪ್ರಸ್ತುತತೆ ಬಗೆಗೆ ಉಪನ್ಯಾಸ ನೀಡಿದರು. ಪ್ರಾಸ್ತಾವಿಕ ನುಡಿಯನ್ನು ಪ್ರೊ. ಹೆಚ್.ಆರ್.ದಾಸೇಗೌಡ ಅವರು ಕಾರ್ಯದರ್ಶಿ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಇವರು ನುಡಿದರು. ಈ ಜಿಲ್ಲಾ ಸಮಾವೇಶ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಎಂ ಆರ್ ರಾಮಣ್ಣ ಅವರು ಮುಖ್ಯ ಕರ್ತವ್ಯ ನಿರ್ವಹಣಾಧಿಕಾರಿಗಳು ಚಿಕ್ಕಮಗಳೂರು ಜಿಲ್ಲಾ ಪಂಚಾಯಿತಿ ಜಿಲ್ಲಾಡಳಿತ ಹಾಗೂ ಜಿಲ್ಲಾಪರಿಷತ್ತು ಚಿಕ್ಕಮಗಳೂರು ಜಿಲ್ಲೆ ಇವರು ವಹಿಸಿದ್ದರು. ಡಿ. ಕೆ ಕೋದಂಡರಾಮು ಸಹ ಕಾರ್ಯದರ್ಶಿ, ಕ.ಗಾ.ಸ್ಮಾ.ನಿ. ಉಪಸ್ಥಿರಿದ್ದರು.ಮತ್ತು ಚಿಕ್ಕಮಗಳೂರಿನ ಗಣ್ಯರು ಉಪಸ್ಥಿತರಿದ್ದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಬೆಂಗಳೂರು ಶ್ರೀ ಕೊಂಗಾಡಿಯಪ್ಪ ಕಾಲೇಜು ದೊಡ್ಡಬಳ್ಳಾಪುರ ಇವುಗಳ ಸಂಯುಕ್ತ ಆಶ್ರಯದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆ 2010-2011 ದೊಡ್ಡಬಳ್ಳಾಪುರ ಜಿಲ್ಲಾ ಸಮಾವೇಶ ವಿಶೇಷ ಉಪನ್ಯಾಸಮಾಲೆ-11 ರ ಕಾರ್ಯಕ್ರಮವನ್ನು ದಿನಾಂಕ: 3-2-2011ನೇ ಬೆಳಿಗ್ಗೆ 11-00 ಗಂಟೆಗೆ ಶ್ರೀ.ಕೊಂಗಾಡಿಯಪ್ಪ ಕಾಲೇಜು ದೊಡ್ಡಬಳ್ಳಾಪುರ ಇಲ್ಲಿ ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಪ್ರೊ. ಎಸ್. ವಿ. ಸುಬ್ರಮಣ್ಯಂ ಪ್ರಾಂಶುಪಾಲರು, ಶ್ರೀ ಕೊಂಗಾಡಿಯಪ್ಪ ಕಾಲೇಜು ದೊಡ್ಡಬಳ್ಳಾಪುರ ಇವರು ವಹಿಸಿದ್ದರು. ಈ ಕಾರ್ಯಕ್ರಮದ ಅಂಗವಾಗಿ ಸರ್ವೋದಯ ಯುಗಮಂತ್ರ ಎಂಬ ವಿಷಯ ಕುರಿತು ಡಾ; ಹೆಚ್.ಎಸ್. ದೊರೆಸ್ವಾಮಿ ಅವರು ಹಿರಿಯ ಸ್ವಾತಂತ್ರ್ಯ ಹೋರಾಟಗಾರರು ಉಪನ್ಯಾಸ ನೀಡಿದರು. .ಮತ್ತು ಎಸ್. ನಾರಾಯಣನ್ ಅವರು ಮುಖ್ಯಸ್ಥರು, ಇಂಗ್ಲೀಷ್ ವಿಭಾಗ, ಕೊಂಗಾಡಿಯಪ್ಪ ಕಾಲೇಜು ದೊಡ್ಡಬಳ್ಳಾಪುರ ಇವರು ಸಹ ಇದೇ ವಿಷಯವನ್ನು ಕುರಿತು ಮಾತನಾಡಿದರು. ಮುಖ್ಯ ಅತಿಥಿಗಳಾಗಿ ಡಾ: ಹೊ ಶ್ರೀನಿವಾಸಯ್ಯ ನವರು ಅಧ್ಯಕ್ಷರು, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಇವರು ಉಪಸ್ಥಿತರಿದ್ದರು. ಪ್ರೊ ಹೆಚ್ ಆರ್ ದಾಸೇಗೌಡ ಅವರು ಕಾರ್ಯದರ್ಶಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಪ್ರಾಸ್ತಾವಿಕ ಮಾತುಗಳನ್ನಾಡಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಬೆಂಗಳೂರು ಜೆ.ಎಸ್.ಎಸ್. ಪ್ರಥಮ ದರ್ಜೆ ಮಹಿಳಾ ಕಾಲೇಜು ಚಾಮರಾಜನಗರ ಇವುಗಳ ಸಂಯುಕ್ತ ಆಶ್ರಯದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆ 2010-2011 ಚಾಮರಾಜನಗರ ಜಿಲ್ಲಾ ಸಮಾವೇಶ ವಿಶೇಷ ಉಪನ್ಯಾಸಮಾಲೆ-12 ಕಾರ್ಯಕ್ರಮ ದಿನಾಂಕ: 11-02-2011ನೇ ಶುಕ್ರವಾರ ಬೆಳಿಗ್ಗೆ 10-30ಕ್ಕೆ ಜೆ.ಎಸ್.ಎಸ್. ಪ್ರಥಮ ದರ್ಜೆ ಕಾಲೇಜು ಚಾಮರಾಜನಗರ ಇಲ್ಲಿ ಜರುಗಿತು. ಅಧ್ಯಕ್ಷತೆಯನ್ನು ಪ್ರೊ. ಎಂ.ಡಿ. ಪುಷ್ಪಾವತಿ ಪ್ರಾಂಶುಪಾಲರು, ಜೆ.ಎಸ್.ಎಸ್.ಮಹಿಳಾ ಪ್ರಥಮ ದರ್ಜೆ ಕಾಲೇಜು ಇವರು ವಹಿಸಿದ್ದರು. ಸರ್ವೋದಯ ಯುಗಮಂತ್ರ ಕುರಿತು ಮಾನ್ಯಶ್ರೀ ಲ.ನರಸಿಂಹಯ್ಯ ಅವರು ಕಾರ್ಯದರ್ಶಿಗಳು, ಕರ್ನಾಟಕ ಸರ್ವೋದಯ ಮಂಡಲಿ ಹಾಗೂ ಸದಸ್ಯರು ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಇವರು ಉಪನ್ಯಾಸ ನೀಡಿದರು. ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸಹ ಕಾರ್ಯದರ್ಶಿ ಡಿ ಕೆ ಕೋಂಡಂಡರಾಮು ಪ್ರಾಸ್ತವಿಕ ನುಡಿಗಳನ್ನಾಡಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಬೆಂಗಳೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಕೊಡಗು, ಮೊರಾರ್ಜಿ ದೇಸಾಯಿ ವಸತಿ ಶಾಲೆ, ಬಸವನಹಳ್ಳಿ ಕುಶಾಲನಗರ, ಕೊಡಗು ಜಿಲ್ಲೆ ಇವುಗಳ ಸಂಯುಕ್ತ ಆಶ್ರಯದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆ 2010-2011. ವಿಶೇಷ ಉಪನ್ಯಾಸಮಾಲೆ-13ರ ಕಾರ್ಯಕ್ರಮ ದಿನಾಂಕ: 21-02-2011ನೇ ಸೋಮವಾರ ಬೆಳಿಗ್ಗೆ 10-30ಕ್ಕೆ ಮೊರಾರ್ಜಿ ದೇಸಾಯಿ ವಸತಿ ಶಾಲೆ, ಬಸವನಹಳ್ಳಿ ಕುಶಾಲನಗರ ಇಲ್ಲಿ ಜರುಗಿತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ. ಟಿ.ಪಿ.ರಮೇಶ್ ಅಧ್ಯಕ್ಷರು,



ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಇವರು ನೆರವೇರಿಸಿದರು. ಅಧ್ಯಕ್ಷತೆಯನ್ನು ಶ್ರೀ.ಕೆ.ವಿ.ಸುರೇಶ್ ಪ್ರಾಂಶುಪಾಲರು ಮೊರಾರ್ಜಿ ದೇಸಾಯಿ ವಸತಿ ಶಾಲೆ ಇವರು ವಹಿಸಿದ್ದರು. ಗಾಂಧೀಜಿಯವರ ರಚನಾತ್ಮಕ ಕಾರ್ಯಗಳು ಬಗ್ಗೆ ಡಾ. ರಮೇಶ್ ಚಂದ್ರ ದತ್ತ ಅವರು ಕನ್ನಡ ವಿಭಾಗದ ಮುಖ್ಯಸ್ಥರು ಸರ್ಕಾರಿ ಪ್ರಥಮದರ್ಜೆ ಕಾಲೇಜು ಬೆಂಗಳೂರು ಇವರು ಉಪನ್ಯಾಸ ನೀಡಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಬೆಂಗಳೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಕೊಡಗು ಮೊರಾರ್ಜಿ ದೇಸಾಯಿ ವಸತಿ ಶಾಲೆ, ಆಲೂರು ಸಿದ್ದಾಪುರ, ಸೋಮವಾರಪೇಟೆ ತಾಲ್ಲೂಕು ಇವುಗಳ ಸಂಯುಕ್ತ ಆಶ್ರಯದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆ 2010–2011 ವಿಶೇಷ ಉಪನ್ಯಾಸಮಾಲೆ–14ರ ಕಾರ್ಯಕ್ರಮ ದಿನಾಂಕ: 21–02–2011ನೇ ಸೋಮವಾರ ಬೆಳಿಗ್ಗೆ 1–30ಕ್ಕೆ ಮೊರಾರ್ಜಿ ದೇಸಾಯಿ ವಸತಿ ಶಾಲೆ, ಆಲೂರು ಸಿದ್ದಾಪುರ ಇಲ್ಲಿ ನಡೆಯಿತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಟಿ. ಪಿ. ರಮೇಶ್ [ಅಧ್ಯಕ್ಷರು, ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು] ಇವರು ನಡೆಸಿಕೊಟ್ಟರು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಕೆ. ವಿ. ಸುರೇಶ್ [ಪ್ರಾಂಶುಪಾಲರು, ಮೊರಾರ್ಜಿ ದೇಸಾಯಿ ವಸತಿ ಶಾಲೆ] ಇವರು ವಹಿಸಿದ್ದರು. ಗಾಂಧೀಜಿಯವರ ರಚನಾತ್ಮಕ ಕಾರ್ಯಗಳ ಬಗ್ಗೆ ಡಾ. ರಮೇಶ್ ಚಂದ್ರ ದತ್ತ ಅವರು ಕನ್ನಡ ವಿಭಾಗದ ಮುಖ್ಯಸ್ಥರು, ಸರ್ಕಾರಿ ಪ್ರಥಮದರ್ಜೆ ಕಾಲೇಜು ಬೆಂಗಳೂರು ಇವರು ಉಪನ್ಯಾಸ ನೀಡಿದ್ದರು.ಮುಖ್ಯ ಅತಿಥಿಗಳಾಗಿ ಶ್ರೀ ಎನ್. ಕೆ. ಮೋಹನ್, ಅಧ್ಯಕ್ಷರು ಕುಶಾಲನಗರ ಹೋಬಳಿ ಕನ್ನಡ ಸಾಹಿತ್ಯ ಪರಿಷತ್ತು ಇವರು ಆಗಮಿಸಿದ್ದರು. ಶ್ರೀ.ಡಿ.ಕೆ.ಕೋದಂಡರಾಮು ಸಹ ಕಾರ್ಯದರ್ಶಿ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಪ್ರಾಸ್ತಾವಿಕ ನುಡಿಗಳನ್ನಾಡಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ,ಗಾಂಧೀಭವನ ಕುಮಾರಪಾರ್ಕ್ ಪೂರ್ವ ಬೆಂಗಳೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಕೋಲಾರ ಜನತಾ ಪ್ರೌಢಶಾಲೆ. ಕೆಂಬೋಡಿ ಕೋಲಾರ ತಾಲ್ಲೂಕು ಇವುಗಳ ಸಂಯುಕ್ತ ಆಶ್ರಯದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆ 2010–2011 ವಿಶೇಷ ಉಪನ್ಯಾಸಮಾಲೆ–15ರ ಕಾರ್ಯಕ್ರಮ ದಿನಾಂಕ 9–03–2011ನೇ ಬುಧವಾರ ಬೆಳಿಗ್ಗೆ 10–00ಕ್ಕೆ ಜನತಾ ಪ್ರೌಢಶಾಲೆ ಕೆಂಬೋಡಿ ಕೋಲಾರ ಇಲ್ಲಿ ನಡೆಯಿತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಡಾ. ಹೊ. ಶ್ರೀನಿವಾಸಯ್ಯ [ಅಧ್ಯಕ್ಷರು, ಕರ್ನಾಟಕ ಗಾಂಧೀ ಸ್ಮಾರಕ ನಿಧಿ] ನೆರವೇರಿಸಿದರು.. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಬಿಸ್ತಪ್ಪಗೌಡ ಅವರು [ನ್ಯಾಯವಾದಿಗಳು, ಹಾಗೂ ನೋಟರಿ ಕೋಲಾರ ಇವರು ವಹಿಸಿದ್ದರು. "ಸರ್ವೋದಯ ಯುಗಮಂತ್ರ" ಎಂಬ ವಿಷಯ ಕುರಿತು ಡಾ; ಹೆಚ್.ಎಸ್. ದೊರೆಸ್ವಾಮಿ ಅವರು [ಹಿರಿಯ ಸ್ವಾತಂತ್ರ್ಯ ಹೋರಾಟಗಾರರು] ಮಾತನಾಡಿದರು. ಪ್ರೊ. ಹೆಚ್. ಆರ್. ದಾಸೇಗೌಡ [ಕಾರ್ಯದರ್ಶಿ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಇವರು ಪ್ರಾಸ್ತಾವಿಕ ನುಡಿಗಳನ್ನಾಡಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಗಾಂಧೀಭವನ ಕುಮಾರಪಾರ್ಕ್ ಪೂರ್ವ ಬೆಂಗಳೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಉಡುಪಿ ಗಾಂಧೀ ಅಧ್ಯಯನ ಕೇಂದ್ರ ಎಂ ಜಿ ಎಂ ಕಾಲೇಜು ಉಡುಪಿ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ ಅಕಾಡೆಮಿ ಆಫ್ ಜನರಲ್ ಎಜುಕೇಷನ್ ಮಣಿಪಾಲ್ ಇವುಗಳ ಸಂಯುಕ್ತ ಆಶ್ರಯದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ವರ್ಷಾಚರಣೆ 2010–2011 ವಿಶೇಷ ಉಪನ್ಯಾಸಮಾಲೆ–16 ರ ಕಾರ್ಯಕ್ರಮ ದಿನಾಂಕ: 12–03–2011ನೇ ಶನಿವಾರ ಬೆಳಿಗ್ಗೆ 10–00ಕ್ಕೆ ಉಡುಪಿಯ ಎಂ.ಜಿ.ಎಂ. ಕಾಲೇಜಿನ ರವೀಂದ್ರ ಮಂಟಪದಲ್ಲಿ ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಡಾ. ಹೆಚ್. ಶಾಂತರಾಮು [ಆಡಳಿತಾಧಿಕಾರಿಗಳು, ಅಕಾಡೆಮಿ ಆಫ್ ಜನರಲ್ ಎಜುಕೇಷನ್ ಮಣಿಪಾಲ್] ಇವರು ನಡೆಸಿಕೊಟ್ಟರು. ಅಧ್ಯಕ್ಷತೆ ಶ್ರೀ.ಸಚ್ಚಿದಾನಂದ ಹೆಗಡೆ ಅವರು [ಅಧ್ಯಕ್ಷರು, ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ] ಇವರು ವಹಿಸಿದ್ದರು. ಮುಖ್ಯ ಭಾಷಣಕಾರರಾಗಿ ಡಾ. ಜೆ.ಎಸ್.ಪಾಟೀಲ [ಕುಲಪತಿಗಳು, ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ಹುಬ್ಬಳ್ಳಿ ಇವರು 21ನೇ ಶತಮಾನಕ್ಕೆ ಗಾಂಧೀಜಿಯವರ ಪ್ರಸ್ತುತತೆ ಕುರಿತು ಭಾಷಣ ಮಾಡಿದರು. ಮುಖ್ಯ ಅತಿಥಿಗಳಾಗಿ



ಡಾ.ಹೊ.ಶ್ರೀನಿವಾಸಯ್ಯ [ಅಧ್ಯಕ್ಷರು, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಇವರು ಉಪಸ್ಥಿತರಿದ್ದರು. ಪ್ರೊ. ಹೆಚ್. ಆರ್. ದಾಸೇಗೌಡ [ಕಾರ್ಯದರ್ಶಿ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಇವರು ಪ್ರಾಸ್ತಾವಿಕ ನುಡಿಗಳನ್ನಾಡಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಗಾಂಧೀಭವನ, ಕುಮಾರಾ ಪಾರ್ಕ್ ಪೂರ್ವ, ಬೆಂಗಳೂರು-1 ಹಾಗೂ ಜಿಲ್ಲಾಡಳಿತ ಚಿಕ್ಕಮಗಳೂರು, ಕರ್ನಾಟಕ ಸರ್ಕಾರ ಇವುಗಳ ಸಂಯುಕ್ತ ಆಶ್ರಯದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸುವರ್ಣ ಮಹೋತ್ಸವ ಅಚರಣೆ 2010-2011 ಹಾಗೂ ಚಿಕ್ಕಮಗಳೂರು ಜಿಲ್ಲಾ ಸಮಾವೇಶ-19 ದಿನಾಂಕ 28-3-2011ನೇ ಸೋಮವಾರ ಬೆಳಿಗ್ಗೆ 10-00ಕ್ಕೆ ಸ್ಥಳ: ಕುವೆಂಪು ಕಲಾ ಮಂದಿರ ಚಿಕ್ಕಮಗಳೂರು ನಗರ, ಉದ್ಘಾಟನೆ ಶ್ರೀ ಸಿ.ಟಿ. ರವಿ, ಶಾಸಕರು, ಚಿಕ್ಕಮಗಳೂರು ವಿದಾನ ಸಭಾಕ್ಷೇತ್ರ ಉಪಸ್ಥಿತಿ : ಶ್ರೀಮತಿ ಗಾಯಿತ್ರಿ ಶಾಂತೆಗೌಡ, ವಿಧಾನ ಪರಿಷತ್ ಸದಸ್ಯರು, ಅಧ್ಯಕ್ಷತೆ : ಡಾ. ಎನ್. ಎಸ್. ಚೆನ್ನಪ್ಪಗೌಡ, ಐ.ಎ.ಎಸ್. ಜಿಲ್ಲಾಧಿಕಾರಿಗಳು ಚಿಕ್ಕಮಗಳೂರು ಜಿಲ್ಲೆ, ಉಪನ್ಯಾಸಕರು : ಡಾ. ಹೊ. ಶ್ರೀನಿವಾಸಯ್ಯ, ಅಧ್ಯಕ್ಷರು ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಡಾ. ಎಚ್. ಎಸ್. ದೊರೆಸ್ವಾಮಿ, ಹಿರಿಯ ಸ್ವಾತಂತ್ರ್ಯ ಹೋರಾಟಗಾರರು ವಿಷಯ : 21ನೇ ಶತಮಾನದಲ್ಲಿ ಮಹಾತ್ಮಗಾಂಧೀಜಿಯವರ ಪ್ರಸ್ತುತತೆ ಪ್ರಾಸ್ತಾವಿಕ ನುಡಿ: ಪ್ರೊ. ಹೆಚ್. ಆರ್. ದಾಸೇಗೌಡ ಅವರು [ಕಾರ್ಯದರ್ಶಿ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ] ಜಿಲ್ಲಾ ಸಮಾವೇಶ ಸಮಾರೋಪ ಸಮಾರಂಭದ ಅಧ್ಯಕ್ಷತೆ : ಶ್ರೀ ಎಂ ಆರ್ ರಾಮಣ್ಣ, ಮುಖ್ಯ ಕರ್ತವ್ಯ ನಿರ್ವಹಣಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲಾ ಪಂಚಾಯಿತಿ ಜಿಲ್ಲಾಡಳಿತ ಹಾಗೂ ಜಿಲ್ಲಾಪರಿಷತ್ತು ಚಿಕ್ಕಮಗಳೂರು ಜಿಲ್ಲೆ, ಡಿ. ಕೆ. ಕೋದಂಡರಾಮು, ಸಹ ಕಾರ್ಯದರ್ಶಿ ಕ.ಗಾ.ಸ್ಮಾ.ನಿ. ಉಪಸ್ಥಿತರಿದ್ದರು.

ದಿನಾಂಕ 14-4-2011 ರಂದು ಸುವರ್ಣ ಮಹೋತ್ಸವ ಕಾರ್ಯಕ್ರಮದ ಅಂಗವಾಗಿ ಚಿತ್ರದುರ್ಗ ಜಿಲ್ಲಾ ಸಮಾವೇಶ ಹಾಗು ಸಂವಿದಾನ ಶಿಲ್ಪಿ ಡಾ: ಬಿ ಆರ್ ಅಂಬೇಡ್ಕರ್ ಜಯಂತ್ಯುತ್ಸವವನ್ನು ಚಿತ್ರದುರ್ಗದ ಸರಸ್ವತಿ ಕಾನೂನು ಕಾಲೇಜು ಆವರಣದಲ್ಲಿ ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಮಾಜಿ ರಾಜ್ಯ ಸಭಾ ಸದಸ್ಯರು ಹಾಗೂ ಮಾಜಿ ರೇಷ್ಮೆ ಮಂಡಳಿ ಅಧ್ಯಕ್ಷರು ಆಗಿದ್ದ ಶ್ರೀ ಹೆಚ್ ಹನುಮಂತಪ್ಪನವರು ವಹಿಸಿದ್ದರು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಕರ್ನಾಟಕ ರಾಜ್ಯದ ಕಾನೂನು ವಿಶ್ವವಿದ್ಯಾಲಯದ ಉಪಕುಲಪತಿಗಳಾದ ಡಾ: ಜೆ ಎಸ್ ಪಾಟೀಲ ಅವರು ನೆರವೇರಿಸಿಕೊಟ್ಟರು. ಗಾಂಧೀಜಿ ಮತ್ತು ಅಂಬೇಡ್ಕರ್ ಅವರ ವಿಚಾರ ಧಾರೆಗಳ ಬಗ್ಗೆ ಶ್ರೀ ಗುರುಪ್ರಸಾದ್ ಅವರು ಉಪನ್ಯಾಸ ನೀಡಿದರು. ಮುಖ್ಯ ಅತಿಥಿಗಳಾಗಿ ನಿಧಿಯ ಅಧ್ಯಕ್ಷರಾದ ಡಾ: ಹೊ ಶ್ರೀನಿವಾಸಯ್ಯನವರು ಉಪಸ್ಥಿತರಿದ್ದರು. ಈ ಕಾಯಕ್ರಮಕ್ಕೆ ವಿಶೇಷ ಆಹ್ವಾನಿತರಾಗಿ ಕರ್ನಾಟಕ ರಾಜ್ಯ ಮದ್ಯಪಾನ ಸಂಯಮಮಂಡಳಿ ಅಧ್ಯಕ್ಷರಾದ ಶ್ರೀ ಸಚ್ಚಿದಾನಂದ ಹೆಗ್ಗಡೆಯವರು ಆಗಮಿಸಿದ್ದರು. ಈ ಕಾರ್ಯಕ್ರಮದ ಪ್ರಾಸ್ತಾವಿಕ ನುಡಿಯನ್ನು ನಿಧಿಯ ಕಾರ್ಯದರ್ಶಿ ಪ್ರೊ ಹೆಚ್ ಆರ್ ದಾಸೇಗೌಡ ಅವರು ನುಡಿದರು. ಕಾರ್ಯಕ್ರಮದಲ್ಲಿ ಕಾನೂನು ಕಾಲೇಜಿನ ವಿದ್ಯಾರ್ಥಿಗಳು ಉಪಸ್ಥಿತರಿದ್ದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಮತ್ತು ಖಾದಿ ಗ್ರಾಮೋದ್ಯೋಗ ಉತ್ಪಾದಕರ ಸಹಕಾರ ಸಂಘ ಹುದಲಿ ಮತ್ತು ಬೆಳಗಾವಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಬೆಳಗಾವಿ, ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ಹುಬ್ಬಳ್ಳಿ ಇವರ ಸಹಕಾರದೊಂದಿಗೆ ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಸುವರ್ಣ ಮಹೋತ್ಸವ ಕಾರ್ಯಕ್ರಮ 2010-11 ಮತ್ತು ಬೆಳಗಾವಿ ಜಿಲ್ಲಾ ಸಮಾವೇಶ ಹಾಗೂ ವಿಶೇಷ ಉಪನ್ಯಾಸಮಾಲೆ 21 ದಿನಾಂಕ 25-4-2011 ರಂದು ಬೆಳಿಗ್ಗೆ 11-00 ಗಂಟೆಗೆ ಕುಮಾರಾ ಗಂಧರ್ವ ರಂಗಮಂದಿರ ಬೆಳಗಾವಿ ಇಲ್ಲಿ ಜರುಗಿತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ನಾಡೋಜ ಪಾಟೀಲ ಪುಟ್ಟಪ್ಪನವರು ಖ್ಯಾತ ಪತ್ರಕರ್ತರು ಇವರು ನೆರವೇರಿಸಿದರು. ಅಧ್ಯಕ್ಷತೆಯನ್ನು ನಿಧಿಯ ಅಧ್ಯಕ್ಷರಾದ ಡಾ: ಹೊ ಶ್ರೀನಿವಾಸಯ್ಯನವರು ವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಹಿರಿಯ ಪತ್ರಕರ್ತರಾದ ಶ್ರೀ ಸರಜೂ ಕಾಟ್ಕರ್ ಮತ್ತು ಶ್ರೀ ಬಸವರಾಜ ಜಗಜಂಪಿ ಅವರು ಗಾಂಧೀ ತತ್ವದ ಬಗೆಗೆ ಉಪನ್ಯಾಸ ನೀಡಿದರು. ಮುಖ್ಯಅತಿಥಿಗಳಾಗಿ ಡಾ. ಜೆ. ಎಸ್. ಪಾಟೀಲ, ಕುಲಪತಿಗಳು, ಕರ್ನಾಟಕ ರಾಜ್ಯ ಕಾನೂನು

